ಕನ್ನಡ ಕಾವ್ಯಮಾಲೆ

# ಮೂಲಾ ನಕ್ಷತ್ರ

ಶೇಷನಾರಾಯಣ



ಮೈಸೂರು
ಕಾವ್ಯಾಲಯ : ಪ್ರಕಾಶಕರು

# ಮುನ್ನುಡಿ

---

ಬಹಳ ದಿನಗಳಿಂದಲೂ ನನಗೆ ಕನ್ನಡದ ಸೇವೆ ಮಾಡಬೇಕೆಂದು ಆಸೆ; ಹಂಬಲ. ಇದರ ಫಲವಾಗಿಯೇ ಈಗ "ಮೂಲಾ ನಕ್ಷತ್ರ" ಹೊರಬಿದ್ದಿದೆ.

ವಾಚಕವೃಂದವು ನೀಡುವ ಪ್ರೋತ್ಸಾಹದಿಂದ ಉತ್ತೇಜಿತನಾಗಿ, ಇನ್ನೂ ಅನೇಕ ಕಾದಂಬರಿಗಳನ್ನು ಕನ್ನಡ ಜನತೆಯ ಮುಂದೆ ಇಡಬೇಕೆಂದು ಆಶಿಸುತ್ತಿದ್ದೇನೆ. ಅವರೆಲ್ಲರ ಆಶೀರ್ವಾದದ ಬಲದಿಂದ ನನ್ನ ಕೋರಿಕೆ ಸಫಲವಾಗಲಿ.

ಕನ್ನಡಿಗರಿಗೆ ಆದಷ್ಟು ಬೇಗ ನನ್ನನ್ನು ಪರಿಚಯ ಮಾಡಿಕೊಡಲು ನೆರವಾದ, ಬೆಳಕಿಗೆ ತರಲು ಪ್ರಯತ್ನಿಸಿದ, ಕಾವ್ಯಾಲಯ ಪ್ರಕಾಶಕರಾದ ಶ್ರೀಮಾನ್ ಕೂಡಲಿ ಚಿದಂಬರಂರವರಿಗೆ ನಾನು ತೀರ ಚಿರಋಣಿಯಾಗಿರುತ್ತೇನೆ; ಅವರಿಗೆ ನನ್ನ ಅನಂತ ಧನ್ಯವಾದಗಳು.

**ಸು. ಶೇಷನಾರಾಯಣ**

# ೧

ವೈಶಾಖಮಾಸ. ಭಾನುದೇವನು ಪೃಥ್ವಿಯನ್ನು ದಹಿಸಲು ಶಪಥಗೈದಿರುವನೋಯೆಂಬಂತೆ ಬಿಸಿಲು ಅತ್ಯುಗ್ರವಾಗಿತ್ತು. ಮೈಸೂರಿನಿಂದ ಪೂರ್ವಾಭಿಮುಖವಾಗಿ ಸಾಗುತಿದ್ದ ರೈಲು ತನ್ನ ನಿರ್ದಿಷ್ಟಸ್ಥಳವನ್ನು ಹೊತ್ತಿಗೆ ಮುಂಚೆಯೇ ಸೇರಬೇಕೆಂಬ ತವಕ ದಿಂದ, ಭರದಿಂದ ಓಡುತಿತ್ತು. ಅಂದು ಚಾಮರಾಜನಗರದ ಬಳಿಯ ಹಳ್ಳಿಯೊಂದರಲ್ಲಿ ಜಾತ್ರೆ. ಪ್ರತಿಯೊಂದು ನಿಲ್ದಾಣ ದಲ್ಲಿಯೂ ಜನಜಂಗುಳಿ ವಿಶೇಷವಾಗಿ ನೆರೆದಿತ್ತು. ನಿಲ್ದಾಣದಲ್ಲಿ ರೈಲು ನಿಲ್ಲುವುದೇ ತಡ. ಕಿಕ್ಕಿರಿದ ಜನಸ್ತೋಮ ಕುರಿಯ ಮಂದೆಗಳಂತೆ ನೂಕುತ್ತ, ನುಗ್ಗುತ್ತ, ಬಂಡಿಯಲ್ಲಿ ಸ್ಥಳ ಸಿಕ್ಕಲ್ಲೆಲ್ಲ ಉತ್ಸಾಹದಿಂದ ಆವರಿಸಿಕೊಳ್ಳುತಿತ್ತು. ಬಿಸಿಲಿನ ತೀಕ್ಷ್ಣತೆ ಯನ್ನು ಸಹ ಲಕ್ಷಿಸದೆ, ದೇವನ ಸಂದರ್ಶನವನ್ನು ಪಡೆಯಲು ಉತ್ಸವಕ್ಕೆ ಅದೆಷ್ಟೊ ಜನ ಧಾರೆಧಾರೆಯಾಗಿ ಬರುತಿದ್ದರು. ಸ್ಥಳದ ಅಭಾವದಿಂದ ರೈಲು ಬಂಡಿಯ ಎರಡೂ ಕಡೆಯ ಮೆಟ್ಟಲುಗಳಲ್ಲಿಯೂ ಯುವಕರ ತಂಡವು ಕೈಪಿಡಿಯನ್ನು ಹಿಡಿದು ಪ್ರಯಾಣಮಾಡುತ್ತಿತ್ತು. ಒಳಗೆ ಹೇಳಬೇಕಾದುದೇ ಇಲ್ಲ. ಸಾಮಾನುಗಳನ್ನು ಇಡಲು ಮೀಸಲಾಗಿರುವ ಮೇಲಿನ ಹಲಗೆ ಯಾದಿಯಾಗಿ ಎಲ್ಲೆಲ್ಲೂ ಜನ ಒಂದಿಷ್ಟು ಸ್ಥಳಬಿಡದೆ, ಪ್ಯಾಕ್ ಮಾಡಿದ ಡಬ್ಬದಂತೆ, ಅಡೆದಿದ್ದರು. ಹೊತ್ತ ಭಾರವನ್ನು ತಡೆಯಲಾರದೆಯೊ ಏನೊ ಉಗಿಬಂಡಿಯು ಸಹ ಅತ್ತಿತ್ತ ಅಲುಗಾಡುತ್ತ, ಮಂದಗತಿಯಿಂದ ಸಾಗುತಿತ್ತು. ಪಾಪ! ಅದೂ ಒಂದು ಪ್ರಾಣಿ. ನೀರಡಿಕೆ, ಹಸಿವು ಅದಕ್ಕೂ ತೀವ್ರ ವಾಗಿದ್ದಿತೆಂದು ಕಾಣುತ್ತದೆ. ಅದು ಗಂಟಲು ಕಟ್ಟಿದವನಂತೆ, ಬಲಹೀನನು ಕೂಗುವಂತೆ, ಕಿರಿಚಿಕೊಳ್ಳುತಿತ್ತು. ಒಳಗೆ ಅಡೆದಿದ್ದ ಜನಸ್ತೋಮದ ಪಾಡನ್ನಂತು ಹೇಳಬೇಕಾದುದೇ ಇಲ್ಲ.

ಪ್ರತ್ಯಕ್ಷ ನರಕವನ್ನು ನಾವಲ್ಲಿ ಕಾಣಬಹುದಾಗಿದ್ದಿತು. ಬಿಸಿಲಿನ ಝಳದೊಂದಿಗೆ, ಪ್ರಯಾಣಿಕರ ಬೀಡಿ, ಚುಟ್ಟಾ, ಹೊಗೆಯೂ ಸೇರಿ, ಅದೊಂದು ಹೊಸ ವಾತಾವರಣವನ್ನು ಉಂಟುಮಾಡಿದ್ದಿತು. ಒಂದು ಕಂಪಾರ್ಟ್‌ಮೆಂಟನಿಂದ ಮತ್ತೊಂದು ಕಂಪಾರ್ಟ್‌ಮೆಂಟಿಗೆ, ಚತುರರಾದ ವ್ಯಾಪಾರಿ ಹುಡುಗರು ಧಾವಿಸಿ, ಸೋಡಾ, ಕಲರ್ ಕ್ರಷ್, ಎಂದು ಕೂಗುತಿದ್ದಾಗ ನೀಲಾಂಬರಿ ರಾಗದಲ್ಲಿ ಅವರು ಹಾಡುತ್ತಿರುವಂತೆ ಭಾಸವಾಗುತಿತ್ತು. ಅವರಿಗೆ ಒಳ್ಳೆಯ ಗಿರಾಕಿ. ಎಡದ ಕೈಯಲ್ಲಿ ಸೀಸೆ ಹಿಡಿದು, ಮುಚ್ಚಳಿನ ತುದಿಗೆ ಕಾರ್ಕ್ ಸೇರಿಸಿ, ಥಬ್ ಎಂದು ಒಡೆದಾಗ, ಮೊದಲು ಕಾಣುವ ಮಂಜಿನಂತಹ ಹೊಗೆ, ಅನಂತರ ಗುಳ್ಳೆ, ಗುಳ್ಳೆ ನಿಂತಮೇಲೆ ಕೆಂಪಗಿನ ಆ ನೀರು— ನೋಡಲು ನೋಟ ಚೆನ್ನಾಗಿಯೇ ಕಾಣುತಿತ್ತು. ಒಳಗೆ ಸೆಕೆ ವಿಪರೀತವಾಗಿದ್ದರೂ ಹರಟೆ ಮಾತ್ರ ನಿಂತಿರಲಿಲ್ಲ, ಜನ ಏನೆಲ್ಲಾ ಮಾತನಾಡುತ್ತಿದ್ದರು. ರಾಜಕೀಯ, ಸಾಮಾಜಿಕ, ಮನೆಮಾತು. ಹೀಗೆ ಎಲ್ಲ ಬಗೆಯ ಮಾತನ್ನೂ ನಾವಲ್ಲಿ ಕೇಳಬಹುದಾಗಿದ್ದಿತು. ಒಟ್ಟಾರೆ ಹೇಳಬಹುದೆಂದರೆ ಅದೇ ಒಂದು ಚಿಕ್ಕವಿಶ್ವ. ಹಾಸನದಿಂದ ಪ್ರಯಾಣ ಗೈದು ಬರುತಿದ್ದ ಶಾಮರಾಯರು ಮಾತ್ರ, ಇದೊಂದಕ್ಕೂ ಲಕ್ಷ್ಯಕೊಡದೆ, ಉತ್ಸಾಹವಿಲ್ಲದವರಂತೆ, ಯಾವುದೋ ಯೋಚನಾತರಂಗದಲ್ಲಿ ಮುಳುಗಿ ಕುಳಿತಿದ್ದರು. ಪಾಪ, ಅವರೇನು ಮಾಡುವರು? ತಮ್ಮ ಏಕ ಮಾತ್ರ ಪುತ್ರಿಗೆ ವರವನ್ನು ಹುಡುಕಿ ಹುಡುಕಿ ಅವರು ಬೇಸತ್ತಿದ್ದರು. ವರ್ಷ ಪೂರಾ ಈ ರೈಲು ಪ್ರಯಾಣದ ಅಲೆದಾಟ ಅವರಿಗೆ ಸಾಕುಮಾಡಿತ್ತು. ಕೀಚ್ ಶಬ್ದಮಾಡುತ್ತ ಚಾಮರಾಜನಗರದ ನಿಲ್ದಾಣದಲ್ಲಿ ರೈಲುನಿಂತಿತು. ಕೈಯಲ್ಲಿನ ದೊಣ್ಣೆಯನ್ನು ಊರಿ ಶಾಮರಾಯರು ಕೆಳಗಿಳಿದರು.

೨

ಪಾಳ್ಯ ಚಿಕ್ಕದೊಂದು ಹಳ್ಳಿ. ಅದು ಚಾಮರಾಜನಗರ ದಿಂದ ದಕ್ಷಿಣಕ್ಕೆ, ಇಪ್ಪತ್ತೆರಡು ಮೈಲಿಗಳ ದೂರದಲ್ಲಿದೆ. ಬ್ರಿಟಿಷರು ಆಳುತಿದ್ದಾಗ, ತಮ್ಮ ದೊರೆಸಾನಿಯರೊಂದಿಗೆ ಬೇಟೆ ಆಡಲು ಅನುಕೂಲವಾಗಿರಲೆಂದು ಪಾಳ್ಯವನ್ನೊಳಕೊಂಡ ಈ ಭಾಗಗಳನ್ನು ಕೊಯಮುತ್ತೂರು ಜಿಲ್ಲಾವಿಗೆ ಸೇರಿಸಿಕೊಂಡರಂತೆ. ಜನಗಳಾಡುವ ಮಾತದು. ಅದೆಷ್ಟರ ಮಟ್ಟಿಗೆ ನಿಜವೊ ನಮಗೆ ತಿಳಿಯದು. ಆದರೆ ಒಂದು ಮಾತ್ರ ದಿಟ. ಈ ಭಾಗಗಳು ಮೈಸೂರು ಪ್ರಾಂತಕ್ಕೇ ಸೇರಿದ್ದಲ್ಲಿ, ಪಕ್ಕದ ನಮ್ಮ ತಮಿಳು ಸೀಮೆಯವರಿಗೆ ಒಂದಿಷ್ಟು ಕಾಡು ಸಿಗುತ್ತಿರಲಿಲ್ಲ. ಆದುದರಿಂದ ನಾವೂ ಈ ಸೇರುವಿಕೆಯನ್ನು ಸ್ವಲ್ಪ ಅನುಮೋದಿಸಬಹುದು. ಇಲ್ಲಿಯ ಕಾಡೆಂದರೆ ಕಾಡು. ಬಿದುರು ಮೆಳೆಗಳು ಆಕಾಶದೆತ್ತರ ಬೆಳೆದು ಕಾಡಿಗೆ ಹೆಚ್ಚಿನ ಶೋಭೆಯನ್ನುಂಟುಮಾಡಿವೆ. ಸುತ್ತಲೂ ಬೆಟ್ಟಗಳು ಕೋಟೆ ಕಟ್ಟಿದಂತೆ ನಿಂತಿವೆ. ಆನೆಗಳ ತವರು ಮನೆ ಇದು. ದುಷ್ಟ ಪ್ರಾಣಿಗಳು ಸರ್ವಕಾಲದಲ್ಲಿಯೂ ಇಲ್ಲಿ ನೆಲೆ ಯಾಗಿಯೇ ನಿಂತಿವೆ. ನೀರಿನ ಝರಿಗಳು ಉದ್ದಕ್ಕೂ ಹರಿ ಯುತ್ತ ಗುಳುಗುಳು ಎಂದು ಶಬ್ದಗೈಯುತ್ತಿವೆ. ಎತ್ತ ನೋಡಿ ದರೂ ಹಚ್ಚ ಹಸುರೇ. ಇಲ್ಲಿನ ಪ್ರಕೃತಿಯ ರಮ್ಯವಾದ ನೋಟ ಎಂಥವರಿಗೂ ಮನಸ್ಸಿಗೆ ಆಹ್ಲಾದವನ್ನುಂಟು ಮಾಡದೆ ಇರದು. ದಾರಿಯ ಇಕ್ಕಡೆಗಳಲ್ಲಿಯೂ ಬೆಳೆದು ನಿಂತಿರುವ, ಉದ್ದುದ್ದ ಮರಗಳ ಮೇಲೆ, ಗೂಡು ಕಟ್ಟಿಕೊಂಡು ವಾಸಮಾಡುವ ಪಕ್ಷಿಗಳ ತಂಡದ ಚಿಲಿಪಿಲಿ ಶಬ್ದವೂ, ಕೋಗಿಲೆಗಳ ಚಿಕವೊ ಕೂಗೂ ಹೊರಗಿನಿಂದ ಬರುವವರಿಗೆ ಸ್ವಾಗತವನ್ನು ನೀಡುವಂತೆ ತೋರು ತ್ತವೆ. ಇಷ್ಟಾದರೂ ಇಲ್ಲಿ ಪ್ರಯಾಣ ಸೌಲಭ್ಯವಿಲ್ಲ. ರಸ್ತೆಯ ಮುಖವನ್ನು ಇಲ್ಲಿಯ ಜನ ಕಂಡರಿಯರು. ಬೆಳಗ್ಗೆ ತಂಗಳುಂಡು,

ಬುತ್ತಿ ಕಟ್ಟಿ ಹೊರಟರೆ, ಮೂರಾಳುದ್ದ ಹೊತ್ತಿರುವಾಗಲೇ, ಚಾಮರಾಜನಗರ ಸೇರುವರು. ತಮಗೆ ಅಗತ್ಯವಾದ ಜೀನಿ ದಿನಸುಗಳನ್ನು ಕೊಂಡು, ಮಾರನೆಯ ದಿನ ಹಿಂದಿರುಗುವುದು ಅವರ ವಾಡಿಕೆ. ಆ ದಿನ ಶಾ ಮ ರಾ ಯ ರು ರೈಲಿನಿಂದಿಳಿದಾಗಲೇ, ಮಧ್ಯಾಹ್ನವಾಗಿತ್ತು. ಹೇಗೋ ಈ ದಿನ ಊರು ಸೇರಲೇಬೇಕೆಂಬ ದೃಢ ನಿರ್ಧಾರದಿಂದ, ಹೆಜ್ಜೆಯನ್ನು ಅವರು ಭರದಿಂದ ಹಾಕುತ್ತಿದ್ದರು. ಹಿಂದಿನ ಕಾಲದ ಆಳು ಅವರು; ಆಜಾನುಬಾಹು. ಅವರದು ಒಳ್ಳೆ ಬಲಿಷ್ಠದೇಹ. ಸೊಂಟಕ್ಕೆ ಧೋತ್ರದ ಸೆರಗನ್ನು ಸಿಕ್ಕಿಸಿ, ಕೋಲನೂರುತ್ತ, ಯೋಚನೆಯಿಲ್ಲದವರಂತೆ ನಡೆಯುವ ಹಾಗೆ ಕಾಣುತಿದ್ದರೂ, ಚಿಂತೆ ಅವರನ್ನು ಮುಪ್ಪಾಗಿ ಮಾಡಿತ್ತು. ಪಾಳ್ಯದಲ್ಲಿ ಭಾರಿ ಸ್ಥಿತಿವಂತರು ಅವರು. ತಲೆ ತಲಾಂತರದಿಂದ ಅವರ ಮನೆತನದವರು ತಮ್ಮ ಹೆಸರನ್ನು ಉಳಿಸಿಕೊಂಡು ಬಂದಿದ್ದರು. ಒಳ್ಳೆ ದಕ್ಷತೆಯಿಂದ ಆ ಪ್ರಾಂತದಲ್ಲೆಲ್ಲ ಅವರು ಹೆಸರು ಪಡೆದಿದ್ದರು. ಸಾಕಷ್ಟು ಸಂಪಾದನೆ ಮಾಡಿ, ಎರಡೂ ಕೈಗಳಿಂದ ಖರ್ಚು ಮಾಡುತಿದ್ದರು. ದೇವರು ಸಹ ಅಳತೆಯಾಗಿಯೇ ಅವರಿಗೆ ಒಬ್ಬ ಪುತ್ರನನ್ನೂ, ಒಬ್ಬ ಪುತ್ರಿಯನ್ನೂ ಮಾತ್ರ ಒದಗಿಸಿಕೊಟ್ಟಿದ್ದ. ಮಗ ರಾಮು ತಂದೆಗೆ ಸಹಾಯಕನಾಗಿ ಹಳ್ಳಿಯಲ್ಲೆ ಉಳಿದಿದ್ದನು. ಆದರೆ ಅವರಿಗೀಗ ಕಷ್ಟಕಾಲ. ನಾಲ್ಕು ವರ್ಷಗಳಿಂದ ಹುಡು ಕಾಡುತಿದ್ದರೂ, ತಮ್ಮ ಪುತ್ರಿಗೆ ವರನೊಬ್ಬನನ್ನು ಗಳಿಸಲು, ಅವರು ಅಸಮರ್ಥರಾಗಿದ್ದರು. ಕಾರಣ, ಹುಡುಗಿ ಮೂಲಾ ನಕ್ಷತ್ರದಲ್ಲಿ ಹುಟ್ಟಿದವಳೆಂದು. ಮಾವ ಇಲ್ಲದ ಮನೆಯಲ್ಲೇ ಅವಳು ಬಾಳಬೇಕಾಗಿದ್ದಿತು. ವರ ಅನುಕೂಲವಿದ್ದಲ್ಲಿ ಸ್ಥಳ ಸನ್ನಿವೇಶ ಸರಿಯಿಲ್ಲ. ಸ್ಥಳ ಸನ್ನಿವೇಶ ಸರಿಯಿದ್ದಲ್ಲಿ ವರ ಅನುಕೂಲವಿಲ್ಲ. ಎರಡೂ ಕೂಡಿದಾಗ ಮಾವ ಗುಂಡುಕಲ್ಲಿನಂತೆ ಇರುತ್ತಾನೆ. ಇದಕ್ಕೇನು ಮಾಡುವುದು ? ಅನೇಕ ವೇಳೆ

ಅವರ ಪತ್ನಿ ಜಾನಕಮ್ಮನವರು—ವರ ಸಿಕ್ಕಿದಾಗ ವರನ ಮನೆಯವರಿಗೆ ನಕ್ಷತ್ರ ತಿಳಿಸಬೇಡವೆಂದು ಹೇಳುತಿದ್ದುದುಂಟು. ಆದರೆ ಸತ್ಯಸಂಧರಾದ ಶಾಮರಾಯರು ಸುಳ್ಳು ಹೇಳಲು ಹಿಂಜರಿಯುತಿದ್ದರು. ಅವರು ಯಾನಾಗಲೂ ಪ್ರಾಮಾಣಿಕತನ ಗೌರವಗಳಿಂದಲೇ ಬಾಳಿದವರು. ನಿಷ್ಕಾಪಠರು. ಉಸ್ ಎಂದು ನಿಟ್ಟುಸಿರುಬಿಟ್ಟು, ಹೆಗಲ ಚೀಲ ಕೆಳಗಿಳಿಸಿ, ಅವರು ಮನೆ ಸೇರುವಾಗ, ಸೂರ್‍ಯಾಸ್ತವಾಗಿ ಅರ್ಧ ತಾಸು ಕಳೆದಿತ್ತು.

೨

ಲಕ್ಷ್ಮಿ ಶಾಮರಾಯರ ಮಗಳು. ಒಳ್ಳೆ ಚೆಲುವೆ. ಹದಿನಾರು ವರ್ಷಗಳು ಕಳೆದು ಹದಿನೇಳರ ಹೊಸ್ತಿಲಿಗೆ ಈಗವಳು ಕಾಲಿಟ್ಟಿದ್ದಾಳೆ. ಪಟ್ಟಣದ ಮುಖವನ್ನು ನೋಡರಿಯಳಾದುದರಿಂದ, ಅಲಂಕಾರ ಮಾಡಿಕೊಳ್ಳುವುದರಲ್ಲಿ ಸಿಂಗರಿಸಿಕೊಳ್ಳುವುದರಲ್ಲಿ ಈಗಿನ ಕಾಲದ ನಾರೀಮಣಿಗಳಂತೆ ಅವಳಿನ್ನೂ ಮುಂದುವರೆದಿರಲಿಲ್ಲ. ಓರೆಯಾಗಿ ತಲೆ ಬೈತಲೆ ತೆಗೆದು, ಎರಡೂ ಕಿವಿಗಳ ಮೇಲೆ ಕೂದಲು ಮುಚ್ಚಿಕೊಂಡು, ಕಣ್ಣಿಗೆ ಕಪ್ಪು ಕನ್ನಡಕ ಹಾಕಿ, ಸ್ನೋ, ಪೌಡರ್ ಬಳಿದುಕೊಂಡು, ಎಡದ ಕೈಯಲ್ಲಿ ಕರವಸ್ತ್ರವಿಡಿದು ಬೀಸುತ್ತ, ಮೊಸಳೆ ಆಕಾರದ ಚಪ್ಪಲಿಯಿಂದ ಠಪ್ ಠಪ್ ಎಂದು ಶಬ್ದಮಾಡುತ್ತ, ಓರೆಗಣ್ಣಿನಿಂದ ಯುವಕರ ಮೇಲೆ ದೃಷ್ಟಿ ಚೆಲ್ಲುತ್ತ, ರೇಸ್ ಕುದುರೆಯಂತೆ ನಡೆಯುವುದು ಅವಳಿಗಿನ್ನೂ ಬಂದಿರಲಿಲ್ಲ; ಅದನ್ನು ಕಲಿತಿರಲಿಲ್ಲ. ಪ್ರಕೃತಿಯ ಮಡಿಲಿನಲ್ಲಿ, ಹಳ್ಳಿಗರ ಸಹವಾಸದಲ್ಲಿ ಬೆಳೆದವಳವಳು. ತಲೆ ಚೆನ್ನಾಗಿ ಬಾಚಿ, ಮಧ್ಯಕ್ಕೆ ಬೈತಲೆ ತೆಗೆದು, ಉದ್ದುದ್ದ ಕೇಶರಾಶಿಯನ್ನು ಸರಿಪಡಿಸಿ, ಜಡೆ ಹೆಣೆದು, ಲಾಂಗೂಲದಂತೆ ಇಳಿಬಿಟ್ಟು ದೊಡ್ಡದಾಗಿ ಕುಂಕುಮ ಇಟ್ಟುಕೊಂಡಾಗ, ಸೌಂದರ್ಯ ದೇವತೆಯಂತೆ ಅವಳು ಕಾಣುತಿದ್ದಳು. ಮಿಂಚಿನಂತಹ ಕಣ್ಣು

ಗಳು, ಉದ್ದವಾದ ಮೂಗು, ನಗುವಾಗ ಕೆನ್ನೆಯ ಮೇಲೆ ಸ್ವಲ್ಪ ಗುಳಿಬಿದ್ದು ಅವಳಿಗೆ ಹೆಚ್ಚು ಶೋಭೆಯನ್ನುಂಟು ಮಾಡಿತ್ತು. ಕುಚಗಳೆರಡೂ ಸರಿಯಾದ ಸ್ಥಳದಲ್ಲಿ ಇರಿಸಿದವೆಂಬಂತೆ ಚಿಕ್ಕವಾಗಿ ಚೊಕ್ಕವಾಗಿದ್ದುವು. ಸೃಷ್ಟಿಕರ್ತನು ಅವಳ ದೇಹದ ಪ್ರತಿಯೊಂದು ಅಂಗವನ್ನೂ ಸರಿಯಾಗಿಯೇ ಜಾಣ್ಮೆಯಿಂದ ಕೆತ್ತಿದ್ದನೆಂಬಂತೆ ಅವಳು ಕಾಣುತಿದ್ದಳು. ಲಕ್ಷ್ಮಿಗೆ ಹೂವಿನ ಕೊರತೆಯೇನೂ ಇರಲಿಲ್ಲ. ಕಾಗದದ ಹೂವನ್ನು ಮುಡಿಯುವ ಅಭ್ಯಾಸ ಅವಳಿಗಿರಲಿಲ್ಲ. ಅದನ್ನು ಅವಳು ಕಂಡೇ ಅರಿಯಳು. ಶಾಮ ರಾಯರ ಹಿತ್ತಿಲೇ ಒಂದು ನಂದನವನ. ಆಳುಗಳ ಕೈಯಲ್ಲಿ ನೀರು ಹೊಯ್ಯಿಸಿ, ವಿವಿಧ ಪುಷ್ಪಗಳ ಗಿಡಗಳನ್ನೂ, ಲತೆಗಳನ್ನೂ ಅವರು ಬೆಳೆಸಿದ್ದರು. ಅವರ ಉದ್ಯಾನವನದಲ್ಲಿ ಜಾಜಿ, ಮಲ್ಲಿಗೆ, ಗುಲಾಬಿ, ಸೇವಂತಿಗೆ, ಸುಗಂಧರಾಜ, ಸಂಪಗೆ, ಎಲ್ಲ ಇದ್ದುವು. ಗಾಳಿ ಬೀಸಿದಾಗ ಸುಮಗಳ ಸುವಾಸನೆ ಹರಡಿ, ಊರೆಲ್ಲಾ ವ್ಯಾಪಿಸಿಕೊಳ್ಳುತಿತ್ತು. ಲಕ್ಷ್ಮಿಗೆ ಹಿತ್ತಿಲಿನಲ್ಲೇ ವಾಸ. ಈ ಗಿಡ ಕಿತ್ತು ಅಲ್ಲಿ ನೆಡುವುದು, ಆ ಗಿಡ ಕಿತ್ತು ಇಲ್ಲಿ ನೆಡುವುದೇ ಅವಳ ಕಸಬು. ಒಂದು ಕುಕ್ಕೆ ತುಂಬ ಹೂಕಿತ್ತು ಮಾಲೆಕಟ್ಟಿ, ಮನೆಯಲ್ಲಿ ಇದ್ದ ಚಿತ್ರಪಟಗಳಿಗೆಲ್ಲ ನೇತು ಹಾಕುವಳು. ಉಳಿದದ್ದನ್ನು ಮಿಕ್ಕವರಿಗೂ, ತನ್ನ ಸ್ನೇಹಿತೆಯರಿಗೂ ಹಂಚಿಕೊಡುತಿದ್ದಳು. ರಾಮು ಒಂದೊಂದು ವೇಳೆ ಹಾಸ್ಯಮಾಡುವುದೂ ಉಂಟು. ತಾಯಿಯ ಕೂಡ ಅವನು ಹೇಳುತಿದ್ದ: "ಲಕ್ಷ್ಮಿ ಗಂಡನ ಮನೆಗೆ ಹೋದಾಗ ಈ ಹೂದೋಟವನ್ನು ಹೇಗೆ ಬಿಟ್ಟು ಹೋಗುತ್ತಾಳಮ್ಮಾ" ಎಂದು. ಜಾನಕಮ್ಮನವರೂ ರಾಮುವೂ ನಗಲು, ಲಕ್ಷ್ಮಿ ತಾನೂ ನಕ್ಕು ಹೋಗೋ ಎನ್ನುವಳು. ಬೆನಾರಸ್ ರೇಶ್ಮೆ ಸೀರೆಯನ್ನು ಉಟ್ಟು, ನೇರಿಳೆ ಬಣ್ಣದ ಕುಪ್ಪಸವನ್ನು ತೊಟ್ಟು, ದೊಡ್ಡದಾದ ಕೆಂಪು ಗುಲಾಬಿ ಹೂವೊಂದನ್ನು ಮುಡಿದು ಊ ಂಡು, ಬಳೆಗಳ ಶಬ್ದದೊಂದಿಗೆ, ಲಕ್ಷ್ಮಿ ಅತ್ತಿಂದಿತ್ತ, ಇತ್ತಿಂ

ದತ್ತು, ಸುಳಿದಾಡಿದರೆ ಮನೆ ಸ್ವರ್ಗ ಸಮವಾಗಿ ಆನಂದ ದಿಂದುಕ್ಕುತ್ತಿತ್ತು.

೪

ದಫೇದಾರ್ ಗುಂಡೂರಾಯರೆಂದರೆ ಮೈಸೂರಿಗೆ ಮೈಸೂರೆ ಒಂದು ಕಾಲದಲ್ಲಿ ನಡುಗುತ್ತಿತ್ತಂತೆ. ಆ ಕಾಲದಲ್ಲಿ ಅವರು ದಕ್ಷತೆಯಿಂದ ಪೋಲೀಸ್ ಇಲಾಖೆಯಲ್ಲಿ ಕೆಲಸ ನಿರ್ವಹಿಸು ತಿದ್ದರಂತೆ. ಅವರು ಬೆತ್ತ ಹಿಡಿದು ರಸ್ತೆಯಲ್ಲಿ ಠಲಾಯಿಸುವಾಗ ಅಳುವ ಮಕ್ಕಳು ಸಹ ಬಾಯಿ ಮುಚ್ಚಿಕೊಳ್ಳುತಿದ್ದರೆಂದು, ಮೈಸೂರು ಜನ ಆಡುವುದನ್ನು ಈಗಲೂ ಸಹ ನೀವು ಕೇಳಿರ ಬಹುದು. ಅವರ ಮೂರ್ತಿಸ್ವರೂಪವೂ ಅಂಥದೇ ಆಗಿದ್ದಿತು. ಎತ್ತರದ ಆಳು. ದಟ್ಟಪುಷ್ಟವಾದ ಕಾಯ. ಗಿರಿಜೆ ಮೀಸೆ. ಅವರೀಗ ಕೆಲಸದಿಂದ ನಿವೃತ್ತರಾಗಿದ್ದಾರೆ. ಸಿರಿವಂತರು, ದೊಡ್ಡ ದೊಡ್ಡ ಅಧಿಕಾರಿಗಳು ವಾಸಮಾಡುವ ಒಂಟಿಕೊಪ್ಪಲಿ ನಲ್ಲೇ ಅವರು ಭಾರಿ ಮನೆಯೊಂದನ್ನು ಕಟ್ಟಿಸಿ, ಅದಕ್ಕೆ "ಅನ್ನ ಪೂರ್ಣಾ" ಎಂದು ಹೆಸರಿಟ್ಟಿದ್ದಾರೆ. ಶಿವರಾಂ ಪೇಟೆಯಲ್ಲಿ ಏಳು ಸಾವಿರ ರೂಪಾಯಿಗಳಿಗೆ ಮನೆಯೊಂದನ್ನು ತೆಗೆದು ಬಾಡಿ ಗೆಗೆ ಕೊಟ್ಟಿದ್ದಾರೆ. ತಂಡ್ಯದ ಬಳಿ ಏಳು ಎಕರೆ ಗದ್ದೆ ಮಾಡಿ ದ್ದಾರೆ. ಸುಖಕ್ಕೇನೂ ಅವರಿಗೆ ಕೊರತೆಯಿಲ್ಲ. ತಮ್ಮ ಮಗ ರಾಘವೇಂದ್ರನನ್ನು ಪದವೀಧರನನ್ನಾಗಿ ಮಾಡಿ, ಪೋಲೀಸ್ ಇಲಾಖೆಗೇ ಸೇರಿಸಬೇಕೆಂದು ಅವರ ಹಂಬಲ. ಗುಂಡೂರಾಯರು ಆಗಿನ ಕಾಲದ ಕನ್ನಡ ಲೋಯರ್ ಸೆಕೆಂಡರಿ ಪಾಸು ಮಾಡಿ ದವರು. ಅವರು ವಿದ್ಯಾವಂತರಾಗಿದ್ದ ಪಕ್ಷದಲ್ಲಿ, ಅವರಿಗಿದ್ದ ದಕ್ಷತೆಯಲ್ಲಿ, ಖಂಡಿತ ಅವರು ಡಿ.ಎಸ್.ಪಿ. ಆಗಿಯೇ ಬಿಡು ತಿದ್ದರು. ತಮ್ಮ ಮಗ ಪೂರ್ಣ ವಿದ್ಯಾಭ್ಯಾಸ ಮಾಡಿ, ದಕ್ಷತೆ

ಯಿಂದ ಪೋಲೀಸ್ ಇಲಾಖೆಯಲ್ಲಿ ಮೆರೆದಾಡಬೇಕು, ಮೈಸೂರು ಸೀಮೆಯಲ್ಲೆಲ್ಲಾ ಹೆಸರುಗಳಿಸಬೇಕೆಂದು ಅವರ ಆಸೆ. ಆದರೆ ಮಗ ರಾಘು ಇದಕ್ಕೆ ವಿರುದ್ಧವಾದ. ಬಾಲ್ಯದಲ್ಲೆ ದುಶ್ಚಟಗಳು ಹಂಬಿನಂತೆ ಅವನಲ್ಲಿ ಹಬ್ಬಿಕೊಂಡುವು. ಮನೆಯಲ್ಲೆ ಹಣ ಕಾಸು ಕದಿಯುವುದು, ಹೋಟಲಿಗೆ ಹಾಕುವುದು, ಅವನ ನಿತ್ಯ ಕಸಬಾಗಿತ್ತು. ವಿಲ್ಸ್ ಸಿಗರೇಟಿನಿಂದ ಹಿಡಿದು ಕಾಸಿಗೆ ಮೂರರ ಬೀಡಿಯವರೆಗೂ ಸಮಯ ಬಂದ ಹಾಗೆ ಅವನು ಸೇದುತಿದ್ದನು. ಕಳ್ಳತನ ಕ್ರಮೇಣ ಬಲಿತು ಸ್ವಲ್ಪ ಮುಂದುವರಿಯಲು ಪುಸ್ತಕ ಗಳನ್ನು ಮಾರಿ ಬಿಡುತಿದ್ದನು. ಪುಸ್ತಕಗಳನ್ನು ಅವರಿಂದ ಇವ ರಿಂದ ಎರವಲು ಪಡೆದು, ಕಾಲ ಕಳೆಯುವುದಕ್ಕೆ ಪ್ರಾರಂಭ ಮಾಡಿದನು. ಅನೇಕ ದಿನಗಳು ಶಾಲೆಗೆ ಹೋಗುವುದನ್ನೇ ಬಿಟ್ಟನು. ಅನಂತರ ಮನೆಯಲ್ಲಿ ಇದು ತಿಳಿದು ಬಂತು. ಗುಂಡೂರಾಯರು ಗುಡುಗಿದರು ; ಕಿಡಿ ಕಿಡಿಯಾದರು ; ರೇಗಾಡಿ ದರು. ಒಂದು ದಿನ ಬೆತ್ತ ತೆಗೆದು ಸರಿಯಾಗಿ ಬಾರಿಸಿಯೇ ಬಿಟ್ಟರು. ತಡೆಯಲು ಬಂದ ಶಾರದಮ್ಮನವರಿಗೂ ಒಂದೇಟು ಬಿದ್ದು, ಅವರ ಎಡಗೈಯ ಬಳೆಗಳೆಲ್ಲ ಒಡೆದು ಚೂರು ಚೂರಾ ದುವು. ಅಂದರೆ ರಾಘು ಬಹಳ ಬಲಿತು ಬಿಟ್ಟಿದ್ದನು. ತಂದೆಗೆ ಅವನು ಬಗ್ಗುವ ಮಗನಾಗಿರಲಿಲ್ಲ. ದಿನಂಪ್ರತಿ ಮನೆಯಲ್ಲಿ ರಾದ್ಧಾಂತ ನಡೆಯುತಿತ್ತು : ಮಳೆ, ಗುಡುಗು, ಸಿಡಿಲು ಎಲ್ಲ ಕಾಣಿಸಿಕೊಳ್ಳುತಿದ್ದುವು ಮನೆಯಲ್ಲಿ. ಕೊನೆ ಕೊನೆಗೆ ರಾಘು ಕೋಪಿಸಿಕೊಂಡು ಎಲ್ಲಿಯೋ ಹೋಗುತ್ತಿದ್ದವನು, ತಿರುಗಿ ಮನೆಗೆ ಅನೇಕ ದಿನಗಳವರೆಗೆ ಬರುತ್ತಲೇಯಿರಲಿಲ್ಲ. ಅವನನ್ನು ವಾಪಸು ಕರೆದುಕೊಂಡು ಬರುವುದೇ ಭಗೀರಥ ಪ್ರಯತ್ನವಾಗು ತಿತ್ತು. ಗುಂಡೂರಾಯರು—ಅವನನ್ನು ಕರೆದು ತರುವುದೇ ಬೇಡ; ಎಲ್ಲಾದರೂ ಸಾಯಲಿ, ಎನ್ನುತಿದ್ದರು: ಆದರೆ ಹೆತ್ತ ಮನ ಕೇಳುತ್ತದೆಯೆ ?—ಶಾರದಮ್ಮನವರು ಪಕ್ಕದ ಮನೆಯವರನ್ನು

ಬೇಡಿ ಕಾಡಿ, ಹುಡುಕಿಸಿ ಕರೆಯಿಸಿಕೊಳ್ಳುತ್ತಿದ್ದರು. ಆಗ ಎಲ್ಲರೂ ಸೇರಿ ಸಮಾಧಾನ ಪಡಿಸಿ, ಗುಂಡೂರಾಯರನ್ನು ಮಾತನಾಡ ಬೇಡಿರೆಂದು, ಕಟ್ಟಾಜ್ಞೆ ಮಾಡುತಿದ್ದರು. ಆಗ ಅವರನ್ನು ನೋಡಬೇಕು. ಗೂಡಿನಲ್ಲಿ ಹಾಕಿದ ಹುಲಿಯಂತೆ ಅವರು ಒದ್ದಾಡುತಿದ್ದರು. ಮಾತಾಡುವುದಕ್ಕೂ ಇಲ್ಲ, ಬಿಡುವುದಕ್ಕೂ ಇಲ್ಲ ; ಹುಂಗುಟ್ಟುತಿದ್ದರು. ಮಧ್ಯದಲ್ಲಿ ಶಾರದಮ್ಮನವರೆ ಪತಿಗೆ ಸಮಾಧಾನ ಹೇಳಿ ಮಗನನ್ನು ಕುಳ್ಳಿರಿಸಿಕೊಂಡು, ಕಣ್ಣೀರು ಸುರಿಸುತ್ತ, ಬುದ್ಧಿವಾದ ಹೇಳುತಿದ್ದರು. ರಾಘು, ಎಸ್.ಎಸ್. ಎಲ್.ಸಿ. ಯಲ್ಲಿ ಸಾಕಷ್ಟು ವರ್ಷ ಠೋಕರ್ ತಿಂದು ಹಾಗು ಹೀಗು ಕಡೆಗೆ ಪಾಸು ಮಾಡಿದನು. ಯಾರೇನೆಲ್ಲ ಎಷ್ಟು ಹೇಳಿ ದರೂ ಕಾಲೇಜಿಗೆ ಸೇರುವುದಿಲ್ಲವೆಂದೇ ಹಠ ಹಿಡಿದುಬಿಟ್ಟನು. ಗುಂಡೂರಾಯರು ಏನೆಲ್ಲ ಪ್ರಯತ್ನಮಾಡಿದರೂ ಅವನು ತನ್ನ ನಿರ್ಧಾರವನ್ನು ಬದಲಾಯಿಸಲಿಲ್ಲ. " ಇನ್ನೇನು ಮಾಡಲೂ ತೋಚದೆ, ಪೋಕರಿ ಹಾಳಾಗಲಿ " ಎಂದು ಬೈದು ಅವರು ಸುಮ್ಮ ನಾದರು. ರಾಘುವಿಗೆ ಪ್ರಾಯ ಇಪ್ಪತ್ತೊಂದು ದಾಟಿ ಇಪ್ಪತ್ತೆರಡಕ್ಕೆ ಪ್ರಾರಂಭವಾಗಿತ್ತು. ಈ ವೇಳೆಗಾಗಲೇ ಅವನು ಮೈಸೂರಲ್ಲಿ ಅರ್ಧಕರ್ಧ ಸೂಳೆಯರ ಮನೆಯನ್ನು ಹತ್ತಿ ಕೆಳಗಿಳಿದಿದ್ದನು.

೫

ಇಂದು ಶಾಮರಾಯರ ಮನೆಯಲ್ಲಿ ಗದ್ದಲ. ಜಾನಕಮ್ಮ ನವರು ಉತ್ಸಾಹದಿಂದ ಓಡಾಡುತ್ತ ಕೆಲಸ ಮಾಡುತಿದ್ದರು. ಮನೆಯಲ್ಲಿ ಆಳುಗಳಿಗೂ ಅದು ಇದೆಂದು ಆಜ್ಞಾಪಿಸುತಿದ್ದರು. ಇಷ್ಟೆಲ್ಲ ಸಡಗರಕ್ಕೆ ಕಾರಣ ಲಕ್ಷ್ಮಿಯನ್ನು ನೋಡಲು ಹಾಸನ ದಿಂದ ಬಾಲುರಾಯರು ಮತ್ತು ಅವರ ಪತ್ನಿ ಸಾವಿತ್ರಮ್ಮನವರು ಬಂದಿದ್ದರು. ಅವರ ಮಗ ಶ್ರೀಧರ ಮೈಸೂರಿನ ಕಾಲೇಜಿನಲ್ಲಿ

ಓದುತಿದ್ದನು. ಜೂನಿಯರ್ ಇಂಟರ್‌ನಲ್ಲಿ ಅವನು ವ್ಯಾಸಂಗ ಮಾಡುತಿದ್ದನು. ಯಾರ್‍ಯಾರ ಸಿಪಾರ್ಸು ಮಾಡಿಸಿ ಶಾಮರಾಯರು ಬಾಲುರಾಯರನ್ನು ಹಿಡಿದಿದ್ದರು. ಬಾಲುರಾಯರು ಬಂದ ಮಾರನೆಯ ದಿನ ಶ್ರೀಧರ ಬಂದನು. ಶಾಮರಾಯರು ಅವನನ್ನು ಬರಮಾಡಿಕೊಳ್ಳಲು ಚಾಮರಾಜನಗರಕ್ಕೆ ಗಾಡಿ ಕಳುಹಿಸಿ, ದಾರಿ ದಾರಿ ನೋಡುತಿದ್ದರು. ಸಾಯಂಕಾಲ ಐದು ಘಂಟೆಗೆ ಗಾಡಿ ಬಂದಿತು. ಶ್ರೀಧರ ಕೆಳಗಿಳಿದನು. ಹೃತ್ಪೂರ್ವಕ ಸ್ವಾಗತವು ಅವನಿಗೆ ದೊರೆಯಿತು. ಶ್ರೀಧರನು ಸುಲಕ್ಷಣವಾದ ಯುವಕನಾಗಿದ್ದುದಲ್ಲದೆ, ಸುಸಂಸ್ಕೃತನೂ ಆಗಿದ್ದನು. ದಾರಿಯ ಪ್ರಯಾಸ ಮಿಗೆಯಾಗಿದ್ದರೂ, ಪ್ರಕೃತಿಯ ರಮಣೀಯವಾದ ನೋಟವನ್ನು ಉದ್ದಕ್ಕೂ ನೋಡುತ್ತ, ಅವನು ಆನಂದ ಪರವಶನಾಗಿದ್ದನು. ಸಾವಿತ್ರಮ್ಮನವರು ಮಗನೊಂದಿಗೆ ಹರಟೆ ಹೊಡೆಯುತ್ತ, ಮೈಸೂರು ಸಮಾಚಾರವನ್ನೆಲ್ಲ ಕೇಳುತ್ತಿದ್ದರು. ಶ್ರೀಧರನಿಗೆ ತಾಯಿಯೆಂದರೆ ಬಹಳ ಪ್ರೇಮ. ವಿಶ್ವದಲ್ಲಿ ತಾಯಿಗಿಂತ ಮಿಗಿಲಾದ ವಸ್ತು ಬೇರೊಂದಿಲ್ಲವೆಂದು, ವಿದ್ಯಾವಂತನಾದ ಅವನು ತಿಳಿದುಕೊಂಡಿದ್ದುದು, ಅಷ್ಟೇನೂ ಆಶ್ಚರ್ಯದ ಮಾತಲ್ಲ. ಜಾನಕಮ್ಮನವರು ಶ್ರೀಧರನ ರೂಪಗುಣಗಳನ್ನು ನೋಡಿ ಮನದಣಿದಿದ್ದರು. ರಾತ್ರಿ ಊಟಕ್ಕೆ ಎಲ್ಲರೂ ಸಾಲಾಗಿ ಕುಳಿತರು. ಜಾನಕಮ್ಮನವರ ಕೈರುಚಿಯನ್ನು ಸವಿಯುತ್ತ, ಮಧ್ಯೆ ಮಧ್ಯೆ ದೇಶ ಕಾಲ ವರ್ತಮಾನಗಳನ್ನಾಡುತ್ತ ಅವರು ಊಟ ಸಾಗಿಸಿದ್ದರು. ಹೊತ್ತು ಮೀರಿದುದರಿಂದ ಆ ದಿನ ಹೆಚ್ಚಿನ ಸಂಗತಿಗಳನ್ನು ಚರ್ಚಿಸದೆ ಎಲ್ಲರೂ ಮಲಗಿ ನಿದ್ರಿಸಿದರು.

೨

ಲಕ್ಷ್ಮಿ ಬೆಳಗೆದ್ದ ಕೂಡಲೆ ತನ್ನನ್ನು ಸಿಂಗರಿಸಿಕೊಳ್ಳುವುದರಲ್ಲಿಯೇ ಮಗ್ನಳಾಗಿದ್ದಳು. ಅಣ್ಣ ರಾಮು ಬೆಂಗಳೂರಿಗೆ

ಹೋಗಿದ್ದಾಗ ತಂದಿದ್ದ ಕಂಚಿ ಸೀರೆ ಉಟ್ಟು, ಹಸುರು ಬಣ್ಣದ ರೇಶ್ಮೆ ಕುಪ್ಪಸ ತೊಟ್ಟಿದ್ದಳು. ತಲೆಯನ್ನು ಬಾಚಿ ಹಣೆಗೆ ದೊಡ್ಡದಾಗಿ ಕುಂಕುಮ ಇಟ್ಟಿದ್ದಳು: ಮೂರು ಹರಳಿನ ಬೇಸರಿ ಫಣಕ್, ಫಣಕ್ ಎಂದು ಮಿನುಗುತಿತ್ತು ಅವಳ ನಾಸಿಕದಲ್ಲಿ. ಎರಡೆರಡು ಚಿನ್ನದ ಗೀರು ಬಳೆಗಳನ್ನು ಮುಂದೆ ಮಾಡಿಕೊಂಡು, ಕೈತುಂಬ ಬಳೆ ತೊಟ್ಟಿದ್ದಳು. ಅವಳು ಹಳ್ಳಿಯ ಹೆಣ್ಣಾದುದರಿಂದ ಅಷ್ಟೊಂದು ದಾಷ್ಟಿಕತನವುಳ್ಳವಳಾಗಿರಲಿಲ್ಲ ; ಬಹಳ ಸಂಕೋಚ ಸ್ವಭಾವವುಳ್ಳವಳಾಗಿದ್ದಳು. ಎಲ್ಲರೂ ಏಳುವುದಕ್ಕೆ ಮುಂಚೆಯೇ ತಾನೆದ್ದು, ಶಬ್ದಮಾಡದೆ ಬಾಗಿಲು ತೆಗೆದು, ಹಿತ್ತಿಲಿನಲ್ಲಿ ಹೂಗಳನ್ನು ಕಿತ್ತು ತಂದಿದ್ದಳು. ಸೇವಂತಿಗೆ, ಸುಗಂಧರಾಜ, ಜಾಜಿ ಎಲ್ಲವನ್ನು ಬೆರಸಿ, ಗುಂಡಾಗಿ ಹೂಕಟ್ಟಿ ಮುಡಿದಿದ್ದಳು. ಮಧ್ಯದಲ್ಲಿ ಚಿಕ್ಕದಾದ ಒಂದು ಗುಲಾಬಿ ಹೂವನ್ನು ಸೇರಿಸಿದ್ದಳು. ಹೂ ಕಟ್ಟಲು ದಾರ ಹಿಂದಿನ ದಿನ ತೆಗೆದಿಡಲು ಮರೆತಿದ್ದುದರಿಂದ, ಇಂದು ಅವಳಿಗೆ ಬಹಳ ಪೇಚಾಟಕ್ಕಿಟ್ಟುಕೊಂಡಿದ್ದಿತು. ಶ್ರೀಧರ ಮಲಗಿದ್ದ ಕೋಣೆಯಲ್ಲೇ ಚಿಕ್ಕದೊಂದು ಗೂಡಿನಲ್ಲಿ ಅದು ಸಿಕ್ಕಿ ಬಿದ್ದಿದ್ದಿತು. ಬಾಗಿಲು ಹಿಂದಕ್ಕೆ ತೆಗೆದುಬಿಟ್ಟಿದ್ದುದರಿಂದ, ಹಾಗೂ ಹೀಗೂ ಧೈರ್ಯಮಾಡಿ ಲಕ್ಷ್ಮಿ ಹೊಸ್ತಿಲವರೆಗೆ ಬಂದು ನಾಲ್ಕು ತಡವೆ ಬಗ್ಗಿ ಬಗ್ಗಿ ನೋಡಿದಳು. ಎಲ್ಲರೂ ಗಾಢನಿದ್ದೆಯಲ್ಲಿದ್ದುದರಿಂದ, ಒಂದೊಂದೇ ಹೆಜ್ಜೆ ಹಾಕುತ್ತ, ಸದ್ದುಮಾಡದೆ ಒಳಗೆ ಪ್ರವೇಶಿಸಿ, ದಾರದ ಉಂಡೆ ತೆಗೆದುಕೊಳ್ಳುವವರೆಗೆ, ಅವಳಿಗೆ ಮೈಯೆಲ್ಲ ಬೆವರು ಸುರಿಯಲು ಪ್ರಾರಂಭಿಸಿತು. ತಾನೊಂದು ದೊಡ್ಡಕಾರ್ಯ ಮಾಡುವುದರಲ್ಲಿ ಜಯಶೀಲೆಯಾದೆನೆಂದು, ಭಾರಿ ವಿಜಯವನ್ನು ಗಳಿಸಿದ ವೀರಯೋಧಳಂತೆ ಹಿಗ್ಗುತ್ತ, ಅವಳು ಹೊರಗೆ ಬರುವಾಗ ಕ್ಷಣಾರ್ಧ, ಶ್ರೀಧರನ ಮೇಲೆಯೂ ದೃಷ್ಟಿಚೆಲ್ಲಿದಳು. ಪ್ರಸನ್ನವದನನಾಗಿ ಗಡ್ಡದವರೆಗೂ ಶಾಲನ್ನು ಎಳೆದುಕೊಂಡು ಅವನು ನಿದ್ರಿಸುತಿದ್ದನು.

ಎಲ್ಲರೂ ಎದ್ದ ಕೂಡಲೇ ಸ್ನಾನಪಾನಾದಿಗಳನ್ನು ಮುಗಿಸಿದರು. ಬೆಳಗಿನ ಕಾಫಿಯೂ ಆಯಿತು. ಮಧ್ಯಾಹ್ನ ಔತಣ. ವರನ ಮನೆಯವರಿಗೆ ಲಕ್ಷ್ಮಿಯನ್ನು ನೋಡಿ ತುಂಬ ತೃಪ್ತಿಯಾಯಿತು. ಆದರೆ ಸಾವಿತ್ರಮ್ಮನವರಿಗೆ ಇದುವರೆಗೂ ಲಕ್ಷ್ಮಿಯ ನಕ್ಷತ್ರ ತಿಳಿದಿರಲಿಲ್ಲ. ಬಾಲುರಾಯರು ತಮ್ಮ ಪತ್ನಿಗೆ ಇದನ್ನು ತಿಳಿಸಿಯೂ ಇರಲಿಲ್ಲ. ಅವರಿಗೆ ಇದರಲ್ಲೆಲ್ಲಾ ಹೆಚ್ಚು ನಂಬಿಕೆಯಿಲ್ಲ. ತಮ್ಮ ಸ್ನೇಹಿತರೊಬ್ಬರು ಹೆಚ್ಚು ಒತ್ತಾಯಪಡಿಸಿದುದರ ಮೇಲೆ, ಪತ್ನೀ ಪರಿವಾರ ಸಮೇತರಾಗಿ, ಅವರು ಇಲ್ಲಿಗೆ ಆಗಮಿಸಿದ್ದರು. ಇಲ್ಲಿಯ ಸ್ಥಳ ಸನ್ನಿವೇಶ ಶಾಮರಾಯರ ಮನೆಯವರ ಸಭ್ಯತನ, ಎಲ್ಲವೂ ಅವರ ಮನಸ್ಸಿಗೆ ವಿಶೇಷವಾಗಿ ಹಿಡಿದಿತ್ತು. ಶ್ರೀಧರನೂ ಲಕ್ಷ್ಮಿಯನ್ನು ನೋಡಿ ತೃಪ್ತಿಪಟ್ಟಿದ್ದನು. ಪರಸ್ಪರ ವಿಚಾರ ವಿನಿಮಯ ನಡೆದ ಮೇಲೆ ತಾವು ಊರಿಗೆ ಹೋಗಿ ಪತ್ರ ಬರೆಯುವುದಾಗಿ ಬಾಲುರಾಯರು ತಿಳಿಸಿದರು. ಪ್ರಯಾಣಮಾಡಲು ಎಲ್ಲರೂ ಸನ್ನದ್ಧರಾದಾಗ, ತಾಯಿ ಜಾನಕಮ್ಮನವರು ಸನ್ನೆ ಮಾಡಿದಮೇಲೆ ಲಕ್ಷ್ಮಿ ಅತ್ತೆ ಮಾವಂದಿರಾಗುವವರಿಗೂ, ಶ್ರೀಧರನಿಗೂ ನಮಸ್ಕರಿಸಿದಳು. ಅನಂತರ ಎಲ್ಲರೂ ಪ್ರಯಾಣ ಮಾಡಿದರು. ಸಾಗಗೊಳಿಸಲು ಶಾಮರಾಯರೂ, ಜಾನಕಮ್ಮನವರೂ, ಊರಹೊರಗಿನ ದಾರಿಯ ಮಾವಿನ ಮರದವರೆಗೂ ಹೋಗಿದ್ದರು. ಕಾಡು ದಾರಿಯಾದುದರಿಂದ ಚಾಮರಾಜನಗರದವರೆಗೆ, ಅವರನ್ನು ಸುರಕ್ಷಿತವಾಗಿ ಸೇರಿಸಲು, ಆಳಿನ ಕೂಡ ರಾಮುವೂ ಹೊರಟಿದ್ದನು. ಆಳನ್ನು ಹಿಂದಕ್ಕೆ ಕೂರಿಸಿ ಅವನೇ ಗಾಡಿಹೊಡೆಯುತಿದ್ದನು. ಲಕ್ಷ್ಮಿ ಬಾಗಿಲಿನಲ್ಲಿ ನಿಂತು ಒಂದೇ ಸಮನಾಗಿ, ಗಾಡಿಯನ್ನು ನೋಡುತಿದ್ದಳು. ತಂದೆತಾಯಿಗಳು ಮನೆಗೆ ಹಿಂದಿರುಗಿದ ಮೇಲೆ, ಅವಳಿಗೆ ಸ್ವಲ್ಪ ನಾಚಿಕೆಯಾಗಿ, ಹಿತ್ತಲಿಗೆ ಹೋಗಿ ಸಸಿವಾರದ ಮರದ ಬಳಿ ನಿಂತು, ಗಾಡಿ ಕಣ್ಣಿಗೆ ಕಾಣುವವರೆಗೂ ನೋಡು

ತಿದ್ದಳು. ಉತ್ಸಾಹದ ಅಲೆ ಅವಳ ಮನಸ್ಸಿನಲ್ಲಿ ಹೊಯ್ದಾಡು ತಿತ್ತು. ಹಾಸನಕ್ಕೆ ತೆರಳಿದಮೇಲೆ, ಬಾಲುರಾಯರಿಗೂ ಅವರ ಪತ್ನಿ ಸಾವಿತ್ರಮ್ಮನವರಿಗೂ ದೀರ್ಘವಾದ ಚರ್ಚೆ ನಡೆಯಿತು. ಹೇಗೂ ಶ್ರೀಧರನು ಲಕ್ಷ್ಮಿಯ ಕೈಹಿಡಿಯಲೇಬೇಕೆಂದು ಬಾಲು ರಾಯರು ಹಠಮಾಡಿದರು. ಸಾವಿತ್ರಮ್ಮನವರು ಮೂಲಾ ನಕ್ಷತ್ರದ ಹುಡುಗಿ ಆಗುವುದಿಲ್ಲವೆಂದೇ ಸಾಧಿಸಿಬಿಟ್ಟರು. ತಮಗೆ ಮೊದಲೇ ತಿಳಿದಿದ್ದ ಪಕ್ಷದಲ್ಲಿ ತಾವು ಇಷ್ಟುದೂರಕ್ಕೆ ಎಡೆಕೊಡು ತ್ತಿರಲಿಲ್ಲವೆಂದೂ, ಔತಣಕ್ಕೆ ಹೋಗುತ್ತಿರಲಿಲ್ಲವೆಂದೂ, ನುಡಿ ದರು. ಮೈಸೂರಿಗೆ, ಮಗ ಶ್ರೀಧರನಿಗೆ—ಆ ಹುಡುಗಿ ಆಗುವುದಿಲ್ಲ ವೆಂದೂ, ಮೂಲಾ ನಕ್ಷತ್ರವಾದುದರಿಂದ, ಮಾವನಿಲ್ಲದ ಮನೆ ಯಲ್ಲಿ ಲಕ್ಷ್ಮಿ ಬಾಳಬೇಕಾಗಿರುವುದಾಗಿಯೂ, ತಮ್ಮ ಕೋರಿಕೆ ಯನ್ನು ನಿರಾಕರಿಸಕೂಡದೆಂದೂ—ತಾವೇ ಪತ್ರ ಬರೆದರು. ಶ್ರೀಧರ ಬಹಳ ಚಿಂತಾಕ್ರಾಂತನಾದನು. ಅವನಿಗೆ ಕಟ್ಟು ವುದಕ್ಕೂ ಇಲ್ಲ, ಬಿಡುವುದಕ್ಕೂ ಇಲ್ಲ, ಹಾಗಾಯಿತು. ಕೊನೆಗೆ ತಾಯಿಯ ಮೇಲಿನ ಮಿಗೆಯಾದ ಪ್ರೇಮದಿಂದ ಅವರಿಷ್ಟ ಹೇಗೊ ಹಾಗೆ ತಾನು ನಡೆಯುವುದಾಗಿ, ಪತ್ರ ಬರೆದನು. ಬಾಲುರಾಯರಿಗೆ ಬೇರೆ ಮಾರ್ಗವೇ ಇಲ್ಲದಾಯಿತು. ಮನಸ್ಸಿಲ್ಲದ ಮನಸ್ಸಿನಿಂದ ವರು, ತಮ್ಮ ಮನೆಯವರು ಈ ವಿವಾಹಕ್ಕೆ ಒಪ್ಪುವುದಿಲ್ಲವೆಂದೂ, ತಮ್ಮನ್ನು ಕ್ಷಮಿಸಬೇಕಾಗಿಯೂ ಶಾಮರಾಯರಿಗೆ ಪತ್ರ ಬರೆದರು. ಬಾಲುರಾಯರ ಪತ್ರವನ್ನು ನೋಡಿ ಶಾಮರಾಯರ ಮನೆಯಲ್ಲಿ ಎಲ್ಲರಿಗೂ ನಿರಾಶೆ ಆವರಿಸಿತು. ತಾಂಬೂಲ ಜಗಿಯುತ್ತ ಜಾನಕಮ್ಮನವರು ಕಂಭ ಒರಗಿಕೊಂಡು ಕುಳಿತು, ಏನನ್ನೋ ಯೋಚಿಸಹತ್ತಿದರು, ಶಾಮರಾಯರು ಯಾವ ಮಾತನ್ನೂ ಆಡಲಿಲ್ಲ. ರಾಮು ಮಾತ್ರ ಏನೇನೋ ಗೊಣಗುಟ್ಟುತಿದ್ದನು. ಲಕ್ಷ್ಮಿಯ ಕಣ್ಣಿನಿಂದ ನಾಲ್ಕು ಅಶ್ರುಬಿಂದುಗಳು ತಟಕ್ಕನೆ ಬಿದ್ದುವು. ಯಾರಾದರೂ ನೋಡಿಯಾರು ಎಂದಂಜುತ್ತ,

ನಾಲ್ಕು ಕಡೆಗಳಿಗೂ ಕಣ್ಣು ತಿರುಗಿಸಿ, ಬೇಗನೇ ಅವಳು ಸೀರೆಯ ಸೆರಗಿನಿಂದ ಕಣ್ಣನ್ನು ಒರೆಸಿಕೊಂಡಳು. ತಾನೇಕೆ ಹೆಣ್ಣಾಗಿ, ಮನೆಗೆ ಭಾರವಾಗಿ ಹುಟ್ಟಿದೆನೆಂದು, ತನ್ನನ್ನೇ ನಿಂದಿಸಿಕೊಂಡಳು.

೭

ತಂದೆಯ ಅಂಕೆಯಲ್ಲಿ ಹೆಚ್ಚುದಿನ ಇರುವುದು ರಾಘುವಿಗೆ ಸಾಧ್ಯವಾಗಿರಲಿಲ್ಲ. ಮೇಲಾಗಿ ಅವನಿಗೀಗ ಹಣದ ಆವಶ್ಯಕತೆ ಹೆಚ್ಚಿದ್ದಿತು. ವಯಸ್ಕನಾದಮೇಲೆ ಪ್ರತಿಯೊಂದಕ್ಕೂ ತಂದೆಯನ್ನು ಹಣ ಕೇಳುವುದು, ಅವನಿಗೆ ನಾಚಿಕೆಯಾಗಿದ್ದಿತು. ಗುಂಡೂರಾಯರು ಜಿಪುಣ ವ್ಯಕ್ತಿಯೇನೂ ಅಲ್ಲ. ಮಗನು ಮುಂದುವರೆಯಬೇಕೆಂದು ಅವರು ಆಶಿಸುತಿದ್ದರು ಅಷ್ಟೆ. ಕೆಟ್ಟ ನಡತೆಯ ಮಗನ ಮೇಲೆ, ಇದಕ್ಕಾಗಿಯೇ ನಿಂದೆ ಬೈಗುಳಗಳ ಮಳೆಗಳನ್ನು ಸುರಿಸುತಿದ್ದರು. ರಾಘು ಹಣದ ರುಚಿ ನೋಡಿದವನು. ಅವನಿಗೆ ಹಣ ಬೇಕಾಗಿದ್ದಿತು. ತನ್ನ ಅಭಿಲಾಷೆಯನ್ನು ತಾಯಿಗೆ ತಿಳಿಸಿದನು. ಶಾರದಮ್ಮನವರು ಹೇಗಾದರೂ ಮಗನನ್ನು ಒಳ್ಳೆಯದಾರಿಗೆ ತರಲು ಪ್ರಯತ್ನಿಸುತಿದ್ದರು. ಯಾವುದಾದರೊಂದು ಉದ್ಯೋಗವಾದರೂ ದೊರೆತಲ್ಲಿ, ಸಂಪಾದನೆಯ ಮೇಲೆ ಮನಸ್ಸು ತಿರುಗುವುದಾಗಿ ಅವರು ನಂಬಿದರು. ಗುಂಡೂರಾಯರಿಗೆ ಒತ್ತಾಯ ಹೆಚ್ಚಾಯಿತು. ಅವರೂ ಎಲ್ಲೆಲ್ಲಿಲ್ಲ ಅಲೆದಾಡಿದರು. ಬಿ.ಎ. ಡಿಗ್ರಿ ಪಡೆದವರುಗಳೇ, ನೂರಾರು ಮಂದಿ ಮೈಸೂರಿನಲ್ಲಿ ತುಂಬಿರುವಾಗ, ಉದ್ಯೋಗಕ್ಕಾಗಿ ಹೊಡೆದಾಡುತ್ತಿರುವಾಗ, ನಾಲ್ವತ್ತು ಮಾರ್ಕ್‌ಗಳಿಸಿ ತೇರ್ಗಡೆಯಾದ ನಮ್ಮ ಎಸ್. ಎಸ್. ಎಲ್. ಸಿ. ರಾಘುವಿಗೆ ಎಲ್ಲಿಂದ ಉದ್ಯೋಗ ದೊರಕೀತು? ಗುಂಡೂರಾಯರು ತಮ್ಮ ಹಿಂದಿನ ಪ್ರಭಾವ ಸ್ನೇಹಗಳ ಬಲದಿಂದ, ಯಾರಾರನ್ನೊ ಹಿಡಿದು ಹೇಗೆಹೇಗೋ ಮಾಡಿ ಟ್ಯೈರ್ ಕಂಪೆನಿಯೊಂದರಲ್ಲಿ ಅವನಿಗೆ ಕೆಲಸ ದೊರೆಕಿಸಿ

ಕೊಟ್ಟರು: ರಾಘು ಹಿಗ್ಗಿ ಹೀರೆಕಾಯಿಯಾದನು. ಅರವತ್ತು ರೂಪಾಯಿ ಸಂಬಳಕೊಡುವುದಾಗಿ ಮಾಲೀಕರು ಒಪ್ಪಿದ್ದರು. ಇನ್ನೇನು ? ಅರಸನ ಅಂಕೆಯಿಲ್ಲ; ದೈವದ ಕಾಟವಿಲ್ಲ. ತಾನು ಲೀಲಾಜಾಲವಾಗಿ ಇರಬಹುದೆಂದು ರಾಘು ಮನಸ್ಸಿನಲ್ಲೇ ಅಂದುಕೊಂಡನು. ಸ್ವಲ್ಪ ದಿನ ಕ್ರಮವಾಗಿಯೇ ಅವನು ಮನೆಗೆ ಬರುತಿದ್ದನು. ಆಮೇಲಾಮೇಲೆ ಮನೆ ದೂರವಾಗಿದೆಯೆಂದೂ, ಆದುದರಿಂದ ತಾನು ಹೋಟಲಿನಲ್ಲಿಯೇ ಊಟಮಾಡಿದೆನೆಂದೂ, ಸುಳ್ಳುಹೇಳಿ ತಪ್ಪಿಸಿಕೊಳ್ಳುತಿದ್ದನು. ಕ್ರಮೇಣ ಅವನು ಮನೆಗೆ ಬರುವುದೇ ಅಪರೂಪವಾಯಿತು. ಗುಂಡೂರಾಯರು ತಾವೇ ಕಂಪೆನಿಗೆ ಹೋಗಿ ವಿಚಾರಿಸಿದರು. ಕೆಲಸ ಮುಗಿದ ಮೇಲೆ ಅವನಲ್ಲುಳಿಯುವುದಿಲ್ಲವೆಂದೂ, ಎಲ್ಲಿಗೆ ಹೋಗುವನೆಂದು ತಮಗೆ ತಿಳಿಯದೆಂದೂ, ಮಾಲೀಕರು ತಿಳಿಸಿದರು. ಮನೆಗೆ ಬಂದು ಗುಂಡೂರಾಯರು ರೇಗಾಡುತಿದ್ದರು. ವಾರಕ್ಕೊವ್ಮೆಯೋ, ಎರಡಾವೃತ್ತಿಯೋ ರಾಘು ಮನೆಗೆ ಬಂದು ಮುಖತೋರಿಸಿದಾಗ ವಿಚಾರಿಸಿದರೆ, ಅಷ್ಟುದೂರ ಯಾರು ನಡೆಯುವರೆಂದು ತನ್ನ ಸ್ನೇಹಿತನ ಮನೆಯಲ್ಲಿ ಮಲಗುವುದಾಗಿಯೂ, ಇಲ್ಲವೇ ತಾನು ಹೋಟಲಿನಲ್ಲೇ ತಂಗುವುದಾಗಿಯೂ, ಏನಾದರೊಂದು ಸುಳ್ಳುಹೇಳಿ, ಚಳ್ಳೆಬೀಜದಂತೆ ತಪ್ಪಿಸಿಕೊಳ್ಳುತಿದ್ದನು. ಶಾರದಮ್ಮನವರು ತಮ್ಮ ವಂಶವು ಪವಿತ್ರವಾದುದೆಂದೂ, ತಮ್ಮ ಪೂರ್ವಿಕರುಗಳು ಬಹಳ ದಕ್ಷತೆಯಿಂದ ಬಾಳಿ ಬದುಕಿದವರೆಂದೂ, ಮನೆಗೆ ಕೆಟ್ಟ ಹೆಸರು ತರಬೇಡವೆಂದೂ, ಮಗನಿಗೆ ಬುದ್ಧಿವಾದ ಹೇಳಿ ಬೋಧಿಸಿ, ಕಳುಹಿಸುತಿದ್ದರು.

೮

ನೂರಡಿ ರಸ್ತೆಯಿಂದ ಬಲಪಾರ್ಶ್ವ ತಿರುಗಿ, ನಾಲ್ಕನೇ ಗಲ್ಲಿಗೆ ಪ್ರವೇಶಿಸಿದರೆ, ಅಲ್ಲೆ ಆರನೆ ನಂಬರ್ ಮನೆಯಲ್ಲೆ

ಸರೋಜ ವಾಸಿಸುವುದು. ಸರೋಜ ಯಾರು ಎಂಬುದನ್ನು ವಾಚಕರಿಗೆ ತಿಳಿಸುವುದು ಅತ್ಯಗತ್ಯ. ಅವಳು ಮಂಡ್ಯದ ಬಳಿ ಹಳ್ಳಿಯೊಂದರಲ್ಲಿ ಒಳ್ಳೆ ಕುಲಸ್ಥರ ಮನೆಯಲ್ಲಿ ಹುಟ್ಟಿದಳು. ಚಿಕ್ಕ ವಯಸ್ಸಿನಲ್ಲೆ ತಾಯಿಯನ್ನು ಕಳೆದು ಕೊಂಡುದರಿಂದ, ತಂದೆ ರಾಜಣ್ಣನವರ ಪಾಲನೆಯಲ್ಲೆ ಅವಳು ಬೆಳೆದಳು. ಆಗ ಅವಳು ಒಳ್ಳೆ ಸುಶಿಕ್ಷಿತಳಾಗಿಯೆ ಇದ್ದಳು. ರಾಜಣ್ಣನವರು ತಮ್ಮ ಭಾವ ಮೈದುನನಾದ ಕೃಷ್ಣಪ್ಪನಿಗೇ ಸರೋಜಳನ್ನು ಕೊಟ್ಟು ವಿವಾಹಮಾಡಿದ್ದರು. ಆದರೆ ಕೃಷ್ಣಪ್ಪ ಪಕ್ಕಾಪೋಲಿ. ಒಬ್ಬ ಗಾಣಗಿತ್ತಿಯನ್ನು ಇಟ್ಟುಕೊಂಡು ಅವನು ಓಡಾಡುತಿದ್ದನು. ವಿವಾಹವಾಗಿ ಆರು ವರ್ಷಗಳು ಕಳೆದರೂ, ಪತಿ ತನ್ನನ್ನು ಗಮ ನಿಸದಿರುವುದನ್ನು ಕಂಡು, ಸರೋಜ ರೋಸಿಹೋದಳು. ರಾಜಣ್ಣ ನವರೂ, ಮತ್ತಿತರರೂ ಸೇರಿ, ಏನೇನೋ ಪ್ರಯತ್ನಮಾಡಿದರೂ ಸಹ, ಕೃಷ್ಣಪ್ಪ ಸತಿಯನ್ನು ಬಾಳಿಸಲೇ ಇಲ್ಲ. ತುಂಬು ಯೌವನ ದಲ್ಲಿದ್ದ ಸರೋಜ ತನ್ನ ಸೌಂದರ್ಯವು ಹೀಗೆಯೇ ಕುಂದಿ ಹೋಗುತ್ತದಲ್ಲಾ ಎಂದು ಪರಿತಪಿಸುತಿದ್ದಳು. ಮಕರಂದವಿದ್ದೆಡೆ ಜೇನುನೊಣ ಬಾರದಿರುತ್ತದೆಯೇ? ಊರ ಪೋಲಿಗಳು ಮೊದಲು ಸರೋಜಳ ಮೇಲೆ ಕಣ್ಣುಹಾಯಿಸಿದರು. ಸಮಾಜ ಅವಳನ್ನು ವ್ಯಭಿಚಾರಿಣಿಯನ್ನಾಗಿ ಮಾಡಿತು. ಅಪೇಕ್ಷಿಸಿದವರಿಗೆ ಒಲ್ಲೆನೆನ್ನದೆ, ಚಾಪೆಹಾಸುತ್ತ, ಹಲವಾರು ಮಂದಿಯ ತೋಳ್ತೆಕ್ಕೆ ಗಳಲ್ಲಿ ಸಿಕ್ಕಿ ಸುಖವನ್ನನುಭವಿಸಲು ಆರಂಭಿಸಿದಳು. ರೇವಣ್ಣ ಆ ಊರಿನಲ್ಲಿ ಪ್ರಬಲ ವ್ಯಾಪಾರಿ. ಅವನ ಬಳಿಯಲ್ಲೆ ಕೃಷ್ಣಪ್ಪ ಗುಮಾಸ್ತೆಯಾಗಿದ್ದನು. ರೇವಣ್ಣನ ವಹಿವಾಟೆಲ್ಲವನ್ನೂ ಅವನೇ ನಡೆಸುತಿದ್ದನು. ಜೋಳ ಮತ್ತಿತರ ಧಾನ್ಯಗಳನ್ನು ಕಡಿಮೆ ಬೆಲೆಗೆ ಕೊಂಡು, ಲಾರಿಗಳಲ್ಲಿ ತುಂಬಿಸಿ, ಕಲ್ಲಿಕೋಟೆ ಕಡೆಗೆ ಕಳು ಹಿಸಿ ಅವನು ಹಣ ಸಂಪಾದನೆ ಮಾಡುತಿದ್ದನು. ಅವನು ಯಾವಾಗಲೂ ಊರಿನಲ್ಲಿ ನಿಲ್ಲುತ್ತಿರಲಿಲ್ಲ. ದಾವಣಗೆರೆ,

ಹುಬ್ಬಳ್ಳಿ, ಕಲ್ಲಿಕೋಟೆಯೆಂದು ಸುತ್ತುತ್ತಲೇಯಿದ್ದನು. ಆದುದರಿಂದ ಊರಿನಲ್ಲಿ ಎಲ್ಲ ಜವಾಬ್ದಾರಿಯನ್ನು ಕೃಷ್ಣಪ್ಪನಿಗೇ ವಹಿಸಿದ್ದುದರಿಂದ, ಅವನು ಬರೀ ಗುಮಾಸ್ತನಾಗಿರದೆ, ಮೇನೇಜರ್ ಹಂತದವರೆಗೂ ಇದ್ದು, ರೇವಣ್ಣನ ಕಣ್ಣಿಗೆ ಮಣ್ಣನ್ನೆರಚಿ ಅವನಿಗಿಂತ ಇವನೇ ಹೆಚ್ಚು ಹಣ ಸೇರಿಸಿ ಸಾಹುಕಾರನಾಗಿದ್ದನು. ಅಕಸ್ಮಾತ್ ಒಂದು ದಿನ ಕೃಷ್ಣಪ್ಪನ ಮನೆಯ ಮುಂದೆ ರೇವಣ್ಣ ಹಾದು ಹೋಗುವಾಗ ಸರೋಜಳನ್ನು ನೋಡಿದ್ದನು. ತನಗೆ ಪ್ರಣಯ ಭಿಕ್ಷೆಯನ್ನು ನೀಡಲಾರೆಯಾ ಎಂದು ಅವಳ ಕಣ್ಣುಗಳು ಕೇಳುವಂತಿತ್ತು. ವಿಶ್ರಾಂತಿಕಾಲದಲ್ಲಿ ಮೈ ಒತ್ತಲು, ರೇವಣ್ಣನಿಗೆ ಒಬ್ಬ ಸ್ತ್ರೀ ವ್ಯಕ್ತಿಬೇಕಾಗಿದ್ದಿತು. ಸರೋಜಳ ಸ್ನೇಹವನ್ನು ಸಂಪಾದಿಸುವುದು ಅವನಿಗೆ ಹೆಚ್ಚೇನೂ ಕಷ್ಟವಾಗಿರಲಿಲ್ಲ. ಹೆಂಡತಿಯನ್ನು ಧಣಿಗೆ ದಾನಮಾಡಿ ಹಣಸಂಪಾದನೆ ಮಾಡುತಿದ್ದಾನೆ, ಎಂದು ಜನರಾಡುವ ಮಾತು ಕೃಷ್ಣಪ್ಪನ ಕಿವಿಗೂ ಮುಟ್ಟಿತು. ಆದರೆ ತಪ್ಪು ಯಾರದು? ಪ್ರಾರಂಭದಿಂದಲೂ ಪತ್ನಿಯನ್ನು ಸರಿಯಾಗಿ ಗಮನಿಸಿಕೊಂಡಿದ್ದಲ್ಲಿ, ಅವಳೇಕೆ ಈ ಹೀನ ಕಸಬಿಗೆ ಬೀಳುತಿದ್ದಳು. ಒಂದು ದಿನ ಸಂಜೆ ಕೃಷ್ಣಪ್ಪ ಮನೆಗೆ ಹೋದಾಗ ರೇವಣ್ಣ ಸರೋಜ ಒಟ್ಟಿಗಿರುವ ದೃಶ್ಯವನ್ನು ಕಣ್ಣಾರೆ ಕಂಡನು. ಸರೋಜ ರೇವಣ್ಣನ ತೋಳ್ತೆಕ್ಕೆಯಲ್ಲಿ ಸಿಕ್ಕಿ, ಸ್ವರ್ಗ ಸುಖವನ್ನನುಭವಿಸುತಿದ್ದಳು. ಕೃಷ್ಣಪ್ಪ ಅದನ್ನು ಕಂಡು ಕಿಡಿಕಿಡಿಯಾದನು. ಅವನನ್ನು ಕಂಡೊಡನೆಯೆ ರೇವಣ್ಣ ಬೇಗಬೇಗನೆ, ಹೊರಗೆ ಓಡಿಹೋದನು. ಕೋಪಗ್ರಸ್ತನಾದ ಕೃಷ್ಣಪ್ಪ ಮೂಲೆಯೊಂದರಲ್ಲಿದ್ದ ದೊಣ್ಣೆಯನ್ನು ತೆಗೆದುಕೊಂಡು, ಪತ್ನಿಗೆ ಹೊಡೆಯಲು ಮೊದಲುಮಾಡಿದನು. ಅಯ್ಯೋ, ಅಯ್ಯೋ ಎಂದು ಸರೋಜ ಕೂಗಿಕೊಳ್ಳಲು, ಅಕ್ಕಪಕ್ಕದವರೆಲ್ಲಾ ಓಡಿಬಂದು ಬಿಡಿಸಿದರು. ಅಷ್ಟರೊಳಗಾಗಿ ಅವಳಿಗೆ ಪ್ರಜ್ಞೆತಪ್ಪಿತ್ತು. ತಲೆಗೆ ಸ್ವಲ್ಪ ನೀರು ಹಾಕಿ ತಟ್ಟಿ, ಗಾಳಿಬೀಸಿದ ಮೇಲೆ, ಅವಳಿಗೆ ಎಚ್ಚರ

ವಾಯಿತು. ಅವಳಿಗೊದಗಿದ ಸ್ಥಿತಿಯನ್ನು ಕಂಡು, ರೇವಣ್ಣ ರೇಗಿ ಹೋದನು. ಮೂಳೆ ಏನಾದರೂ ಮುರಿದಿದೆಯೋ ಏನೋ ಎಂಬ ಸಂದೇಹ ಬಂದು, ರಾಜಣ್ಣನವರು ಮಗಳನ್ನು ಮೈಸೂರಿನ ದೊಡ್ಡಾಸ್ಪತ್ರೆಗೆ ಸಾಗಿಸಿದರು. ರೇವಣ್ಣ ಆಸ್ಪತ್ರೆಗೆ ಹೋಗಿ ಸರೋಜಳನ್ನು ಕಂಡು, ಹೆದರದಿರುವಂತೆ ಅಭಯವಿತ್ತು ಬಂದನು. ಆಗಾಗ್ಗೆ ಹೋಗಿ ಹಣ್ಣುಗಳನ್ನೂ ಖರ್ಚಿಗೆ ಹಣ ವನ್ನೂ ಕೊಟ್ಟು, ಅವಳನ್ನು ನೋಡಿಬರುತಿದ್ದನು. ದಿನೇ ದಿನೇ ಅವಳಿಗೆ ಗುಣವಾಗುತ್ತ ಬಂದಿತು. ಗೇವಣ್ಣ ಮೈಸೂರಿನಲ್ಲಿಯೇ ತಾನೊಂದು ಮನೆ ಮಾಡುವುದಾಗಿಯೂ, ಅವಳು ಇನ್ನು ಊರಿಗೆ ಹಿಂದಿರುಗಬೇಕಾದ್ದಿಲ್ಲವೆಂದೂ, ಹೇಳಿದನು. ಸರೋಜ ಳಿಗೆ ಬೇಕಾಗಿದ್ದುದೂ ಅಷ್ಟೆ. ಆಸ್ಪತ್ರೆಯಿಂದ ಹೊರಬಂದ ಮೇಲೆ ರೇವಣ್ಣನು ಹೊಸದಾಗಿ ಮಾಡಿದ ಬಾಡಿಗೆ ಮನೆಗೇ ನೇರಾಗಿ, ಸರೋಜ ನಡೆದಳು. ಇಷ್ಟು ದಿನಗಳವರೆಗೂ ಕಳ್ಳ ವ್ಯಾಪಾರ ಮಾಡುತಿದ್ದ ಅವಳಿಗೆ, ಈಗ ಆ ಕಾಟ, ತೊಂದರೆ ಯೆಲ್ಲ ತಪ್ಪಿತು. ಅವಳು ಬಹಿರಂಗವಾಗಿಯೇ ರಾಚಪ್ಪನ ಸೂಳೆ ಯಾದಳು. ಕಳ್ಳತನದಿಂದಿದ್ದಾಗ ಕಣ್ಣುಕಾಣದಂತಿದ್ದು, ಬಯ ಲಿಗೆ ಬಂದನಂತರ, ಆರ್ಭಟಗೊಳ್ಳುವುದು ಸಮಾಜದ ಲಕ್ಷಣ ವಲ್ಲವೇ ? ಬಂಧು ವರ್ಗದವರು ಈಗ ಸರೋಜಳಿಂದ ದೂರ ವಾದರು. ಆದರೆ ಅವಳು ಅದನ್ನು ಗಣನೆಗೆ ತರಲೇ ಇಲ್ಲ. ಇನ್ನೇನವಳಿಗೆ ಕುಂದುಕೊರತೆ ? ಪಟ್ಟಣ ಬೆಡಗಿಗೆ ತವರಲ್ಲವೆ? ಮೇಲಾಗಿ ರೇವಣ್ಣನಂತ ಧನಿಕ ಅವಳ ಬೆಂಬಲಕ್ಕಿರುವಾಗ ಅವಳಿಗಿನ್ನೆಂತಹ ಚಿಂತೆ? ಸುಖವಾಗಿಯೇ ಅವಳು ಕಾಲಕಳೆಯು ತಿದ್ದಳು. ರಾಚಪ್ಪ ವಾರಕ್ಕೊಮ್ಮೆಯೊ ಎರಡಾವೃತ್ತಿಯೋ ಬಂದು ಅಲ್ಲಿ ತಂಗುತಿದ್ದನು. ಬೇಕಾದ ಸಾಮಗ್ರಿಗಳನ್ನು ಒದಗಿಸಿಕೊಟ್ಟು ಹೋಗುತಿದ್ದನು. ಕೆಲಸದಲ್ಲಿ ಚೆನ್ನಾಗಿ ತರ ಪೇತಾದ ಮೇಲೆ ರೇವಣ್ಣನ ಹಂಗು ದಾಕ್ಷಿಣ್ಯಗಳನ್ನೂ ಸಹ

ಅವಳು ಲೆಕ್ಕಿಸಲಿಲ್ಲ. ಮೈಸೂರಿನಂತ ಭಾರಿ ನಗರದಲ್ಲಿ ಅವಳಿಗೇನು ಗಿರಾಕಿ ಕಡಿಮೆಯೇ ? ವಾರಕ್ಕೆ ಆರು ತಡವೆ ಸಿನಿಮಾ ನೋಡುತ್ತ ಅವಳು ಸುಖಜೀವಿಯಾಗಿಯೇ ಇದ್ದಳು.

೬

ಟೈರ್ ಕಂಪೆನಿ ಮಾಲೀಕರಾದ ಧನಪಾಲಶೆಟ್ಟರಿಗೆ, ಸುಗಂಧದ್ರವ್ಯದ ವ್ಯಾಪಾರವನ್ನು ಮಾಡಬೇಕೆಂದು ಆಸೆಯುಂಟಾಯಿತು. "ಮಾರುತಿ" ಊದು ಬತ್ತಿ ಕಂಪೆನಿಯೊಂದನ್ನು ಅವರು ಸ್ಥಾಪಿಸಿದರು. ಊದುಬತ್ತಿ ಕಟ್ಟಲು ಗಂಡಸರಿಗಿಂತ ಹೆಂಗಸರೇ ಬಲು ಚುರುಕು ಕೈ ಯುಳ್ಳವರಾಗಿರುತ್ತಾರೆ. ಈ ಕಾರಣದಿಂದ ಅನೇಕಾನೇಕ ಹೆಣ್ಣು ಕಾರ್ಮಿಕರುಗಳಿಗೆ ಈ ಕಂಪೆನಿ ಕೆಲಸಮಾಡಲು ಅವಕಾಶವಿತ್ತಿತು. ಹೀಗೆ ಬಂದವರಲ್ಲಿ ಸರೋಜಳೂ ಒಬ್ಬಳಾದಳು. ಧನಪಾಲಶೆಟ್ಟರು ಊದುಬತ್ತಿ ವ್ಯಾಪಾರವನ್ನು ಏನೋ ಎಂದು ಕಡೆಗಣಿಸಿದ್ದರು. ವ್ಯಾಪಾರ ದಿನೇ ದಿನೇ ವೃದ್ಧಿಯಾಗುತ್ತ ಬಂದಿತು. ಅದರಲ್ಲಿ ಅಪರಿಮಿತವಾದ ಲಾಭವಿದೆಯೆಂಬುದು ಈಗ ಅವರಿಗೆ ಮನವರಿಕೆಯಾಯಿತು. ಎಷ್ಟು ಬಡಿದಾಡಿದರೂ ಅವರಿಗೇಕೋ ಟೈರ್ ಕಂಪೆನಿಯಲ್ಲಿ ಲಾಭಗಳಿಸಲು ಸಾಧ್ಯವಾಗಿರಲಿಲ್ಲ. ಆದುದರಿಂದ ಟೈರ್ ಕಂಪೆನಿಯನ್ನು ಯೋಗ್ಯಬೆಲೆಗೆ ಮಾರಿ, ಮೂಲಧನವೆಲ್ಲವನ್ನು ಊದುಬತ್ತಿ ಕಂಪೆನಿಗೇ ಹಾಕುವುದಾಗಿ ಅವರು ನಿರ್ಧರಿಸಿ, ಅನಂತರ ಹಾಗೆಯೇ ಮಾಡಿದರು. ಟೈರ್ ಕಂಪೆನಿಯನ್ನು ಕೊಂಡ ಹೊಸ ಮಾಲೀಕ ಬೇಕಾದ್ದಕ್ಕಿಂತ ಎಂಟಾರು ಆಳುಗಳು ಜಾಸ್ತಿಯಿರುವರೆಂದು, ಅವರು ಕೆಲಸಕ್ಕೆ ಬೇಕಾಗಿಲ್ಲವೆಂದು ನುಡಿದನು. ಅವರನ್ನು ತಮ್ಮ ಊದುಬತ್ತಿ ಕಂಪೆನಿಗೇ ಧನಪಾಲಶೆಟ್ಟರು ಸೇರಿಸಿಕೊಂಡರು. ಅವರು ಉದಾರಿಗಳು. ಮತ್ತೊಬ್ಬರ ಕಷ್ಟಸುಖಗಳನ್ನರಿತವರು. ಕಾರ್ಮಿಕರುಗಳಿಗೆ ಸೌಲಭ್ಯವೊದಗಬೇಕು,

ಸಂಬಳದಲ್ಲಿ ಬಡ್ತಿ ಸಿಗಬೇಕು, ದಿನ ಎಂಟು ಘಂಟೆ ಮಾತ್ರ ಕೆಲಸಮಾಡಬೇಕು, ಎಂಬ ಕೂಗು ಕೇಳುವುದಕ್ಕೆ ಮುಂಚಿತವಾಗಿಯೇ, ಧನಪಾಲಶೆಟ್ಟರು ಆ ಸೌಲಭ್ಯಗಳನ್ನು ಜಾರಿಗೆ ತಂದಿದ್ದರು. ಬೆಳಗ್ಯೆ ಎಂಟು ಘಂಟೆಗೆ ಅಂಗಡಿ ಬಾಗಿಲು ತೆಗೆದು ಕೆಲಸಗಾರರುಗಳನ್ನು ಎರಡು ಸರದಿಯಲ್ಲಿ ಕೆಲಸಮಾಡಿಸಿ, ರಾತ್ರಿ ಹತ್ತು ಘಂಟೆಗೆ ಬಾಗಿಲು ಮುಚ್ಚುತಿದ್ದರು. ಧನಪಾಲಶೆಟ್ಟರು ವಿದ್ಯಾರ್ಥಿಯಾಗಿದ್ದಾಗ ಸಮತಾವಾದಿ ಆಗಿದ್ದರಂತೆ. ಆದುದರಿಂದಲೇ ಅವರು ಹೀಗಿರುವುದು ಎಂದು ಜನ ಆಡುತಿದ್ದರು. ಹೊಸ ಊದು ಬತ್ತಿ ಕಂಪೆನಿಯಲ್ಲಿ ರಾಘುವೂ ಸೇರಿಕೊಂಡನು. ಅವನು ಎಷ್ಟೇ ಪೋಲಿಯಾಗಿದ್ದರೂ, ಕೆಲಸದಲ್ಲಿ ಚತುರನಾಗಿದ್ದುದರಿಂದ, ಧನಪಾಲಶೆಟ್ಟರ ಪ್ರೀತಿ ವಿಶ್ವಾಸಗಳನ್ನು ಗಳಿಸಿದ್ದನು. ಆದುದರಿಂದ ಮತ್ತಿತರ ಕಾರ್ಮಿಕರುಗಳ ಕೈಯಿಂದ, ಕೆಲಸ ತೆಗೆಯುವ ಉಸ್ತುವಾರಿಕೆ ಅವನಿಗೆ ದೊರಕಿತು. ನಾಲ್ಕಾರು ಸಲ ಕೆಲಸದ ನಿಮಿತ್ತ, ಅತ್ತಿಂದಿತ್ತ ಇತ್ತಿಂದತ್ತ ಸುಳಿದಾಡುವಾಗ, ಮತ್ತಿತರ ಹೆಂಗಸರುಗಳಿಗಿಂತಲೂ ವಯಸ್ಸಿನಲ್ಲಿ ಚಿಕ್ಕವಳಾಗಿ, ತುಂಬು ಸುಂದರಿಯಾಗಿದ್ದ ಸರೋಜಳ ಮೇಲೆ ದೃಷ್ಟಿ ಹಾಯಿಸುತಿದ್ದನು. ಎಲ್ಲರೂ ಕೆಲಸದಲ್ಲಿಯೇ ತಲ್ಲೀನರಾಗಿದ್ದಾರೆ, ಸರೋಜಳೊಬ್ಬಳು ಮಾತ್ರ ಆಗಾಗ್ಯೆ ರಾಘುವನ್ನು ಕಡೆಗಣ್ಣಿನಿಂದ ನೋಡಿ, ಮುಗುಳ್ನಗೆ ನಗುತ್ತಿದ್ದಳು. ನಾಲ್ಕು ಕಣ್ಣುಗಳೂ ಒಂದಾವರ್ತಿ ಒಟ್ಟಿಗೆ ಸೇರಿಕೊಂಡು, ಮಾತನಾಡಿಕೊಂಡು ತಮ್ಮ ಸ್ನೇಹವನ್ನು ನಿರ್ಧರಿಸಿಕೊಂಡುವು. ಇಬ್ಬರೂ ಹದಗೆಟ್ಟವರಾದುದರಿಂದ ಒಟ್ಟು ಸೇರಲು ಹೆಚ್ಚು ದಿನವೇನೂ ಹಿಡಿಯಲಿಲ್ಲ.

## ೧೦

ಈಗ ಸರೋಜಳ ಮನೆಯಲ್ಲೇ ರಾಘು ವಾಸಿಸ ತೊಡಗಿದನು. ಸರೋಜಳನ್ನು ತನ್ನ ನಿರಂತರ ಪತ್ನಿಯನ್ನಾಗಿಯೇ ಅವನು ಎಣಿಸಿಕೊಂಡನು. ಮನೆಗೆ ಅವನೀಗ ಹೋಗುವುದೇ ಇಲ್ಲವಾಯಿತು. ಶಾರದಮ್ಮನವರಿಗೂ ಪತಿ ಗುಂಡೂರಾಯರಿಗೂ ಕ್ರಮೇಣ ಈ ಸಂಗತಿ ತಿಳಿದು ಮಗ ಹೇಗೆ ಮುಂದುವರಿದು ಬಾಳುತ್ತಾನೊ ಎಂದು ಮರುಗುತಿದ್ದರು. ಧನಪಾಲ ಶೆಟ್ಟರ ಕಿವಿಯಲ್ಲಿ ಈ ಸುದ್ದಿಯನ್ನು ಹಾಕಿ, ಸರೋಜಳನ್ನು ಕಂಪೆನಿಯಿಂದಲೇ ಬಿಟ್ಟು ಓಡಿಸುವಂತೆ ಹೇಳಬೇಕೆಂದು ಶಾರದಮ್ಮನವರು ಪತಿಗೆ ಸೂಚನೆ ಕೊಟ್ಟರು. ಗುಂಡೂರಾಯರಿಗೆ ಈ ಅಭಿಪ್ರಾಯ ಹಿಡಿಸಲಿಲ್ಲ. ತಮ್ಮ ಮಗ ಶೀಲವಂತನಾಗಿದ್ದಲ್ಲಿ, ಮತ್ತಾರು ಏನು ಮಾಡಬಹುದಾಗಿದ್ದಿತು ? ಅವನೇ ಹದಗೆಟ್ಟಿರುವಾಗ ಮತ್ತೊಬ್ಬರನ್ನು ದೂಷಿಸುವುದು ಸರಿಯಲ್ಲವೆನ್ನುತಿದ್ದರು. ಮೇಲಾಗಿ ಹಲವಾರು ಕಾರ್ಮಿಕರುಗಳು ಕೆಲಸ ಮಾಡುವಾಗ, ಸರೋಜಳನ್ನು ಕೆಲಸದಿಂದ ತೆಗೆದು ಹಾಕಿ ಎಂದು ಹೇಳಲು ಇವರಿಗಾವ ಅಧಿಕಾರವಿದೆ. ಒಂದು ಸಮಯ ಅವಳು ಕಂಪೆನಿಯಿಂದ ತೆಗೆಯಲ್ಪಟ್ಟರೂ, ಕಸಬುಗಾತಿಯಾದ ಅವಳಿಗೆ ಮೈಸೂರಿನಲ್ಲಿ ಉದ್ಯೋಗಕ್ಕೇನು ಕೊರತೆಯೇ ? ಮೇಲಾಗಿ ರಾಘು—ಸರೋಜರ ಸಂಬಂಧ ಇದರಿಂದ ಕಡಿಮೆಯಾಗುವುದೇ? ಇದನ್ನೆಲ್ಲಾ ಅವರು ಆಲೋಚಿಸಿದ್ದರು. ಇದು ಬಗೆಹರಿಯದ ಪ್ರಶ್ನೆಯಾಗಿ ಅವರು ದಿಕ್ಕುಗಾಣದಂತಿದ್ದರು. ಎಷ್ಟೇ ಕೆಲಸದಲ್ಲಿ ಲೀನವಾಗಿದ್ದರೂ, ಒಬ್ಬರನ್ನು ನೋಡಿ ಮತ್ತೊಬ್ಬರು ನಗುವುದು, ಕಣ್ಣಿನಿಂದಲೇ ಮಾತನಾಡಿಕೊಳ್ಳುವುದು, ಅಂಗಚೇಷ್ಟೆಮಾಡುವುದು, ಮೊದಲಾದ ವಿವಿಧ ಲೀಲೆಗಳಿಂದ, ಸಂಜ್ಞೆಗಳಿಂದ, ಅವರಿಬ್ಬರ ಸ್ನೇಹ ಬೆಳೆಯುತ್ತಿರುವುದನ್ನು ಗುಂಡೂರಾಯರಿಗಿಂತ

ಮೊದಲೇ ಧನಪಾಲಶೆಟ್ಟರು ತಿಳಿದುಕೊಂಡಿದ್ದರು. ಅದೆಲ್ಲಾ ಹುಡುಗತನದಲ್ಲಿ ಸಹಜವೆನ್ನುತಿದ್ದರು. ಮೇಲಾಗಿ, ರಾಘುವಿನ ವ್ಯವಹಾರವನ್ನು ಅವರು ಟೈರ್‌ಕಂಪೆನಿಯಲ್ಲಿ ಕೆಲಸಮಾಡುತಿದ್ದಾಗಿನಿಂದಲೂ ಅರಿತಿದ್ದರು. ಕಾಮದಾಹದಲ್ಲಿ ಅವನು ಎಲ್ಲರಿಗಿಂತ ಒಂದು ಕೈ ಮಿಗಿಲಾಗಿದ್ದರೂ ವಿವಾಹ ಮಾಡಿದಲ್ಲಿ ಎಲ್ಲವೂ ಸರಿಹೋಗುತ್ತದೆ, ಎಂದು ಅಭಿಪ್ರಾಯಪಟ್ಟಿದ್ದರು. ಅವನು ಎಷ್ಟೇ ಕಾಮಿಯಾಗಿದ್ದರೂ, ಧನಪಾಲಶೆಟ್ಟರಿಗೆ ಪ್ರೀತಿಯ ಕೆಲಸಗಾರನಾಗಿದ್ದನು. ಕೆಟ್ಟ ಹಾದಿಯಲ್ಲಿ ನಡೆಯುತಿದ್ದರೂ ಅವನ ದಕ್ಷತೆ ಮಿಕ್ಕುಳಿದವರಿಗೆ ಬಂದಿರಲಿಲ್ಲ. ಆದುದರಿಂದಲೇ ಶೆಟ್ಟರು ಅವನ ವಿಷಯದಲ್ಲಿ ಸಹಾನುಭೂತಿಯನ್ನು ತೋರಿಸಿದ್ದರು.

## ೧೧

ಟೈರ್ ಕಂಪೆನಿಯಲ್ಲಿ ಕೆಲಸಮಾಡುತಿದ್ದಾಗ—ಸರೋಜಳ ಸ್ನೇಹವನ್ನು ಸಂಪಾದಿಸುವುದಕ್ಕೆ ಮೊದಲು—ರಾಘು ವಿಜಯ ಎಂಬ ದಾಸಿಯೊಬ್ಬಳ ಬಳಿ, ತನ್ನ ಕಾಮ ಪಿಪಾಸೆಯನ್ನು ತೀರಿಸಿಕೊಳ್ಳುತಿದ್ದನು. ಅವನು "ಮಾರುತಿ" ಕಂಪೆನಿಗೆ ಸೇರಿದ ಮೇಲೂ, ಒಂದೆರಡಾವೃತ್ತಿ ವಿಜಯಳ ಗೃಹಕ್ಕೆ ಧಾವಿಸಿದ್ದನು. ಸರೋಜ ಸಿಕ್ಕಿದ ಮೇಲೆ ಈಗ ವಿಜಯಳ ಬಳಿ ಹೋಗುವುದನ್ನೇ ಬಿಟ್ಟಿದ್ದನು. ವಿಜಯ ಹುಟ್ಟುದಾಸಿ. ಸರೋಜ ಒಳ್ಳೆ ಕುಲಸ್ಥರ ಮನೆಯ ಹೆಣ್ಣಾಗಿದ್ದು, ಈಗ ದಾಸಿಯಾಗಿರುವವಳು. ಕುರುಡುಗಣ್ಣಿಗಿಂತ ಗುಡ್ಡೆಕಣ್ಣು ಸ್ವಲ್ಪ ಮೇಲ್ಮಟ್ಟದ್ದಲ್ಲವೆ? ಅಲ್ಲದೆ ವಿಜಯಳಿಗೀಗ ಮೂವತ್ತು ವರ್ಷ ದಾಟಿದೆ. ದೊಡ್ಡವಳಾದಂದಿನಿಂದ ಹಿಡಿದು ಈವರೆಗೆ, ಎಷ್ಟೋ ಮಂದಿಗೆ ಅವಳು ಚಾಪೆ ಹಾಸಿದ್ದಾಳೆ. ಹೇಗಾದರೂ ಈಗವಳು

ಬಾಡಿದ ಪುಷ್ಪ, ಮುಪ್ಪು ಅವಳನ್ನು ಸ್ವಲ್ಪ ಸ್ವಲ್ಪವಾಗಿ ಆವರಿಸಿ ಕೊಂಡಿತ್ತು. ಒಂದೆರಡು ಬಿಳಿಯ ಕೂದಲುಗಳೂ ಮುಂದುಗಡೆ ಕಾಣಿಸಿಕೊಂಡಿದ್ದುವು. ಅವನ್ನು ಅವಳು ತೈಲಹಚ್ಚಿ ಕಪ್ಪಗೆ ಮಾಡಿ ಮುಚ್ಚುತಿದ್ದಳು. ಮುಖದಲ್ಲಿ ಮೊದಲಿನಷ್ಟು ರೂಪು ಈಗ ಅವಳಿಗಿರಲಲ್ಲ; ಕುಂದಿತ್ತು. ಇತ್ತೀಚೆಗೆ, ರಾಘು ಬಾರ ದಿದ್ದುದು ಅವಳಿಗೆ ವಿಸ್ಮಯವನ್ನುಂಟು ಮಾಡಿತ್ತು. ಅವನು ಹಾಗೆ ಉಳಿಯುವವನಲ್ಲವಲ್ಲಾ ಎಂದು ಆಲೋಚಿಸುತಿದ್ದಳು. ಎಲ್ಲರಿಗಿಂತ ಹೆಚ್ಚಿನ ವರಮಾನ ರಾಘುವಿನಿಂದ ಸಿಗುತಿತ್ತು. ಸುದ್ದಿ ಸಂಗ್ರಹಿಸುವವರೂ, ವಿಶೇಷ ವರದಿಯನ್ನೊಪ್ಪಿಸುವ ವರೂ, ಅವಳ ಆಫೀಸಿನಲ್ಲಿ, ಹೇರಳವಾಗಿಯೇ ಇದ್ದರು. ಅವರು ಗಳ ಬಲದಿಂದ ರಾಘು ತನ್ನ ಬಳಿಗೆ ಬಾರದಿದ್ದುದನ್ನು ಕಂಡು ಹಿಡಿದಳು. ತನಗೆ ಸಿಗುತಿದ್ದ ವರಮಾನವನ್ನು ಸರೋಜ ಕಸಿದು ಕೊಂಡಳಲ್ಲ ಎಂದು ಅಸೂಯೆಪಟ್ಟಳು. ಇರಲಿ, ತಕ್ಕುದ್ದು ಮಾಡುತ್ತೇನೆಂದು ಹಲ್ಲು ಕಡಿದಳು. ಗೋಪ್ಯವಾಗಿ ಒಂದು ಆಳು ಕಳುಹಿಸಿ ರಾಘುವನ್ನು ತನ್ನಲ್ಲಿಗೆ ಬರಮಾಡಿಕೊಂಡಳು. “ತಾನು ದಾಸಿಯಲ್ಲವೆಂಪೂ, ಅವನನ್ನು ಬಿಟ್ಟರೆ ಬೇರೆ ಯಾವ ಗಂಡನ್ನೂ ಕಣ್ಣೆತ್ತಿಯು ಸಹ ನೋಡಿಲ್ಲವೆಂದೂ, ತನಗಾರೀತಿ ಅನ್ಯಾಯಮಾಡುವುದು ಸರಿಯಲ್ಲವೆಂದೂ, ಅವನ ಮುಂದೆ ತೋಡಿಕೊಂಡಳು; ನಟನೆಯ ಕಣ್ಣೀರು ಸುರಿಸಿದಳು. ಒಂದು ಹೆಣ್ಣಿನ ಕೂಡ ಬೆರೆತಾಗ, ಮತ್ತೊಬ್ಬಳನ್ನು ಪ್ರೀತಿಸುತ್ತೇನೆಂದು ಯಾವ ಗಂಡಸು ತಾನೆ ಹೇಳುತ್ತಾನೆ! ರಾಘು ಸಹ ಅದಕ್ಕೆ ಬೇರೆಯಾದವನೇನೂ ಅಲ್ಲ. ಕಂಪೆನಿಯಲ್ಲಿ ಕೆಲಸ ಜಾಸ್ತಿ ಯಾಗಿದ್ದುದರಿಂದ ತಾನು ಬರಲಿಲ್ಲವೆಂದೂ, ಆಕೆಯನ್ನು ಬಿಟ್ಟು ಬೇರೆ ಯಾರನ್ನೂ ತಾನು ಪ್ರೀತಿಸುವುದಿಲ್ಲವೆಂದೂ, ವಿಜಯಳಿಗೆ ಸಮಾಧಾನವಿತ್ತು ಅಂದು ರಾತ್ರಿ ಅಲ್ಲಿ ತಂಗಿದ್ದು ಬಂದನು.

## ೧೨

ರಾಘು ವಿಜಯಳಿಗೆ ಅಭಯವಿತ್ತು ಬಂದಮೇಲೆ ತಿರುಗಿ ಅವಳ ಮನೆಗೆ ಹೋಗಲೇಯಿಲ್ಲ. ವಿಜಯ ಮತ್ತೊಂದು ತಡವೆ ಹೇಳಿಕಳುಹಿಸಿದಳು. ಅವನು ಆಳು ಬಂದಾಗ ವಿಜಯಳ ಮನೆಗೆ ಹೋಗಿ, ಅಷ್ಟು ಇಷ್ಟು ಕೊಟ್ಟು ಸಮಾಧಾನಪಡಿಸಿ ಬಂದವನು ಮತ್ತೆ ಹಿಂತಿರುಗುತ್ತಲೇ ಇರಲಿಲ್ಲ. ಈ ನಾಟಕ ಹಲವಾರು ದಿನಗಳು ನಡೆಯಿತು. ಏನು ಗಾಳ ಹಾಕಿದರೂ ಈ ಮೀನು ತನಗಿನ್ನು ದೊರೆಯಲಾರದೆಂದು ವಿಜಯ ತಿಳಿದುಕೊಂಡಳು. ಸೇಡನ್ನು ತೀರಿಸಿಕೊಳ್ಳಲು ದಂಡಸೇವೆ ಒಂದೇ ಮದ್ದು ಎಂದು ನಿರ್ಧರಿಸಿಕೊಂಡಳು. ಒಂದು ದಿನ ತಾನು ಸುಂದರಿಯ ಮನೆ ಯಲ್ಲಿರುವುದಾಗಿಯೂ, ಆವಶ್ಯಕವಾದ ಮಾತುಕತೆಗಳಿರುವುದ ರಿಂದ ತನ್ನನ್ನು ಅಲ್ಲಿ ಸಂಧಿಸಬೇಕೆಂದೂ, ಹೇಳಿಕಳುಹಿಸಿದಳು. ಸುಂದರಿ ವಿಜಯಳ ಅಕ್ಕನ ಮಗಳು; ಅವಳೂ ಸಹ ನುರಿತ ಕಸಬುಗಾತಿಯೇ. ರಾಘುವಿಗೆ ಸುಂದರಿಯೆಂದರೆ ಸ್ವಲ್ಪ ಬಾಯಿ ನೀರೇ. ಅವಳು ವಿಜಯಳಿಗಿಂತ ವಯಸ್ಸಿನಲ್ಲಿ ತೀರಾ ಚಿಕ್ಕವ ಳಾಗಿದ್ದುದರಿಂದ, ಹೆಚ್ಚು ಸೌಂದರ್ಯವುಳ್ಳವಳಾಗಿದ್ದಳು. ವಿಜ ಯಳ ಮನೆಗೆ ಸುಂದರಿ ಒಂದೆರಡಾವೃತ್ತಿ ಬಂದಿದ್ದಾಗ, ರಾಘು ಅವಳನ್ನು ನೋಡಿ ಕಣ್ಣುಕಣ್ಣು ಬಿಟ್ಟಿದ್ದನು. ಒಂದು ದಿನ ವಾದರು ಅವಳ ಕೂಡ ಸರಸ ಸಲ್ಲಾಪವಾಡಬೇಕೆಂದು, ಅವನು ಆಗ ಆಸೆಪಟ್ಟಿದ್ದನು. ಆದರೆ ಸುಂದರಿ ಅವನಿಗೆ ದೊರಕುವ ಹಾಗಿರಲಿಲ್ಲ. ಮೈಸೂರಿನಲ್ಲೇ ಅತಿ ದೊಡ್ಡದಾದ ಜಾಫರ್ ಬೀಡಿ ಕಂಪೆನಿಯ ಹುಸೇನ್‌ಸಾಬರ ತಮ್ಮ ಮಹಮ್ಮದ್ ಅವಳನ್ನು ನಿರಂತರವಾಗಿಯೇ ಇಟ್ಟುಕೊಂಡಿದ್ದನು. ಅವನಷ್ಟು ಹಣಸುರಿಯಲು, ಆರೈಕೆಮಾಡಲು, ರಾಘುವಿನಿಂದ ಆಗುತ್ತಿರ ಲಿಲ್ಲ. ಮಹಮ್ಮದ್ ಸಿರಿವಂತ. ಹಣಕಾಸಿಗೇನು ಅವನಿಗೆ

ಕೊರತೆಯಿರಲಿಲ್ಲ. ರಾಘು ಅರುವತ್ತು ರೂಪಾಯಿ ಸಂಬಳ ದವನು, ಎಲ್ಲವನ್ನು ಅದರಲ್ಲೆ ಸರಿಮಾಡಬೇಕು. ಹೀಗಾಗಿ ಅವನು ಸುಂದರಿಯ ಆಸೆಯನ್ನು ಕೈಬಿಟ್ಟಿದ್ದನು. ಈಗ ವಿಜಯ ಹೇಳಿಕಳುಹಿಸಿದ ಮೇಲೆ, ಸುಂದರಿಯನ್ನು ನೋಡಲು ಅವಕಾಶ ಸಿಕ್ಕಿತಲ್ಲಾ ಎಂದು ಹಿಗ್ಗಿ, ಅವಳ ಮನೆಯ ಕಡೆ ಧಾವಿಸಿದನು. ವಿಜಯ ಮಹಮ್ಮದನನ್ನು ಮೊದಲೇ ಕಂಡು, ರಾಘು ತನಗೆ ಮೋಸಮಾಡಿರುವುದನ್ನು ವಿವರಿಸಿ, ಅವನಿಂದ ಸಹಾಯ ಕೋರಿ ದ್ದಳು. ಮಹಮದ್ ಅವಳ ಕೋರಿಕೆಗೆ ಒಪ್ಪಿ, ರಾಘುವನ್ನು ಮುಗಿಸಿಬಿಡಬೇಕೆಂದು ನಾಲ್ಕಾರು ಆಳುಗಳಿಗೆ ಹಣಕೊಟ್ಟು, ಏರ್ಪಾಡು ಮಾಡಿದ್ದನು. ಕುರಿ ಕತ್ತರಿಸುವವನ ಬಳಿಯಲ್ಲೆ ಕೇಕೆ ಹಾಕುತ್ತ ಓಡುವಂತೆ, ರಾಘು ಹಿಗ್ಗುತ್ತ, ಸುಂದರಿಯ ಮನೆ ಯೊಳಗೆ ಪ್ರವೇಶಿಸಿದನು; ಮೊದಲೇ ಸಜ್ಜುಗೊಳಿಸಿದಂತೆ ಸುಂದರಿ " ಅಯ್ಯೋ ನನ್ನನ್ನು ಕೆಣಕಲು ಯಾರೊ ಬಂದಿದ್ದಾರೆ " ಎಂದು ಕೂಗಿಕೊಂಡಳು. ಕೋಣೆಯಲ್ಲೂ ಬಾಗಿಲ ಹಿಂದೆಯೂ ಅಡಗಿದ್ದ ಧಾಂಡಿಗರು ಓಡಿಬಂದು, ರಾಘುವನ್ನು ಹಿಡಿದು ಕೊಂಡರು. ಅವನಿಗೆ ಜಂಘಾಬಲವೆಲ್ಲ ಉಡುಗಿಹೋಯಿತು. ಅನುಭವಸ್ಥನಾದ ತಾನು ಈ ರೀತಿ ಸಿಕ್ಕಿಕೊಂಡೆನಲ್ಲಾ ಎಂದು ಮರುಗಿದನು. ಕಾಲ ಮಿಂಚಿಹೋಗಿತ್ತು. ಅವನೇನು ಮಾಡಲೂ ಸಾಧ್ಯವಿರಲಿಲ್ಲ, ಕ್ಷಣಾರ್ಧದಲ್ಲಿ ಫಳಾರ್, ಫಳಾರ್ ಎಂದು ಅವನ ಕೆನ್ನೆಗಳ ಮೇಲೆ ಹೊಡೆತಗಳು ಬಿದ್ದುವು. " ಕಳಿಯೊ ಮಗನೇ, ನಿನ್ನ ವಾಚನ್ನೂ, ಉಂಗ್ರಾನೂ " ಎಂದಾಗ, ರಾಘು ಸದ್ದುಮಾಡದೆ ಕಟ್ಟಿದ್ದ ರಿಸ್ಟ್‌ವಾಚನ್ನೂ, ಎರಡು ಉಂಗುರ ಗಳನ್ನೂ, ಚಿನ್ನದ ಗುಂಡಿಗಳನ್ನೂ, ಕಳೆದುಕೊಟ್ಟನು. ಆ ಧೂರ್ತರು ರಾಘುವಿನ ಎರಡೂ ಕೈಗಳನ್ನೂ ಹಿಂದಕ್ಕೆ ಕಟ್ಟಿ, ಕಿರಿಚಿಕೊಳ್ಳದಂತೆ ಬಾಯಿಗೆ ಬಟ್ಟೆ ಅಡೆದು, ನೆಲಕ್ಕುರುಳಿಸಿ ಬಲವಾಗಿ ಹೊಡೆದರು. ರಾಘುವಿನ ಮೈಯೆಲ್ಲ ರಕ್ತ ಸುರಿಯ

ಲಾರಂಭಿಸಿತು. ಆ ಧಾಂಡಿಗರು ಕಟ್ಟಿ ಬಿಚ್ಚಿ ನೋಡಿದಾಗ, ಅವನಿಗೆ ಪ್ರಜ್ಞೆ ತಪ್ಪಿತ್ತು. ಇನ್ನೂ ಹೊಡೆದರೆ, ಅವನುಳಿಯ ಲಾರನೆಂದು ಬಗೆದು, ಅರ್ಧ ರಾತ್ರಿ ಕಳೆದು, ಊರೆಲ್ಲಾ ನಿಶ್ಯಬ್ದ ವಾದ ಮೇಲೆ, ಅವನನ್ನು ಹೊತ್ತುಕೊಂಡು ಬಂದು "ಮಾರುತಿ" ಊದುಬತ್ತಿ ಕಂಪೆನಿಯ ಬಳಿಯಲ್ಲೆ ಕತ್ತಲಾದ ಒಂದು ಸ್ಥಳದಲ್ಲಿ ಕೆಡವಿ ಹೊರಟು ಹೋದರು.

೧೩

ರಾಘು ಪ್ರಜ್ಞೆ ತಿಳಿದು ನೋವಿನ ಯಾತನೆಯಿಂದ ನರಳು ತಿದ್ದನು. ಅವನಿಗೆ ಮೇಲಕ್ಕೇಳುವುದಕ್ಕಾಗುತ್ತಿರಲಿಲ್ಲ. ರಾತ್ರಿ ಯಲ್ಲಿ ಗಸ್ತು ತಿರುಗುತಿದ್ದ ಸೀಖ್ ಪಹರೆಯವನು, ನರಳುತಿದ್ದ ಶಬ್ದ ಕೇಳಿ ಬಂದು ನೋಡಿದಾಗ, ಗಾಬರಿಗೊಂಡನು. ಅವನು ರಾಘುವನ್ನು ಚೆನ್ನಾಗಿ ತಿಳಿದವನಾಗಿದ್ದನು. ಹಬ್ಬ ಹರಿದಿನಗಳಲ್ಲಿ ರಾಘುವಿನಿಂದ " ಇನಾಂ " ಪಡೆದಿದ್ದನು. ಪ್ರತಿ ಸಂಜೆ ಎಲ್ಲರ ಅಂಗಡಿಗೂ ಹೋಗಿ ಸಲಾಂ ಹೊಡೆಯುವುದು ಅವನ ವಾಡಿಕೆ. ಶೆಟ್ಟರ ಅಂಗಡಿಯಲ್ಲಿ ಆ ದಿನ ಸಂಜೆಯೂ, ರಾಘುವಿಗೆ ಅವನು ಸಲಾಂ ಹೊಡೆದಿದ್ದನು. ಅಷ್ಟು ಬೇಗ ಅವನಿಗೆ ಆ ದುರ್ಗತಿ ಹೇಗೆ ಬಂದಿತೆಂದು ಯೋಚಿಸತೊಡಗಿದನು. ನಾಲ್ಕಾರು ನಿಮಿಷ ಗಳ ಕಾಲ ಅವನೊಡನೆ ಮಾತನಾಡಲು ಪ್ರಯತ್ನಿಸಿದನು. ರಾಘು ಬಾಯಿಂದಲೂ ರಕ್ತ ಕಾರಿದ್ದನು. ಈ ಸ್ಥಿತಿಯಲ್ಲಿ ಅವನಿಂದ ಉತ್ತರ ಪಡೆಯುವುದು ಸಾಧ್ಯವಾಗಿರಲಿಲ್ಲ. ಸಿಂಗ್ ಅಲಾಕ್ಕಾಗಿ ಅವನನ್ನು ಎತ್ತಿಕೊಂಡು, ಜಗಲಿಯ ಮೇಲೆ ಮಲಗಿಸಿದನು. ಇದಕ್ಕಿಂತ ಹೆಚ್ಚಿನ ಸಹಾಯಮಾಡಲು, ಆ ಸ್ಥಿತಿಯಲ್ಲಿ ಅವನಿಗೇನೂ ಬುದ್ಧಿ ಓಡಲಿಲ್ಲ. ಧನಪಾಲಶೆಟ್ಟರ ಮನೆ ಅಲ್ಲಿಗೆ ಸಮೀಪವಿದ್ದು ಸಿಂಗ್‌ಗೆ ಗೊತ್ತಿತ್ತು. ಅವನು ಓಡಿ ಹೋಗಿ ಮಲಗಿ ನಿದ್ರಿಸುತಿದ್ದ ಶೆಟ್ಟರ ಮನೆ ಬಾಗಿಲು ತಟ್ಟಿ

ಎಬ್ಬಿಸಿ, ರಾಘುವಿನ ಸ್ಥಿತಿಯನ್ನು ಅವರಿಗೆ ವರದಿ ಒಪ್ಪಿಸಿದನು. ಗಾಬರಿಗೊಂಡ ಶೆಟ್ಟರು ಓಡಿಬಂದು, ರಾಘುವನ್ನು ನೋಡಿ, ಮತ್ತೆ ಸಿಂಗ್ ಅನ್ನು ಮನೆಗೆ ಓಡಿಸಿ, ಅಲ್ಲಿಂದ ಎರಡಾಳುಗಳನ್ನು ಕರೆಯಿಸಿಕೊಂಡರು. ಸಹಾಯಕರ ಕೂಡ ತಾವೂ ಕೈಕೊಟ್ಟು, ತಮ್ಮ ಮನೆಗೆ ಅವನನ್ನು ಹೊತ್ತು ತಂದರು. ರಾಘುವಿನ ತಲೆ ಯೊಡೆದು ರಕ್ತ ಸುರಿಯುತಿತ್ತು. ಬಟ್ಟೆಯೆಲ್ಲ ರಕ್ತಮಯವಾಗಿ ಅವನು ನೋಡುವುದಕ್ಕೆ ಭಯಂಕರನಾಗಿ ಕಾಣುತಿದ್ದನು. ಶೆಟ್ಟರು ಡಾಕ್ಟರ ಮನೆಗೆ ಆಳು ಓಡಿಸಿದರು. ಡಾಕ್ಟರ್ ಬಂದು ರಾಘುವಿಗೆ "ಪ್ಲಾಸ್ತ್ರ" ಕಟ್ಟಿದರು. ಹೊಡೆತ ಅಪಾಯ ಸ್ಥಳ ದಲ್ಲಿ ಬಿದ್ದಿದೆಯೆಂದೂ, ಮೂಳೆಯೇನಾದರೂ ಒಂದು ಸಮಯ ಮುರಿದಿರಬಹುದೆಂದೂ, ಆದುದರಿಂದ ಬೆಳಗಾಗುತ್ತಲೆ ಅವನನ್ನು ಆಸ್ಪತ್ರೆಗೆ ಸೇರಿಸುವುದು ಒಳಿತೆಂದೂ, ಅಭಿಪ್ರಾಯಪಟ್ಟರು. ರಕ್ತ ಸುರಿಯದಂತೆ ಸ್ವಲ್ಪ ಶಮನಕ್ಕೆ ದಾರಿಮಾಡಿ, ಅವರು ಬಂದಂತೆಯೇ ಹೊರಟುಹೋದರು. ಇಷ್ಟೆಲ್ಲಾ ನಡೆದು ಮುಗಿ ಯುವ ವೇಳೆಗೆ, ಬೆಳಗಿನ ಜಾವವಾಗಿತ್ತು. ಹಕ್ಕಿಗಳು ಚಿಲಿ ಪಿಲಿಗುಟ್ಟತೊಡಗಿದ್ದುವು. ಮಂಜು ಆವರಿಸಿ, ಮೈಸೂರನ್ನು ಕಾಣದ ಹಾಗೆ ಮಾಡಿತ್ತು. ವಿದ್ಯುದ್ದೀಪಗಳು ಆರಲಾರಂಭಿ ಸಿದುವು. ಉಷಾದೇವಿಯು ಸಡಗರದಿಂದೆದ್ದು, ಅಲಂಕರಿಸಿ ಕೊಂಡು, ಆಕಾಶದತ್ತ ಹೊರಬಂದಳು.

## ೧೪

ಧನಪಾಲಶೆಟ್ಟರು ಗುಂಡೂರಾಯರಿಗೆ ಸಮಾಚಾರ ಕಳು ಹಿಸಿದರು. ಅವರು ಪತ್ನಿ ಶಾರದಮ್ಮನವರ ಕೂಡ ಓಡಿ ಬಂದರು. ನಡೆದ ವಿಷಯವೇನೆಂದು ಯಾರಿಗೂ ತಿಳಿದಿರಲಿಲ್ಲ. ಹೆಚ್ಚುಕಾಲ ವ್ಯಯಮಾಡಬಾರದೆಂದು, ಅವನನ್ನು ಒಡನೆ ಆಸ್ಪ ತ್ರೆಗೆ ಸಾಗಿಸಲಾಯಿತು. ಮೂರುದಿನಗಳು ಕಳೆದ ಮೇಲೆ ಅವನು

ಸ್ವಲ್ಪಸ್ವಲ್ಪವಾಗಿ ಮಾತನಾಡಲಾರಂಭಿಸಿದನು. ಇನ್ನೂ ಎಂಟು ದಿನಗಳು ಕಳೆದಮೇಲೆ ಅವನ ಪೂರ್ಣಸ್ಥಿತಿ ಗೊತ್ತಾಗುವುದೆಂದು ಡಾಕ್ಟರು ಗದ್ದಲಮಾಡುತಿದ್ದ ಶಾರದಮ್ಮನವರಿಗೆ, ಎಚ್ಚರಿಕೆ ಕೊಟ್ಟರು. ಬೆಳಗಿನಿಂದ ಸಂಜೆಯವರೆಗೆ, ನಾಲ್ಕಾರು ತಡವೆ ಪತಿ ಪತ್ನಿಯರು ಆಸ್ಪತ್ರೆಗೆ ಧಾವಿಸಿ, ಮಗನನ್ನು ನೋಡಿ ತುಂಬ ಸಂಕಟಪಡುತಿದ್ದರು. ಇನ್ನೇನನ್ನು ಮಾಡಲೂ ಅವರಿಂದ ಸಾಧ್ಯವಾಗುತ್ತಿರಲಿಲ್ಲ. ಏಕೆಂದರೆ ರಾಘು ಈಗ ಡಾಕ್ಟರ ಬಂದಿಯಾಗಿದ್ದನು. ಶೆಟ್ಟರು ಸಹ ಒಂದೆರಡಾವೃತ್ತಿ ಬಂದು ಅವನನ್ನು ನೋಡಿ, ಹೆದರಬೇಡವೆಂದು ಧೈರ್ಯ ಹೇಳಿ ಹೋಗಿದ್ದರು. ಸರೋಜ ಸಹ ಒಂದು ತಡವೆ ಬಂದು ದುಃಖಪ್ರದರ್ಶಿಸಿ ಹೋಗಿದ್ದಳು. ರಾಘು ಆಸ್ಪತ್ರೆಯಲ್ಲೆ ಮಲಗಿದ್ದನು. ಸ್ವಲ್ಪ ದಿನಗಳಮೇಲೆ ಗುಣವಾಗುತ್ತ ಬರುತ್ತಿತ್ತು. ಬಲದ ಕಾಲಿಗೆ ಮಾತ್ರ ಪ್ಲಾಸ್ಟರ್ ಕಟ್ಟಿ ಮೇಲೆ ಬಿಳೀಬಟ್ಟೆ ಸುತ್ತಿ ಇನ್ನು ಹದಿನೈದು ದಿನಗಳು ಕಳೆದ ಮೇಲೆ ಬಂದು ಬಿಚ್ಚಿಸಿ, ಬೇರೆ ಪಟ್ಟೆಯನ್ನು ಹಾಕಿಸಿಕೊಳ್ಳಬೇಕೆಂದು ಹೇಳಿ, ಡಾಕ್ಟರುಗಳು ಅವನನ್ನು ಆಸ್ಪತ್ರೆಯಿಂದ ಹೊರಗಟ್ಟಿದರು. ರಾಘುವಿಗೆ ಆಸ್ಪತ್ರೆವಾಸ ಸಾಕು ಸಾಕಾಗಿ ಹೋಗಿತ್ತು. ಕಿತ್ತಿಳೆ ರಸಕುಡಿದು, ಆಸ್ಪತ್ರೆಯ ಕಟ್ಟುನಿಟ್ಟುಗಳಲ್ಲಿ ಬಂಧಿತನಾಗಿದ್ದುದರಿಂದ, ಅವನಿಗೆ ಜೀವನವೇ ಅಸಹ್ಯವಾಗಿ ಕಾಣುತಿತ್ತು. ಕುಂಟುತ್ತ ಅವನು ಮನೆಗೆ ಬಂದು ಸೇರಿದನು. ತಾನೇಕೆ ಸಾಯಬಾರದಾಗಿತ್ತು? ಎಂದು ತನ್ನನ್ನು ತಾನೇ ಮೂದಲಿಸುತಿದ್ದನು. ಕೇವಲ ಒಬ್ಬ ಹೆಂಗಸಿನಿಂದ ತನಗಿಂಥ ಅಪಮಾನವಾಯಿತಲ್ಲಾ ಎಂದು ಮರುಗುತಿದ್ದನು. ತಾಯಿ ಶಾರದಮ್ಮನವರು 'ನಿನಗೀ ಗತಿ ಏಕೆ ಒದಗಿತೆ'ಂದು ಕೇಳಿದ್ದಕ್ಕೆ ಅವನು, ಸಂಭವ ನಡೆದ ದಿನ ತಾನು ಎರಡನೇ ಆಟ ನೋಡಲು ಸಿನಿಮಾಕ್ಕೆ ಹೋಗಿದ್ದುದಾಗಿಯೂ, ಬರುವಾಗ ದಾರಿಯಲ್ಲಿ ಯಾರೋ ಗೂಂಢರು, ತನ್ನನ್ನು ಬಹಳ ಸಿರಿವಂತನೆಂದೆ

ಣಿಸಿ ಹೊಡೆದು, ಇದ್ದುದನ್ನೆಲ್ಲ ಕಸಿದುಕೊಂಡುದಾಗಿಯೂ ಸುಳ್ಳು ಹೇಳಿದನು. ಆದರೆ ಅವನ ಮಾತನ್ನು ಒಂದು ಕುಂಜು ಪಿಳ್ಳೆಯೂ ನಂಬಲಿಲ್ಲ. ಇಂಥ ಸಂಭವಗಳೆಲ್ಲ ಹೆಚ್ಚು ದಿನ ಗೋಪ್ಯವಾಗಿರುವುದಿಲ್ಲ. ಕ್ರಮೇಣ ಅದು ಬಯಲಿಗೆ ಬಂದೇ ಬರುತ್ತದೆ. ರಾಘುವಿನ ಸಮಾಚಾರವೂ ಹೀಗೆಯೇ ಆಯಿತು. ಅವನು ಆದಿನ ಹೇಗೆ ಏಟು ತಿಂದ ಎಂಬುದನ್ನು ಎಲ್ಲರೂ ತಿಳಿದು ಕೊಂಡರು. ನೀನು ನನ್ನ ಹೊಟ್ಟೆಯಲ್ಲಿ ಹುಟ್ಟಬಾರದಾಗಿತ್ತು ಎಂದು ಗುಂಡೂರಾಯರು ಕೂಗಾಡಿದರು. ಶಾರದಮ್ಮನವರ ದೊಂದೇ ಮೌನ. ಪಾಪ; ಅವರು ಮತ್ತೇನನ್ನು ಮಾಡಲಾಗಿದ್ದಿತು. ಇಂಥ ಕಷ್ಟ ಸಮಯಗಳಲ್ಲಿ ಅವರಿಗೆ ಸಹಾಯಕ ವಾದದ್ದು ಕಣ್ಣೀರೆ. ಈ ಮಧ್ಯೆ ಧನಪಾಲಶೆಟ್ಟರು ಗುಂಡೂ ರಾಯರನ್ನು ಕರೆಯಿಸಿಕೊಂಡು, ಎಲ್ಲಾದರೂ ಒಂದು ಹುಡುಗಿ ಯನ್ನು ನೋಡಿ ಅವನಿಗೆ ಗಂಟು ಹಾಕಿದಲ್ಲಿ ಎಲ್ಲವೂ ಸರಿಹೋಗು ತ್ತದೆಂದೂ, ಆದುದರಿಂದ ಇನ್ನು ತಾಮಸಬೇಡವೆಂದೂ, ಹೇಳಿ ದ್ದರು. ಶೆಟ್ಟರ ಮಾತನ್ನು ಗುಂಡೂರಾಯರು ಪತ್ನಿಗೂ ತಿಳಿ ಸಿದರು. ಯಾವ ತಾಯಿಗೆ ತಾನೆ ಮಗನ ವಿವಾಹವೆಂದರೆ ಉತ್ಸಾಹವಾಗಲಿಕ್ಕಿಲ್ಲ. ಶೆಟ್ಟರ ವಾಕ್ಯನ್ನು ನೂರು ಪಾಲಿಗೆ ಶಾರದಮ್ಮನವರು ಅನುಮೋದಿಸಿದರು. ಯೋಗ್ಯ ಹುಡುಗಿ ಯೊಬ್ಬಳನ್ನು ತಂದು ಸೊಸೆಯಾಗಿ ಮಾಡಿಕೊಳ್ಳಲೇಬೇಕು ಎಂದು ನಿರ್ಧರಿಸಿದರು. ರಾಘುವಿಗೆ ಪೂರ್ಣ ಗುಣವಾಗಲು ಎರಡು ತಿಂಗಳುಗಳು ಹಿಡಿದುವು. ತಾನು ಕಂಪನಿಗೆ ಹೋಗಿ, ಸಹೋ ದ್ಯೋಗಿಗಳೊಂದಿಗೆ ಹೇಗೆ ಮುಖ ತೋರಿಸುವುದೆಂದು, ಅವನಿಗೆ ಮೊದಲು ನಾಚಿಕೆಯಾಯಿತು. ಆದರೇ ಶೆಟ್ಟರೆ ಹೇಳಿಕಳು ಹಿಸಿದ ಮೇಲೆ, ಇನ್ನು ಮನೆಯಲ್ಲುಳಿಯುವುದು ಸರಿಯಲ್ಲವೆಂದು ಕೆಲಸಕ್ಕೆ ಹಾಜರಾದನು. ನಾಯಿ ಬಾಲ ನೆಟ್ಟಗಾಗುತ್ತದೆಯೇ? ಸ್ವಲ್ಪ ದಿನ ಕ್ರಮವಾಗಿಯೇ ಅವನು ಇದ್ದನು. ಅನಂತರ ಮೆಲ್ಲಗೆ

ಕ್ಷಣಕಾಲ, ಸರೋಜಳ ಮೇಲೆ ಕಣ್ಣು ಹಾಯಿಸುತಿದ್ದನು. ಇನ್ನೂ ಸ್ವಲ್ಪ ದಿನಗಳು ಕಳೆದ ಮೇಲೆ, ಕಣ್ಣಿಗೆ ಕಣ್ಣನ್ನು ಸೇರಿಸಿ ಮಾತನಾಡಿಕೊಳ್ಳುತಿದ್ದನು. ಕ್ರಮೇಣ ತನ್ನ ಹಳೆಯ ನೋವು, ಯಾತನೆಯೆಲ್ಲ ಹಳಸಿದ ಮೇಲೆ, ಹೊಸ ಧೈರ್ಯ ಬಂದು, ಯಥಾಪ್ರಕಾರ ಸರೋಜಳ ಗೃಹಕ್ಕೆ ಕಾಲಿಟ್ಟನು.

## ೧೫

ಗುಂಡೂರಾಯರು ತಮ್ಮ ತಂಗಿ ಕನಕಮ್ಮನನ್ನು ನಂಜನ ಗೂಡಿಗೆ ಕೊಟ್ಟು ವಿವಾಹಮಾಡಿದ್ದರು. ಅವರ ಪತಿ ಶ್ರೀನಿವಾಸ ರಾಯರು ಸಬ್-ರಿಜಿಸ್ಟ್ರಾರಾದುದರಿಂದ ಒಳ್ಳೆ ವರಮಾನವುಳ್ಳವ ರಾಗಿದ್ದರು. ಅವರದು ದೊಡ್ಡ ಕುಟುಂಬ. ಮನೆ ತುಂಬ ಮಕ್ಕಳು. ನಾಲ್ಕು ಪುತ್ರರನ್ನೂ ಮೂವರು ಪುತ್ರಿಯರನ್ನೂ, ದೇವರು ಅವರಿಗೆ ಕರುಣಿಸಿದ್ದನು. ಅಲ್ಲದೆ ಶ್ರೀನಿವಾಸರಾಯರ ಮೂವರು ತಮ್ಮಂದಿರೂ, ಅವರ ಪತ್ನಿಯರೂ, ಮನೆಯಲ್ಲೆ ಇದ್ದರು. ಸೋದರರೆಲ್ಲ ಇನ್ನೂ ಭಾಗವಾಗದೆ ಏಕಕುಟುಂಬವಾಗಿ ದ್ದರು. ಎಲ್ಲರೂ ಬೇರೆ ಬೇರೆ ಉದ್ಯೋಗಗಳಲ್ಲಿದ್ದುಕೊಂಡು ಮನೆಯಲ್ಲಿ ಕೂಗು ಕಚ್ಚಾಟಗಳಿಗೆ ಎಡೆಕೊಡದೆ, ಸಹನೆಯಿಂದ ನಡೆದುಹೋಗುತಿದ್ದರು. ಶ್ರೀನಿವಾಸರಾಯರು ತಮ್ಮ ಈರ್ವರು ಹೆಣ್ಣುಮಕ್ಕಳಿಗೂ ವಿವಾಹಮಾಡಿದ್ದರು. ಮೂರನೆಯವಳಾದ ಸರಸಳನ್ನು ಚಿಕ್ಕ ಹುಡುಗಿಯಾಗಿದ್ದಾಗಲೇ, ರಾಘುವಿಗೆ ಎಂದು ತೀರ್ಮಾನಮಾಡಿಬಿಟ್ಟಿದ್ದರು. ಗುಂಡೂರಾಯರು ಪತ್ನೀಸಮೇತ ಆಗಾಗ್ಗೆ ತಂಗಿಯ ಮನೆಗೆ ಹೋಗುತಿದ್ದುದುಂಟು. ಆಗ ಶಾರ ದಮ್ಮನು ರಾಘು-ಸರಸಳನ್ನು ಒಟ್ಟಿಗೆ ಕೂರಿಸಿ, “ಜೋಡಿ ಎಷ್ಟು ಹೊಂದಿಕೆಯಾಗಿದೆ ನೋಡಿ” ಎಂದು ಸಂತೋಷಪಡುತಿದ್ದಾಗ, ಕನಕಮ್ಮನೂ ಅದರಲ್ಲಿ ಭಾಗವಹಿಸುತ್ತಿದ್ದರು. “ಅತ್ತೆ ಅತ್ತೆ”

ಯೆಂದು ಪುಟ್ಟ ಸರಸು ಕೂಗಾಡುತ್ತ ಓಡಾಡುತಿದ್ದಾಗ, ಈಗೇನೊ ಅತ್ತೆ ಕಂಡರೆ ಪ್ರೀತಿಯಾಗಿದ್ದೀಯಮ್ಮ, ದೊಡ್ಡವ ಳಾಗಿ ಮದುವೆಯಾದಮೇಲೆ, ಅತ್ತೆಯನ್ನು ಹೇಗೆ ನೋಡಿಕೊಳ್ಳು ತ್ತೀಯೋ ನೋಡಬೇಕು ಎಂದು ಶ್ರೀನಿವಾಸರಾಯರು ಹಾಸ್ಯ ಮಾಡಿದಾಗ, "ಚೆನ್ನಾಗಿ ನೋಡ್ಕೊಳ್ತೀನಪ್ಪ" ಎಂದು ಸರಸು ಅಂದಾಗ, ಎಲ್ಲರೂ ನಕ್ಕುನಲಿಯುತಿದ್ದರು. ಶಾರದಮ್ಮನವರು ಸರಸಳನ್ನು ಎತ್ತಿ ತೊಡೆಯಮೇಲೆ ಕುಳ್ಳಿರಿಸಿಕೊಂಡು, ಮುದ್ದಿಡು ತಿದ್ದರು. ರಾಘುವೂ, ಸರಸಳೂ ಕಪಿಲಾನದಿಯ ತೀರದಲ್ಲಿ ಮರಳಿನಲ್ಲಿ ಕುಳಿತು, ಮನೆಕಟ್ಟಿ, ಗಂಡಹೆಂಡಿರ ಆಟವಾಡು ತಿದ್ದರು. ಇದೆಲ್ಲ ಸರಸ ಲಂಗ ಉಡುತಿದ್ದಾಗಿನ ಮಾತು. ಈಗ ಕಾಲಚಕ್ರವುರುಳಿಹೋಗಿದೆ. ಅನೇಕ ಮಹತ್ತರವಾದ ಬದ ಲಾವಣೆಗಳಾಗಿವೆ. ಶ್ರೀನಿವಾಸರಾಯರಿಗೂ, ಗುಂಡೂರಾಯ ರಿಗೂ, ಏನೋ ಒಂದು ಅಲ್ಪಸಂಗತಿಗಾಗಿ ಮನಸ್ತಾಪವೇರ್ಪಟ್ಟು ಒಬ್ಬರಿಗೊಬ್ಬರು ಮಾತುಬಿಟ್ಟು, ಹನ್ನೊಂದು ವರುಷಗಳು ಕಳೆದುಹೋಗಿವೆ. ಶಾರದಮ್ಮನವರು ಈಗ ಸರಸಳನ್ನೇ ಮನೆಗೆ ತರಬೇಕು. ಎಂದು ಹಠಮಾಡಿದರು. "ಆ ಅಯೋಗ್ಯನ ಬಳಿ ನಾನು ಹೆಣ್ಣು ಕೇಳಲು ಹೋಗುವುದಿಲ್ಲವೆಂದು ಮೊದಲು ಗುಂಡೂರಾಯರು ರಂಪುಮಾಡಿದರು. ಆದರೆ ಅಷ್ಟಕ್ಕೆ ಶಾರದ ಮ್ಮನವರು ಬಿಡುತ್ತಾರೇಸು ? ಸಂಬಂಧ ಬಿಡಬಾರದೆಂದು ಪತಿಗೆ ಅವರು ಬೋಧಿಸಿದರು. ಗುಂಡೂರಾಯರೂ ಅನಂತರ ತಗ್ಗಿದರು. ಕನಕಮ್ಮ ಒಂದೇ ಒಡಲಿನಲ್ಲಿ ಹುಟ್ಟಿದ ತಂಗಿ ಯಲ್ಲವೇ ? ತಾವಾಗಿಯೇ ಅವರ ಮನೆಗೆ ಹೋದಲ್ಲಿ ತಮ ಗೆತ್ತಣ ಅವಮಾನ ಎಂದು ನಿರ್ಧರಿಸಿಕೊಂಡರು. ಒಳ್ಳೇ ದಿನ ವೊಂದನ್ನು ನೋಡಿ ಅವರು ನಂಜನಗೂಡಿಗೆ ಪ್ರಯಾಣ ಮಾಡಿ ದರು. ಶ್ರೀನಿವಾಸರಾಯರ ಮನೆ ಸೇರುವಾಗ ಸರಸ ಬಾಗಿಲಿನಲ್ಲೆ ನಿಂತಿದ್ದಳು. ಅವಳು ಸರಸಳೆಂದು ಈಗ ಗುಂಡೂರಾಯರಿಗೆ

ಕಂಡುಹಿಡಿಯಲು ಸಾಧ್ಯವಾಗಲಿಲ್ಲ. ಅವಳೀಗ ಬೆಳೆದು ತುಂಬು ಸುಂದರಿಯಾಗಿದ್ದಳು. ಹೆಂಗಸರೇ ಹಾಗೆ—ಎಂಟು ಒಂಭತ್ತು ವರುಷಗಳು ಕಳೆಯಿತೆಂದರೆ ಹದಿನಾರು ಹದಿನೇಳರವರೆಗೆ, ಅವರು ಮಿಂಚಿನಂತೆ ಬೆಳೆದು ಯೌವನಸ್ಥರಾಗುತ್ತಾರೆ. ಗುಂಡೂ ರಾಯರು ನೆಟ್ಟಗೆ ಮನೆಯೊಳಗೇ ಪ್ರವೇಶಿಸಿದರು. ಯಾರೋ ಅತಿಥಿಯೆಂದು ಬಗೆದ ಸರಸ, ಯಾರೆಂದು ತಿಳಿಯುವ ಕುತೂ ಹಲದಿಂದ, ಒಂದೊಂದೇ ಹೆಜ್ಜೆಯಿಡುತ್ತ, ಅವರನ್ನು ಹಿಂಬಾ ಲಿಸಿದಳು. ಬಹಳ ದಿನಗಳಿಂದಲೂ ಬಾರದಿದ್ದ ಅಣ್ಣ ಈಗ ಲಾದರೂ ಬಂದನಲ್ಲಾ ಎಂದು ಕನಕಮ್ಮ ಹಿಗ್ಗಿಹೋದಳು. "ಸರಸಾ, ಚಾಪೆ ಹಾಕಮ್ಮ" ಎಂದು ಆಜ್ಞಾಪಿಸಿದಳು. ತನ್ನನ್ನೇ ಒತ್ತರಿಸಿಕೊಂಡು ನಿಂತಿದ್ದ ಮಗಳ ತಲೆಯನ್ನು ಸವ ರುತ್ತ, "ಇವರು ಯಾರು ಗೊತ್ತೇ ಸರಸೂ, ಮೈಸೂರು ಮಾವ ಕಣೇ" ಎಂದು ಪರಿಚಯಮಾಡಿಕೊಟ್ಟಳು. ಮನೆ ಯಲ್ಲಿನ ಸರ್ವರ ಕ್ಷೇಮವನ್ನೂ ವಿಚಾರಿಸಿದಳು. ತಂದಿದ್ದ ಸೇಬು, ಕಿತ್ತಿಳೆ, ಅಂಜೂರದ ಹಣ್ಣುಗಳನ್ನೂ, ಹೂವನ್ನೂ ಕೈಚೀಲದಿಂದ ಹೊರಗೆ ತೆಗೆದು ಗುಂಡೂರಾಯರು "ತೆಗೆದಿಡಮ್ಮ" ಎಂದರು. ಆಫೀಸಿನಿಂದ ಶ್ರೀನಿವಾಸರಾಯರು ಬಂದಾಗ, ಸಂಜೆ ನಾಲ್ಕೂವರೆಯಾಗಿತ್ತು. ಅವರೀಗ ಮೊದಲಿನ ಶ್ರೀನಿವಾಸ ರಾಯರಾಗಿರಲಿಲ್ಲ. ಅರ್ಧತಲೆ ನರೆದಿತ್ತು; ಇನ್ನೇನು ರಿಟೈರ್ ಕಾಲ. ಗುಂಡೂರಾಯರು ಅಕಸ್ಮಾತ್ ಬಂದಿರುವುದನ್ನುನೋಡಿ ಅವರಿಗೆ ಆಶ್ಚರ್ಯವಾಯಿತು. ಬಹಳ ಮರ್ಯಾದೆಯಿಂದಲೇ "ಯಾವಾಗ ಬಂದಿರಿ ಭಾವ" ಎಂದು ಕುಶಲಪ್ರಶ್ನೆಗಳನ್ನು ಹಾಕಿದರು. ಅವರನ್ನೀಗ ನೋಡಿದವರಿಗೆ ಮನಸ್ತಾಪವಿದ್ದವ ರಂತೆ ಕಾಣುತ್ತಿರಲಿಲ್ಲ. ಭಾವ ಭಾವಮೈದಂದಿರಿಬ್ಬರೂ ಕುಳಿತು ಏನೆಲ್ಲ ಹರಟೆ ಹೊಡೆಯುತಿದ್ದರು. ರಾತ್ರಿ ಊಟಕ್ಕೆ ಅಣಿಯಾಗತೊಡಗಿತು. ಊಟದ ಮಧ್ಯದಲ್ಲಿ, ಮಾತಿನ ನಡುವೆ,

ಗುಂಡೂರಾಯರು ತಾವು ಬಂದಿರುವ ವಿಚಾರವನ್ನು, ಮೈದು ನನಿಗೆ ತಿಳಿಸಿದರು. ಅದು "ಹೇಗೆ ಸಾಧ್ಯ ಭಾವ, ನಾನು ನರಸೀಪುರಕ್ಕೆ ಮಾತು ಕೊಟ್ಟಿದ್ದೇನಲ್ಲಾ, ಮಾತಿನಿಂದ ಈಗ ತಪ್ಪಿ ನಡೆಯುವುದು ಸಾಧ್ಯವಿದೆಯೇ, ಹೇಳಿ" ಎಂದು ಬಿಟ್ಟರು. ಗುಂಡೂರಾಯರನ್ನು ಕೋಪ ಆವರಿಸಿತು. ಇಲ್ಲಿಗೆ ಬಲವಂತ ಮಾಡಿ ಕಳುಹಿಸಿದುದಕ್ಕಾಗಿ, ಪತ್ನಿಯನ್ನು ಮನಸ್ಸಿನಲ್ಲೆ ನಿಂದಿಸಿ ಕೊಂಡರು. ಆದರೂ ಅದನ್ನು ಹೊರಗೆ ತೋರಿಸಿಕೊಳ್ಳದೆ, ಅಂದಿನ ರಾತ್ರಿ ಅಲ್ಲಿಯೇ ಮಲಗಿದ್ದು, ಬೆಳಗಿನ ರೈಲಿಗೆ ಮೈಸೂರಿಗೆ ಪ್ರಯಾಣ ಮಾಡಿದರು. ಅವರನ್ನು ಸಾಗಗೊಳಿ ಸಲು ಶ್ರೀನಿವಾಸರಾಯರು ಸ್ಟೇಷನ್‌ವರೆಗೂ ಬಂದಿದ್ದು, ವಿವಾ ಹದ ಮಾತನ್ನೆತ್ತದೆ, ನಾಜೂಕಾಗಿ ಅದು ಇದು ಮಾತಾಡಿ ಭಾವನನ್ನು ರೈಲುಹತ್ತಿಸಿ ಕಳುಹಿಸಿಬಿಟ್ಟರು. ಶ್ರೀನಿವಾಸ ರಾಯರು ಮನೆಗೆ ಹಿಂದಿರುಗಿದ ಮೇಲೆ ಇಲ್ಲಿ ಸ್ವಲ್ಪ ರಾದ್ಧಾಂತವೇ ನಡೆಯಿತು. ಕನಕಮ್ಮನವರು ಅಷ್ಟು ನಿಷ್ಠುರವಾಗಿ ಮಾತ ನಾಡಬಾರದಾಗಿತ್ತು ಎಂದು ಆಕ್ಷೇಪಿಸಿದರು. ಶ್ರೀನಿವಾಸ ರಾಯರು ಸರಸಳನ್ನು ನರಸೀಪುರಕ್ಕೆ ಕೊಟ್ಟು ವಿವಾಹಮಾಡು ತ್ತೇನೆ ಎಂದು ಹೇಳಿದುದೆಲ್ಲ ಸುಳ್ಳು. ಅವರು ಯಾವ ವರನನ್ನೂ ಇನ್ನೂ ನಿಷ್ಕರ್ಷೆಮಾಡಿರಲಿಲ್ಲ; ಹುಡುಕುತಿದ್ದರು ಅಷ್ಟೆ. ರಾಘು ವಿನ ಸಮಾಚಾರವನ್ನು ಕಂಡುಕೇಳಿದವರಿಂದ ಅವರು ತಿಳಿದು ಕೊಂಡಿದ್ದರು. ಬಾಳೆಯ ಕಂಭವನ್ನು ಸರಪಣಿಯಿಂದ ಕಟ್ಟಿ ದರೆ ಯೋಗ್ಯವಾದೀತೆ? ಅದಕ್ಕೆ ಪಟ್ಟು ನಾರುಬೇಕು ಎಂದು ಪತ್ನಿಯ ಕೂಡ ನುಡಿದರು. ಇತ್ತ ಗುಂಡೂರಾಯರು ಮನೆಗೆ ಬಂದಮೇಲೆ "ಅಯೋಗ್ಯ ನನ್ನನ್ನು ಅವಮಾನಮಾಡಿದ" ಎಂದು ರೇಗಾಡಿದರು. ಸಾಮಾನ್ಯವಾಗಿ ಹೆಣ್ಣಿನ ಮನೆಯವರು ಗಂಡನ್ನು ಹುಡುಕುವುದು ಸ್ವಾಭಾವಿಕ. ಆದರೆ ಅದಕ್ಕೆ ತದ್ವಿ ರುದ್ಧವಾಗಿ ಗುಂಡೂರಾಯರು ಹೆಣ್ಣಿಗಾಗಿ ಅಲೆದಾಡುತಿದ್ದರು.

ಇದಕ್ಕೆ ರಾಘುವಿನ ನಡತೆಯೇ ಕಾರಣ. ಅವನಿಗೆ ಹೆಣ್ಣನ್ನು ಕೊಡಲು ಯಾರೂ ಸಿದ್ಧರಾಗಿರಲಿಲ್ಲ.

## ೧೬

ರಾಘು ಸರೋಜಳಲ್ಲಿ ತನ್ನ ಕ್ಷಮಾಪಣೆಯನ್ನು ಕೇಳಿ ಕೊಂಡನು. ಸರೋಜಳ ಬಲವಂತದ ಮೇಲೆ ಅಂದು ನಡೆದದ್ದ ನ್ನೆಲ್ಲವನ್ನು ಅವಳಿಗೆ ವರದಿ ಒಪ್ಪಿಸಿದನು. ವಿಜಯಳ ಸ್ನೇಹ ಮೊದಲಿನದ್ದೆಂದೂ, ಈಗಿನದಲ್ಲವೆಂದೂ, ಇನ್ನು ಮುಂದೆ ಸರೋಜಳನ್ನು ಬಿಟ್ಟು ಬೇರೆ ಯಾವ ಹೆಂಗಸನ್ನು ಸಹ ಕಣ್ಣೆತ್ತಿಯೂ ನೋಡುವುದಿಲ್ಲವೆಂದೂ, ಅವಳ ಕೈಹಿಡಿದು ನುಡಿದನು. ಅವಳು ಒಪ್ಪಿದಲ್ಲಿ ತಂದೆತಾಯಿಗಳ ಅನುಮತಿಯಿಲ್ಲದೆಯೇ, ಎಂಥ ಕಷ್ಟಕ್ಕೊಳಗಾದರೂ ಅವಳನ್ನೇ ವಿವಾಹವಾಗುವೆನೆಂದು, ವಾಗ್ದಾನಕೊಟ್ಟನು. ಮಾತಿನ ಲಹರಿಯಲ್ಲಿ ಸರೋಜ ಇದನ್ನು ತೇಲಿಸಿಬಿಟ್ಟಳು. ಒಬ್ಬ ವ್ಯಕ್ತಿಗೇ ಕಟ್ಟುಬಿದ್ದು ಒದ್ದಾಡುವುದು, ಹಲವರನ್ನು ಕಂಡ ಹೆಣ್ಣಿನಿಂದ ಸಾಧ್ಯವೇಯಿಲ್ಲ. ಸರೋಜ ಹೊಸ ಹೊಸದಾಗಿ ಸಂಬಂಧ ಬೆಳೆಸಿ, ಸುಖವನ್ನನುಭವಿಸುತ್ತಿರುವವಳು; ಒಬ್ಬನನ್ನು ಕೈಹಿಡಿದು, ಅವನ ಅಂಕೆಯಲ್ಲೇ ಬಾಳಿ ಬದುಕಬೇಕಾದ ಅಗತ್ಯವೇನೂ ಈಗವಳಿಗೆ ಇದ್ದಿರಲಿಲ್ಲ. ಪತಿಯೇ ದೈವವೆಂದು ಒಂದು ಕಾಲದಲ್ಲಿ ಅವಳು ಎಣಿಸಿದ್ದುದೂ ಉಂಟು. ಆದರೆ ಅದು ಓಬೀರಾಯನ ಕಾಲ. ಈಗ ಆ ತತ್ತ್ವ ಸಿದ್ಧಾಂತವೆಲ್ಲ ಬೆಟ್ಟಹತ್ತಿ ಹೋಗಿದೆ; ಗಾಳಿಗೆ ತೂರಿ ಹೋಗಿದೆ. ಸರೋಜ ರಾಘುವನ್ನು ಪ್ರೀತಿಸುತಿದ್ದುದು ಪ್ರೇಮದಿಂದಲ್ಲ; ಕಾಮದಿಂದ. ಆದುದರಿಂದ ಅವಳು ರಾಘುವನ್ನೇ ನಂಬಿ ಕುಳಿತಿರಲಿಲ್ಲ. ಇನ್ನೂ ಹಲವಾರು ವ್ಯಕ್ತಿಗಳ ಸ್ನೇಹವನ್ನೂ ಅವಳು ಸಂಪಾದಿಸಿಕೊಂಡಿದ್ದಳು. ಅವರಲ್ಲಿ ಅದೇ ಟೈರ್ ಕಂಪೆನಿ

ಯಲ್ಲಿ ಕೆಲಸಮಾಡುತಿದ್ದ ಕಿಟ್ಟು, ಡ್ರೈವರ್ ಗಂಗಾಧರಪ್ಪ, ಇವರುಗಳು ಅತಿ ಮುಖ್ಯರಾದವರು. ಆದರೆ ಇವರಾರೂ ರಾಘು ವಿನಂತೆ ನಿರಂತರವಾಗಿ ಆಕೆಯ ಮನೆಯಲ್ಲಿರುತ್ತಿರಲಿಲ್ಲ. ರಾಘು ತಾನು ಸಂಪಾದಿಸಿದ ಹಣವನ್ನೆಲ್ಲ ಸರೋಜಳಿಗೆ ಕೊಟ್ಟು, ಅವಳ ಸಂಸಾರವನ್ನೆ ನಡೆಯಿಸಿಕೊಂಡು ಹೋಗುತಿದ್ದನು. ಸ್ನಾನ ಪಾನ ಊಟ ಉಪಚಾರವೆಲ್ಲ ಅವನಿಗೆ ಅಲ್ಲೆ. ಆದರೆ ಮತ್ತಿತ ರರು ಹಾಗಲ್ಲ. ರಾಘು ಇಲ್ಲದ ಸಮಯ ನೋಡಿ ಬಂದು, ಐದೋ ಹತ್ತೋ ಕೊಟ್ಟು ವಿಶ್ರಮಿಸಿ ಹೋಗುತಿದ್ದರು. ಒಂದು ದಿನ ಸರೋಜ ಕೇಳಿದಳು “ನಿಮ್ಮಪ್ಪ ನಿಮಗೆ ಹೆಣ್ಣು ಹುಡುಕು ತ್ತಾರಂತಲ್ರೀ, ಮದುವೆಯಾದ ಮೇಲೆ ನನ್ನನ್ನು ಮರೆತು ಬಿಡ್ತೀ ರೇನು” ಎಂದು. ಅದಕ್ಕವನು “ಎಲ್ಲಾದರೂ ಉಂಟೆ ಚಿನ್ನ; ಯಾರು ಮದುವೆಮಾಡುವವರು, ಯಾರು ಮದುವೆ ಮಾಡಿ ಕೊಳ್ಳುವವರು! ಖಂಡಿತ ಹೇಳ್ತೀನೆ ಸರೋಜ, ನಿನ್ನನ್ನು ಬಿಟ್ಟು ನಾನು ಬೇರೆ ಯಾರನ್ನೂ ಲಗ್ನವಾಗುವುದಿಲ್ಲ ಕಣೇ” ಎಂದು ಅವಳ ಮುಖಕ್ಕೆ ಮುಖ ಸೇರಿಸಿ, ಅವಳ ಎರಡೂ ಕೈಗಳನ್ನು ಹಿಡಿದುಕೊಂಡು ಉತ್ಸಾಹದಿಂದ ನುಡಿದನು.

## ೧೭

ಒಂಟಿಕೊಪ್ಪಲಿನಲ್ಲಿ ಮಿತ್ರಬಳಗದವರು ಒಂದು “ಕ್ಲಬ್” ಅನ್ನು ಸ್ಥಾಪಿಸಿದರು. ಕೇರಂ, ಇಸ್ಪೀಟು ಆಟ, ಮುಂತಾದುವು ಗಳು ಅಲ್ಲಿ ಯಥೇಷ್ಟವಾಗಿ ನಡೆಯುತಿದ್ದುವು. ರಿಟೈರ್ ಆದ ವ್ಯಕ್ತಿಗಳೇ ಸಾಮಾನ್ಯವಾಗಿ ಆ ಕ್ಲಬ್‌ನಲ್ಲಿ ತುಂಬಿರುತಿದ್ದರು. ಆದುದರಿಂದ ಅವರ ಮಾತುಕತೆಗಳೆಲ್ಲ ಹೆಚ್ಚಾಗಿ, “ನನ್ನ ಮಗ ಬೆಂಗಳೂರಿನಲ್ಲಿ ಕಾಲೇಜಿನಲ್ಲಿ ಓದುತಿದ್ದಾನೆ, ನನ್ನ ಮಗ ಹಾಸನ

ದಲ್ಲಿದ್ದಾನೆ, ಗೋಪು ಟ್ರೈನಿಂಗ್ ಸ್ಕೂಲಿಗೆ ಸೇರಿದ, ನನ್ನ ಹಿರೀ ಹುಡುಗ ಇಂಜನಿಯರ್ ಇಲಾಖೆಗೆ ಸೇರಿಕೊಂಡ " ಇತ್ಯಾದಿಯಾಗಿರುತ್ತಿದ್ದುವು. ನಮ್ಮ ಗುಂಡೂರಾಯರೂ ಆ ಕ್ಲಬ್‌ನಲ್ಲಿ ಒಬ್ಬ ಮೆಂಬರಾಗಿದ್ದು, ಪ್ರತಿನಿತ್ಯವೂ ಸ್ನೇಹಿತರುಗಳ ಕೂಡ ಬೆರೆತು, ಒಳಗೆ ತಮಗೆ ಎಷ್ಟೇ ನೋವಿದ್ದರೂ ಅದನ್ನು ಮುಚ್ಚಿಕೊಂಡು, ಉತ್ಸಾಹಿಗಳಂತೆ ಕಾಣುತಿದ್ದರು. ಅವರು ನಕ್ಕಾಗ, ಕ್ಲಬ್ಬೇ ಪ್ರತಿಧ್ವನಿಗೈಯುತಿತ್ತು. ಮೌನ ತಾಳಿದರೆ ಕತ್ತಲು ಆವರಿಸಿದಂತಿತ್ತು. ಒಟ್ಟಾರೆ ಹೇಳುವುದಾದರೆ ಗುಂಡೂರಾಯರಿಂದಲೇ ಆ ಕ್ಲಬ್ಬಿಗೆ ವಿಶೇಷ ಕಳೆ. ಈಗ್ಗೆ ಎರಡುದಿನಗಳ ಹಿಂದೆ ಕೊಡಗಿನ ಕುಟ್ಟಪ್ಪ ಹೊಸದಾಗಿ ಇಲ್ಲಿಗೆ ಮೆಂಬರಾಗಿ ಬಂದು ಸೇರಿದ್ದನು. ಕುಟ್ಟಪ್ಪ ಪ್ರಬಲ ವ್ಯಕ್ತಿ. ಸಬ್-ಇನ್ಸ್ಪೆಕ್ಟರ್ ಹುದ್ದೆಯಿಂದ ನಿವೃತ್ತನಾದವನು. ಅವನು ಗುರಿನೋಡಿ ಸುಡುವುದರಲ್ಲಿ ಬಹಳ ನಿಪುಣನಂತೆ. ಅವನು ಹುದ್ದೆಯಲ್ಲಿದ್ದಾಗ ಮೇಲಿನ ಅಧಿಕಾರಿಗಳೊಂದಿಗೆ ಸೇರಿ, ಕಾಡಿಗೆ ಹೋಗಿ ಹುಲಿ ಬೇಟೆ ಆಡುವುದನ್ನೇ ಒಂದು ಕಸಬಾಗಿಟ್ಟುಕೊಂಡಿದ್ದನಂತೆ. ಕುಟ್ಟಪ್ಪ ಎಂದೊಡನೆ ಆಳು ಕುಳ್ಳವ್ಯಕ್ತಿಯೇನೋ ಎಂದು ಊಹಿಸಿಕೊಳ್ಳಬೇಡಿ. ಹೆಸರು ಮಾತ್ರ ಅವನಿಗೆ ಹಾಗೆ. ಅವನು ಭೀಮಕಾಯನಾಗಿದ್ದನು. ಕತ್ತೂ, ಶರೀರವೂ ಎಲ್ಲ ಒಟ್ಟಿಗೆ ಸೇರಿಕೊಂಡಿದ್ದುವು. ಕಣ್ಣುಗಳಂತೂ ಕಾಣುತ್ತಲೇ ಯಿರಲಿಲ್ಲ. ಒಳಗೆ ಅಡಗಿಕೊಂಡಿದ್ದುವು. ಅವು ಅಚ್ಚು ಕೆಂಪು ಬಣ್ಣವಾಗಿದ್ದುವು; ರಕ್ತ ಇನ್ನೆಲ್ಲಿ ಸೋರುವುದೋ ಎನ್ನುವ ಹಾಗಿದ್ದುವು. ನರೆತ ದಪ್ಪಮೀಸೆ. ಕಾಕಿ ಉಡಿಗೆ. ನಿಕ್ಕಲ್ ಬೆಲ್ಟ್ ಒಂದನ್ನು ಹಾಕಿಕೊಂಡಿದ್ದನು. ನಿಕ್ಕರೂ, ಮೇಲಂಗಿಯೂ ಅವನನ್ನು ಒಟ್ಟಿಗೆ ಹಿಡಿದುಕೊಂಡಂತೆ ಕಾಣುತಿದ್ದುವು. ಅವನು ಒಂದು ತಡವೆ ನಮ್ಮನ್ನು ದುರುಗುಟ್ಟಿಕೊಂಡು ನೋಡಿದರೆ ನಮ್ಮ ಜಂಘಾ ಬಲವೆಲ್ಲ ಉಡುಗಿ ಹೋಗಬೇಕು. ಪುರಾಣಗಳಲ್ಲಿ

ಹೇಳುತ್ತಾರಲ್ಲ ಭೀಮ, ಘಟೋತ್ಕಚ, ಜರಾಸಂಧ ಎಂದು, ಅವರನ್ನಾರಾದರೂ ಹಿಡಿದು ತಂದು ನಮ್ಮ ಕುಟ್ಟಪ್ಪನ ಮುಂದೆ ನಿಲ್ಲಿಸಿದರೆ, ಇವನ ಒಂದೇ ಏಟಿಗೆ ಅವರುಗಳೆಲ್ಲ ಇಲ್ಲದಂತಾಗಿ, ಅಂತರ್ಧಾನ ಹೊಂದುವರೆಂದು ನನ್ನ ನಂಬಿಕೆ. ಈಗವನು ಕೊಡಗನ್ನು ಬಿಟ್ಟು, ಗಂಧದ ಮೈಸೂರನ್ನೇ ತನ್ನ ನಿವಾಸವನ್ನಾಗಿ ಮಾಡಿಕೊಂಡನು. ಒಂಟಿಕೊಪ್ಪಲಿನಲ್ಲಿ ಒಂದು ಮನೆಯನ್ನು ಕೊಂಡು, ಈಗ ಹದಿನೈದು ದಿನಗಳೇ ಕಳೆಯಿತು. ಗುಂಡೂರಾಯರು ವಾಸಿಸುವ ಮನೆಯಿಂದ, ನಾಲ್ಕನೇ ಮನೆ ದಾಟಿದರೆ, ಅದೇ ಕುಟ್ಟಪ್ಪನು ಕೊಂಡು, ರಿಪೇರಿ ಮಾಡಿಸಿರುವ ಹೊಸಮನೆ. ಅದಕ್ಕೆ "ಮಹಾದೇವಿ ಸೌಧ" ಎಂದವನು ನಾಮಕರಣಮಾಡಿದ್ದಾನೆ. ಗೃಹಪ್ರವೇಶವನ್ನು ಸಹ ಅವನು ಅತಿ ವಿಜೃಂಭಣೆಯಿಂದಲೇ ನಡೆಯಿಸಿದನು. ಗುಂಡೂರಾಯರೂ ಸಹ ಪತ್ನೀ ಸಮೇತ ಆ ದಿನ ಅಲ್ಲಿಗೆ ಹೋಗಿದ್ದರು. ಇಬ್ಬರೂ ಒಂದೇ ಇಲಾಖೆಯಲ್ಲಿ ಕೆಲಸಮಾಡಿದವರಲ್ಲವೆ ? "ನೀವೆಲ್ಲಿದ್ದಿರಿ, ತಾವೆಲ್ಲಿದ್ದಿರಿ" ಎಂದು ಕುಶಲ ಪ್ರಶ್ನೆಗಳು ನಡೆದಮೇಲೆ, ತಾಂಬೂಲವನ್ನು ಸ್ವೀಕರಿಸಿ, ಆ ದಿನ ಅವರು ಹೊರಬಂದರು. ಕ್ಲಬ್‌ನಲ್ಲಿ ಸ್ನೇಹ ಇನ್ನೂ ಜಾಸ್ತಿಯಾಗಿಯೇ ಬೆಳೆಯಿತು. ಕ್ರಮೇಣ ಗುಂಡೂರಾಯರನ್ನು ಕುಟ್ಟಪ್ಪ ಗುಂಡೂ ಎಂದೇ ಕರೆಯಲಾರಂಭಿಸಿದನು. ಈ ಸಖ್ಯದ ಮಾತುಕತೆಗಳ ನಡುವೆ, ಗುಂಡೂರಾಯರೂ ತಮ್ಮ ಕಾಲದಲ್ಲಿ ಪ್ರಬಲ ವ್ಯಕ್ತಿಗಳಾಗಿದ್ದರೆಂದೂ, ಬೇಟೆಯಾಡುವುದರಲ್ಲಿ ಅವರೂ ಸಹ ನಿಪುಣರೆಂದೂ, ಕುಟ್ಟಪ್ಪ ತಿಳಿದುಕೊಂಡನು. ಆದರೆ ಇವರಿಬ್ಬರ ಬೇಟೆ ಪೂರ್ವ ಪಶ್ಚಿಮದ ಹಾಗೆ. ಕುಟ್ಟಪ್ಪ ಮಾಂಸಾಹಾರಿಯಾಗಿದ್ದನು. ಹಕ್ಕಿಗಿಕ್ಕಿಗಳನ್ನು ಹೊಡೆದು, ರೆಕ್ಕೆ ಕತ್ತರಿಸಿ, ಕೈಚೀಲ ತುಂಬಿಕೊಂಡು ಬರುವುದು ಅವನ ಆಗಿನ ವಾಡಿಕೆ. ಆದರೆ ಗುಂಡೂರಾಯರು ಮೇಲಿನ ಅಧಿಕಾರಿಗಳ ಒತ್ತಡಕ್ಕೆ ಕಟ್ಟುಬಿದ್ದು ಬೇಟೆಗೆ ಹೋದಲ್ಲಿ ಹುಲಿ

ಇನ್ನಿತರ ದುಷ್ಟಪ್ರಾಣಿಗಳನ್ನು ಹೊಡೆಯುವರೇ ಹೊರತು, ಮತ್ತೊಬ್ಬರ ಆಹಾರಕ್ಕೆಂದು ದಾಕ್ಷಿಣ್ಯಕ್ಕೆ ಕಟ್ಟುಬಿದ್ದು, ಹಕ್ಕಿ, ಜಿಂಕೆ ಮುಂತಾದವುಗಳನ್ನು ಎಂದಿಗೂ ಹೊಡೆದವರಲ್ಲ. ಅದರಲ್ಲಿ ಅವರು ನಿರ್ದಾಕ್ಷಿಣ್ಯಪರರಾಗಿದ್ದರು. ಪೋಲೀಸ್ ಇಲಾಖೆ ತುಂಬ ಹೊಲಸುಗೆಟ್ಟಿದೆಂದು ಜನ ಆಡುವುದುಂಟು. ಆದರೆ ಗುಂಡೂರಾಯರು ಎಂದೂ ಒಂದು ತೊಟ್ಟು ಸಾರಾಯಿ ಬಾಯಿಗೆ ಹಾಕಿದವರಲ್ಲ. ಒಂದು ಬೀಡಿಯನ್ನೂ ಕಚ್ಚರಿಯರು. ಅವರು ಶೀಲತನದಲ್ಲೆ ಕಾಲ ಕಳೆದು ಹುದ್ದೆಯಿಂದ ನಿವೃತ್ತರಾದರು.

## ೧೮

ಗುಂಡ್ಲುಪೇಟೆ ಕಾಡಿನಲ್ಲಿ ಹುಲಿ ಹಾವಳಿ ಬಹಳ ಹೆಚ್ಚಾಯಿತು. ಗ್ರಾಮಗಳಲ್ಲಿ ನಾಲ್ಕೈದು ಮಂದಿ ಜನರನ್ನೂ ಸಹ ಅದು ಕೊಂದು ತಿಂದಿತು. ಇದರಿಂದಾಗಿ ಹಳ್ಳಿಯ ಜನಗಳೆಲ್ಲರೂ ಬಹಳ ಭಯಗ್ರಸ್ತರಾದರು. ಸಂಜೆಯಾದರೆ ಸಾಕು. ಯಾರೂ ಮನೆಯನ್ನು ಬಿಟ್ಟು ಈಚೆಗೆ ಕದಲುತ್ತಿರಲಿಲ್ಲ. ಕುರಿಮರಿಗಳ ದನಕರುಗಳ ಚಿಂತೆ ಅವರಿಗೆ ವಿಶೇಷವಾಗಿ ಹಿಡಿದಿತ್ತು. ಮನುಷ್ಯನ ರಕ್ತ ಉಪ್ಪಂತೆ. ಅದಲ್ಲದೆ ಬಲು ರುಚಿಯಂತೆ. ಒಂದಾವರ್ತಿ ಹುಲಿ ಮನುಷ್ಯನನ್ನು ಕೊಂದು ತಿಂದರೆ, ಆ ರಕ್ತದ ರುಚಿಗೆ ಬೇರಾವ ಪ್ರಾಣಿಯ ಗೊಡವೆಗೂ ಅದು ಹೋಗುವುದಿಲ್ಲೆಂದೂ, ಮನುಷ್ಯನನ್ನೇ ಅದು ಬಯಸುತ್ತದೆಂದೂ, ಹಳ್ಳಿಗಳಲ್ಲಿ ಜನ ಮಾತನಾಡಿಕೊಳ್ಳುತ್ತಾರೆ. ಇದಕ್ಕೆ ಸರಿಯಾಗಿಯೇ ಈ ಹುಲಿ ಅಟ್ಟಹಾಸಗೈಯುತ್ತಿತ್ತು. ಒಂದು ದಿನ ಹಗಲಿನಲ್ಲಿಯೇ ಅದು ಹಳ್ಳಿಯೊಂದರೊಳಗೆ ಪ್ರವೇಶಿಸಿತು. ಜನಗಳ ಕೂಗಾಟ ಹೇಳತೀರದು; ಎಲ್ಲಾ ಚೆಲ್ಲಾಪಿಲ್ಲಿಯಾದರು. ಕೋಲನ್ನು ಪಕ್ಕದಲ್ಲಿಯೇ ಇರಿಸಿಕೊಂಡು ಬಿಸಿಲು ಕಾಯುತ್ತಿದ್ದ ಮುದುಕಿಯೊಬ್ಬ

ಳನ್ನು ಅದು ಎಳೆದುಕೊಂಡು ಹೋಯಿತು. ಈ ಪರಿಸ್ಥಿತಿಯಲ್ಲಿ ಇನ್ನೂ ಅದನ್ನು ಜೀವಸಹಿತ ಬಿಟ್ಟಿರುವುದು ದೊಡ್ಡ ತಪ್ಪೆಂದು ಬಗೆದು, ನಾಲ್ಕಾರು ಹಳ್ಳಿಯ ಗಂಡಾಳುಗಳು ಅದನ್ನು ಕೊಲ್ಲಲು ಸನ್ನದ್ಧರಾದರು. ಲೈಸೆನ್ಸ್ ಪಡೆದ ನಾಲ್ಕಾರು ಜನ ಬಂದೂಕು ಗಳನ್ನು ಹೊತ್ತು ಕಾಡಿಗೆ ನಡೆದರು. ಕಾಡಿನ ಗುಟ್ಟನ್ನರಿತವರು ಹುಲಿ ವಾಸನೆಯನ್ನು ಶೀಘ್ರದಲ್ಲೆ ತಿಳಿದುಕೊಳ್ಳುತ್ತಾರೆ. ಸಮೀಪ ದಲ್ಲಿ ಮಳೆ ಆಗದಿದ್ದು ಮೊದಲ ಬಾರಿಗೆ ಹುಯ್ದಾಗ, ಮಳೆ ಬೀಳುವುದಕ್ಕೆ ಮೊದಲು ಒಂದು ತರಹದ ಕಂಪು ಹೊರಡುತ್ತ ದಲ್ಲವೇ ? ಅಂಥದೇ ಒಂದು ವಿಧದ ವಾಸನೆ ಹುಲಿ ಇದ್ದೆಡೆ ಬೀಸುತ್ತದೆ. ದಟ್ಟವಾಗಿ ಬೆಳೆದಿದ್ದ ಪೊದರಿನ ಒಳಗಡೆ ಹುಲಿ ಅಡಗಿಕೊಂಡಿದೆಯೆಂದು, ನಿಷ್ಕರ್ಷೆಮಾಡಿದ ನಮ್ಮ ಬೇಟೆಗಾರರು ಢಂ ಢಂ ಎಂದು ಗುಂಡು ಹಾರಿಸಿದರು. ಶಬ್ದ ಕೇಳಿದೊಡನೆ ಹುಲಿ ಹೊರಗೆ ಹಾರಿ ಬಂದಿತು. ಅದರ ಭಯಂಕರ ಸ್ವರೂಪ ವನ್ನು ಕಂಡು ಎಲ್ಲರೂ ನಡುಗಿಹೋದರು. ಅದು ಆರಡಿ ಉದ್ದದ ದೊಡ್ಡ ಹುಲಿ. ಬಾಲ ಉದ್ದವಾಗಿ ನೆಲಕ್ಕೆ ಸೋಕುವಂತಿತ್ತು. ದವಡೆಯ ಬಳಿಯ ಆ ಉದ್ದದ ಮೀಸೆ, ಉದ್ದುದ್ದ ಕಪ್ಪುಪಟ್ಟೆ, ಅದರ ಕ್ರೂರದೃಷ್ಟಿ, ಆ ಎಂದು ಬಾಯಿ ತೆರೆದಾಗ ಅಚ್ಚ ರಕ್ತ ವರ್ಣಕ್ಕಿದ್ದ ಅದರ ನಾಲಗೆ, ಬಾಚಿಯಂತಿದ್ದ ಅದರ ಹಲ್ಲುಗಳು, ಇವನ್ನು ನೋಡಿ ಬಂದೂಕವನ್ನು ಹಿಡಿದಿದ್ದ ಆ ವೀರರ ಕೈಯೆಲ್ಲ ತ ಟ ಪ ಟ ನೆ ನಡುಗಲಾರಂಭಿಸುದುವು. ಪ್ರಾಣಭಯದಿಂದ ಬದುಕುವೆಯಾ ಬಡಜೀವವೇ ಎಂದು ಎಲ್ಲರೂ ಓಡಲಾರಂಭಿಸಿ ದರು. ರೌದ್ರಾಕಾರ ತಾಳಿದ ಹುಲಿ ಬಿಡದೆಯೇ ನಾಲ್ಕು ಕಾಲು ಗಳನ್ನು ಮೇಲಕ್ಕೆತ್ತಿ ಜಂಘನೆ ನೆಗೆದು ಅವರನ್ನು ಬೆನ್ನಟ್ಟಿತು. ಒಬ್ಬನನ್ನು ಬಿಟ್ಟು ಮತ್ತುಳಿದವರು ಹೇಗೆಹೇಗೋ ಮಾಡಿ ಅಕ್ಕ ಪಕ್ಕಗಳಲ್ಲಿದ್ದ ಮರ ಹತ್ತಿಕೊಂಡರು. ಕೈಯಲ್ಲಿದ್ದ ಬಂದೂಕ ಗಳೆಲ್ಲ ಜಾರಿ ಕೆಳಕ್ಕೆ ಬಿದ್ದುವು. ಉಳಿದವರಲ್ಲೊಬ್ಬನಿಗೆ ಮರ

ಹತ್ತಲು ಬಾರದು. ಪಾಪ; ಅವನೇನು ಮಾಡುವನು? ಹಿಂದಿರುಗಿ ನೋಡುತ್ತಾನೆ, ಆ ಭಯಂಕರ ಹುಲಿಗೂ ತನಗೂ ನಡುವೆ ನಾಲ್ಕು ಮೊಳಗಳ ಅಂತರವೇ ಇದೆ. ಇನ್ನುಳಿದಿರುವುದು ಒಂದೇ ನೆಗೆತ. ತನ್ನನ್ನು ಕೊಲ್ಲಲು ಬಂದ ಅವನನ್ನೇ ಕೊಂದು, ಅವನ ಬಿಸಿ ರಕ್ತವನ್ನು ಕುಡಿಯಲು, ಸೇಡನ್ನು ತೀರಿಸಿಕೊಳ್ಳಲು, ಅದು ಶಪಥಮಾಡಿದೆ. ಇನ್ನೇನು ಮಾಡಲೂ ಓಡಲೂ ಸಾಧ್ಯವಿಲ್ಲವೆಂದರಿತ ಆ ಯುವಕನು ಎದುರು ನಿಂತು ಧೈರ್ಯಮಾಡಿ, ಗುಂಡು ಹಾರಿಸಿಯೇ ಬಿಟ್ಟನು. ಗುರಿ ತಪ್ಪಿಹೋಯಿತು. ಆದರೆ ಹುಲಿಯ ಮುಂದಿನ ಬಲದ ಕಾಲಿಗೆ ಏಟು ತಗಲಿತು. ಆ ಬಂದೂಕಿನ ಶಬ್ದಕ್ಕೂ, ಏಟು ಬಿದ್ದುದರ ಪರಿಣಾಮವಾಗಿಯೂ, ಹುಲಿ ಸ್ವಲ್ಪ ಹಿಂದೆ ಬಿದ್ದಿತು. ಮರದ ಮೇಲೆ ಹತ್ತಿದ್ದ ಇನ್ನೂ ಕೆಲವರು ಧೈರ್ಯಮಾಡಿ, ಕೆಳಕ್ಕೆ ಧುಮುಕಿ ಬಂದೂಕಗಳನ್ನು ಎತ್ತಿಕೊಂಡರು. ಇನ್ನು ಇವರೊಡನೆ ಕಾದಾಡಿದರೆ ತನ್ನ ಪ್ರಾಣಕ್ಕೆ ಸಂಚು ಎಂದರಿತ ಹುಲಿ ಪಕ್ಕಕ್ಕೆ ಪೊದರೊಳಗೆ ಹಾರಿತು. ನಾಲ್ಕಾರು ಕಡೆಗಳಿಂದಲೂ ಢಂ ಢಂ ಗುಂಡು ಹಾರಿಸಿದರು. ಆದರೆ ಅದು ಬಹಳ ಸಾಮರ್ಥ್ಯದಿಂದ ತಪ್ಪಿಸಿಕೊಂಡು ಓಡಿತು. ಘಾಸಿಹೋದ ಆ ಹುಲಿ ಇನ್ನು ಆ ಪ್ರಾಂತ್ಯದಲ್ಲೆ ಉಳಿಯಬಾರದೆಂದು ತಡಬೂರು ಬೆಟ್ಟಹತ್ತಿ, ಪಾಳ್ಯದ ಕಾಡಿಗೆ ಬಂದುಬಿಟ್ಟಿತು. ಅನಂತರ ಮೃತ್ಯುನಾಟಕ ಇಲ್ಲೂ ಪ್ರಾರಂಭವಾಯಿತು. ನಾಲ್ಕಾರು ಜನರನ್ನು ಅದು ಇಲ್ಲಿಯೂ ಆಹುತಿಯಾಗಿ ತೆಗೆದುಕೊಂಡಿತು. ಜನ ಬಹಳ ಬೆದರಿದರು: ಹಾಹಾಕಾರ ಮಾಡಿದರು.

## ೧೯

ರಾಮಕೃಷ್ಣ ಪರಮಹಂಸರು ಒಂದು ಸೊಗಸಾದ ಉಪಮಾನ ಹೇಳಿದ್ದಾರೆ, ನಿಮಗದು ಜ್ಞಾಪಕವಿದೆಯೆ? ಹದ್ದು ಸಹಸ್ರಾರು ಅಡಿ ಮೇಲೆ ಹಾರಾಡುತ್ತಿದ್ದರೂ, ತನಗೆ ಭೂಮಿಯಲ್ಲಿ

ಒಂದು ನಾರಿದ ವಸ್ತುವನ್ನೋ, ಕೋಳಿಕುಂಜಗಳನ್ನೋ ಕಂಡಲ್ಲಿ, ಸರ್ರನೆ ಕೆಳಕ್ಕಿಳಿದು, ಗಭಕ್ಕನೆ ಎತ್ತಿಕೊಂಡು ಹಾರಿಹೋಗುವು ದಂತೆ. ಅದು ಎಷ್ಟೇ ಮೇಲೆ ಹಾರಾಡುತ್ತಿದ್ದರೂ ಅದರ ದೃಷ್ಟಿ ಗುರಿ ಮಾತ್ರ ತೀಕ್ಷ್ಣ. ಎಷ್ಟೇ ಪಂಡಿತರಾದರೂ, ಓದಿದವರೂ ಸಹ, ಕಾಮಕ್ಕೆ ಬಿದ್ದು ಕೆಡುತ್ತಾರೆಂದು, ವಿದ್ಯಾವಂತ ಕಾಮಿಗಳಿಗೆ ಅವರು ಸಾದೃಶ್ಯಕೊಟ್ಟಿದ್ದಾರೆ. ಈ ಹುಲಿಯ ಸಮಾಚಾರ ನಮ್ಮ ಕೊಡಗಿನ ಕುಟ್ಟಪ್ಪನ ಕಿವಿಗೆ ಬಿದ್ದುದೇನೂ ಆಶ್ಚರ್ಯ ಕರವಾದ ಸಂಗತಿಯಲ್ಲ. "ಸಂದರ್ಭ ಬಿಟ್ಟುಕೊಟ್ಟರು ಅಯೋಗ್ಯರು, ಎದುರಿಗೆ ಸಿಕ್ಕಿದ್ದ ಹುಲಿಯನ್ನು ಹೊಡೆಯಲು ಧೈರ್ಯಸಾಲದಿರುವವರೆಲ್ಲ ಬೇಟೆಗೆ ಏಕೆ ಹೊರಡುತ್ತಾರೊ? ಇಂಥವರೆಲ್ಲ ಬಂದೂಕವನ್ನು ಹೆಗಲಿಗೇರಿಸಲು, ನಾನೂ ಗಂಡಸೇ ಎಂದು ಹೇಳಿಕೊಳ್ಳಲು ನಾಚುವುದಿಲ್ಲವೇ?" ಎಂದು ಆ ದಿನ ಕ್ಲಬ್ಬಿನಲ್ಲಿ ಅವನು ಜಂಭ ಕೊಚ್ಚಿಕೊಂಡನು. "ಗುಂಡೂ, ನೀನೂ ಹೊರಡು. ಬೇಟೆಯಾಡಿ ತುಂಬ ದಿನವಾಯ್ತು. ನಾಳೆಯೇ ನಾವು ಜೀಪ್‌ಹಾಕಿಕೊಂಡು ಹೊರಟು ಆ ಹುಲಿಯನ್ನು ಕೊಂದು ಹಾಕೋಣ" ಎಂದು ಗುಂಡೂರಾಯರ ಬೆನ್ನು ತಟ್ಟಿದರು. ಗುಂಡೂರಾಯರು ಮೈಸೂರು ಸೀಮೆಯಲ್ಲಿ ಸಾಮಾನ್ಯವಾಗಿ ಎಲ್ಲ ಕಾಡಿನಲ್ಲಿಯೂ ನುಗ್ಗಿದ್ದರು. ಹೆಗ್ಗಡದೇವನ ಕೋಟೆ, ಕಾನಕಾನ ಹಳ್ಳಿ, ಗುಂಡ್ಲುಪೇಟೆ, ಪಶ್ಚಿಮಕ್ಕೆ ಶಿವಮೊಗ್ಗ, ಸೊರಬ, ಸಾಗರ ಹೀಗೆ ಎಲ್ಲ ಕಾನನ್ನು ಅವರು ಬಲ್ಲವರಾಗಿದ್ದರು. ಆದರೆ ಅವರ ಸರ್ವಿಸ್ಸಿನಲ್ಲಿ ಪಾಳ್ಯದ ಕಾಡನ್ನು ಮಾತ್ರ ಅವರು ಪ್ರವೇಶಿಸಿರಲಿಲ್ಲ. ಕೇಳಿ ತಿಳಿದುಕೊಂಡಿದ್ದರು ಅಷ್ಟೆ. ಈವಾಗ ಈ ಸಂದರ್ಭ ವೊದಗಲಾಗಿ ಅದನ್ನೂ ನೋಡಿಯೇ ಬಿಡುವುದು ಎಂದು ತೀರ್ಮಾ ನಿಸಿಬಿಟ್ಟರು. ಪ್ರಯಾಣಕ್ಕೆ ಅಣಿಯಾಗತೊಡಗಿದರು. ಎರಡು ಜೀಪ್ ಸಿದ್ಧವಾದುವು. ಕುಟ್ಟಪ್ಪನದೇ ಒಂದು ಜೀಪ್. ಮತ್ತೊಂದನ್ನು ಬಾಡಿಗೆಗೆ ತೆಗೆದುಕೊಂಡರು. ಅಕ್ಕಿ, ಬೇಳೆ

ಮುಂತಾದ ಆಹಾರ ಸಾಮಗ್ರಿಗಳನ್ನೆಲ್ಲ ಕೈಚೀಲಗಳಿಗೆ ತುಂಬಿಸಿದರು. ಬಂದೂಕಗಳಿಗೆ ಗುಂಡು ಜೋಡಿಸಿಕೊಂಡರು. ಕುಟ್ಟಪ್ಪ, ಗುಂಡೂರಾಯರು,ಮತ್ತಿಬ್ಬರು ಸ್ನೇಹಿತರುಗಳಾದ ಶಿವು, ನಾಣು, ಹೀಗೆ ನಾಲ್ಕು ಮಂದಿ ಜೀಪ್ ಏರಿದರು. ಮುಂದುಗಡೆ ಕುಳಿತು ಕುಟ್ಟಪ್ಪನೇ ಡ್ರೈವ್ ಮಾಡತೊಡಗಿದನು. ಪಕ್ಕದಲ್ಲಿ ಗುಂಡೂರಾಯರು, ಹಿಂದಿನ ಆಸನದಲ್ಲಿ ಮತ್ತೀರ್ವರು ಕುಳಿತುಕೊಂಡರು. ಬಂದೂಕುಗಳನ್ನೂ, ಸಾಮಾನುಗಳನ್ನೂ ಮತ್ತೊಂದು ಜೀಪಿಗೆ ಹಾಕಲಾಯಿತು. ಆ ದಿನ ಸಂಜೆ ಐದೂವರೆ ಘಂಟೆಗೆ ಇನ್ನೂ ಹತ್ತು ನಿಮಿಷಗಳು ಉಳಿದಿರುವಾಗಲೇ, ಎಲ್ಲರೂ ಪಾಳ್ಯ ಬಂದು ಸೇರಿ ಮೊಕ್ಕಾಂ ಮಾಡಿದರು.

## ೨೦

ಹುಲಿ ಬೇಟೆ ಆಡಲು ಯಾರೋ ವ್ಯಕ್ತಿಗಳು ಮೈಸೂರಿನಿಂದ ಬಂದಿದ್ದಾರೆಂದು ಈ ಭೀಮಾಕಾರದ ವ್ಯಕ್ತಿಗಳನ್ನು ನೋಡಲು, ಜನಗಳ ಗುಂಪು ಅವರಿಳಿದಿದ್ದ ಮನೆಯ ಬಳಿ ಬಂದು ಮುತ್ತಿಗೆ ಹಾಕಿಕೊಂಡಿತು. ನೋಟ ನೋಡಲು, ಬಾಲಕರ ತಂಡವೂ ವಿಶೇಷವಾಗಿ ಮೆರೆದಿತ್ತು. ಸ್ತ್ರೀಯರು ಗುಜುಗುಜು ಮಾತನಾಡಿಕೊಂಡರು. ಊರಿಗೆ ಸ್ಥಿತಿವಂತರಾದ ಶಾಮರಾಯರು ತಮ್ಮ ಮನೆಯಲ್ಲೇ ಆಗಂತುಕರೆಲ್ಲ ಊಟ ತೀರಿಸಬೇಕೆಂದು ಆಹ್ವಾನವಿತ್ತರು. ನಮ್ಮೀ ಗೋಷ್ಠಿ ಶಾಮರಾಯರ ಮನೆ ಸೇರಿತು. ಎಲ್ಲರೂ ಸಾಲಾಗಿ ಕುಳಿತರು. ತಾಯಿ ಜಾನಕಮ್ಮನವರ ಕೂಡ ಬಡಿಸಲು ರಾಮುವೂ ಸಹಾಯಕನಾದ. ಲಕ್ಷ್ಮಿ ಅಡಿಗೆ ಮನೆಯ ಬಾಗಿಲ ಸಂದಿನಿಂದಲೇ ಇಣಿಕಿ ನೋಡಿದಳು. ಅವಳಿಗೆ ಹೊರಗೆ ಬರಲು ನಾಚಿಕೆ. ಕುಟ್ಟಪ್ಪನಂಥ ವ್ಯಕ್ತಿಯನ್ನು ಲಕ್ಷ್ಮಿ ಇದುವರೆಗೆ ಕಂಡಿರಲಿಲ್ಲವಾದುದ

ರಿಂದ, ವಿಸ್ಮಯದ ಕೂಡ ಅವಳಿಗೆ ಸ್ವಲ್ಪ ನಗುವೂ ಬಂದಿತು. " ಹಾಗೆಲ್ಲಾ ನಗಬಾರದು ಕಣೇ " ಎಂದು ತಾಯಿ ಆಜ್ಞಾಪಿಸಿದ ಮೇಲೆ ಅವಳು ನಗುವನ್ನು ಕಷ್ಟಪಟ್ಟು ತಡೆದುಕೊಂಡಳು. ಊಟವಾದನಂತರ ಅದೂ ಇದೂ ಮಾತಾಡಿ, ಎಲ್ಲರೂ ಮಲಗಿದರು. ದೂರದಿಂದ ಮಾಡಿದ ಪ್ರಯಾಣದ ಆಲಸ್ಯದಿಂದ ಅವರಿಗೆ ಒಡನೆಯೇ ನಿದ್ದೆಹತ್ತಿತು. ಬೆಳಗಾಯಿತು. ಬಂದ ಅತಿಥಿಗಳಲ್ಲಿ ಗುಂಡೂರಾಯರೇ ಮೊದಲುಯೆದ್ದವರು. ಅವರು ಕೆರೆಕಡೆಗೆ ಹೋಗಿದ್ದು ಬಂದು ಸ್ನಾನ ಮುಗಿಸಿದರು. ರಾಮು ಮಗುಟ ತಂದುಕೊಟ್ಟನು. ಲಕ್ಷ್ಮಿ ಬೆಳ್ಳಿ ಪಂಚಪಾತ್ರೆಯನ್ನು ಉದ್ಧರಣೆ ನೀರು ತುಂಬಿಸಿ, ಸಂಧ್ಯಾವಂದನೆಗೆಂದು ತಂದಿಟ್ಟಳು. ಶಾಮರಾಯರು ಓರೆಗಣ್ಣಿನಿಂದ ಲಕ್ಷ್ಮಿಯನ್ನು ನೋಡಿದರು. ಯಾವುದೋ ಒಂದು ವಿಧವಾದ ತೃಪ್ತಿ ಅವರಲ್ಲುಂಟಾಯಿತು. ಸಂಧ್ಯಾವಂದನೆ ಅರ್ಧ ನಡೆಯುತಿದ್ದಾಗ, ಮತ್ತುಳಿದವರೆಲ್ಲ ಎಚ್ಚೆತ್ತರು. " ಗುಂಡೂ, ಜಪಾನೂ ಮುಗಿಸ್ಬಿಟ್ಯೇನೋ " ಎಂದು ಚಿಟಿಕೆ ಹಾಕುತ್ತ ಕುಟ್ಟಪ್ಪನು ಮೇಲಕ್ಕೆದ್ದನು. ಎಲ್ಲರೂ ತಮ್ಮ ನಿತ್ಯಕರ್ಮಗಳನ್ನು ತೀರಿಸಿ, ಸ್ನಾನಪಾನಾದಿಗಳನ್ನು ಮುಗಿಸಿಕೊಂಡರು. ಇಷ್ಟರೊಳಗೆ ಕಾಫಿಯೂ ಸಿದ್ಧವಾಗಿದ್ದಿತು. ಈರುಳ್ಳಿ ಬದನೇಕಾಯಿ ಹೆಚ್ಚಿ ಹಾಕಿ, ಜಾನಕಮ್ಮನವರು ತಯಾರು ಮಾಡಿದ್ದ ರವೇ ಉಪ್ಪಿಟ್ಟನ್ನು, ತಮ್ಮ ಎಲ್ಲರೂ ಗಡದ್ದಾಗಿ ತಿಂದರು. ಶಾಮರಾಯರು ತಮ್ಮ ಮುಂದಿನ ಕಾರ್ಯಕ್ರಮಗಳಿಗೆಲ್ಲ ದಾರಿ ಹೇಳಿಕೊಟ್ಟರು. ಸಂಜೆ ಐದೂವರೆ ಘಂಟೆ ಮೇಲೆ ಹೊರಟಲ್ಲಿ, ಆ ಸಮಯದಲ್ಲೇ ಸಾಮಾನ್ಯವಾಗಿ ಹುಲಿ ಹೊರಗೆ ಬರುವ ಸಂಭವ ಜಾಸ್ತಿಯೆಂದೂ, ತಾವೆಲ್ಲದಕ್ಕೂ ಅಣಿ ಮಾಡಿಕೊಡುವುದಾಗಿಯೂ, ಒಪ್ಪಿದರು. ಇಡೀ ಒಂದುದಿನ ಹೇಗೆ ಕಾಲ ತಳ್ಳುವುದೆಂದು ಅವರಿಗೆಲ್ಲ ಚಿಂತೆ ಹತ್ತಿತು. ಇಷ್ಟರಲ್ಲಿ ರಾಮು ಕೊಂಗಳ್ಳಿ ದೇವಾಲಯವನ್ನು ನೀವು ನೋಡಿದ್ದೀರಾ?

ಎಂದು ಕೇಳಿದನು. ಇಲ್ಲವಲ್ಲಾ, ಯಾವ ದೇವಾಲಯ ಎಂದವರು ಮರು ಪ್ರಶ್ನೆ ಹಾಕಿದರು. ಆ ದೇವಾಲಯದ ಬಗ್ಗೆ ರಾಮು ವಿವರಿಸಿದನು. ಈ ಪ್ರಾಂತ್ಯಕ್ಕೆಲ್ಲ ಶ್ರೀ ಮಲ್ಲಿಕಾರ್ಜುನೇಶ್ವರನೇ ವರದೇವನೆಂದೂ, ಹೆಂಗಸರು ಅವನ ಸೇವೆ ಮಾಡುವುದಿಲ್ಲವೆಂದೂ ಅವನಿಂದ ತಿಳಿಯಬಂದಿತು. ಇದನ್ನು ಕೇಳಿ ಎಲ್ಲರಿಗೂ ಕುತೂಹಲ ಹೆಚ್ಚಿತು. ದೇವರು ಜಗತ್ತಿಗೆ ಸ್ವಾಮಿಯಲ್ಲವೆ? ತಂದೆಯಲ್ಲವೆ? ಹೀಗಿರುವಾಗ ಗಂಡುಹೆಣ್ಣೆಂಬ ಭೇದ ಭಾವ ಅವನಿಗೇಕೆ? ಹೆಣ್ಣು ಅವನ ಸೇವೆಗ ಬರಬಾರದೆಂದರೆ, ಅವನೂ ಪಕ್ಷಪಾತ ಮಾಡಿದ ಹಾಗಾಗಲಿಲ್ಲವೆ? ಯಾರೋ ಮೂಢರು ಸ್ವಾರ್ಥಕ್ಕಾಗಿ ಏನೇನೋ ಗುಲ್‌ಮಾಲ್ ಮಾಡಿದ್ದಾರೆ ಎಂದಂದುಕೊಂಡರು. ಹೆಂಗಸರು ದೇವಾಲಯಕ್ಕೆ ಪ್ರವೇಶಿಸಬಾರದೆಂದು ಅವರೆಲ್ಲಿಯೂ ಕೇಳಿರಲಿಲ್ಲ; ತಿಳಿದಿರಲಿಲ್ಲ. ಇದು ಅವರುಗಳಿಗೆ ವಿಚಿತ್ರವಾಗಿ ತೋರಿದುದರಲ್ಲಿ ಸೋಜಿಗವೇನೂ ಇಲ್ಲ. ಸರಿ; ಎಲ್ಲರೂ ಮಧ್ಯಾಹ್ನದೊಳಗಾಗಿ ದೇವರ ಸೇವೆ ಮಾಡಿಕೊಂಡು ಬಂದು, ಮಧ್ಯಾಹ್ನದ ಮೇಲೆ ಊಟ ತೀರಿಸಿಕೊಂಡು, ಹುಲಿ ಬೇಟೆಗೆ ಹೊರಡುವುದೆಂದು ತೀರ್ಮಾನವಾಯಿತು. ರಾಮುವೂ ಸಹ ನಮ್ಮ ಗೋಷ್ಠಿಯ ಕೂಡ ಹೊರಟನು. ಸ್ಥಳ ಪರಿಚಯ ಮಾಡಿಕೊಡಲು ಅವರಿಗೆಲ್ಲ ಅವನೇ ನೆರವಾದನು. ಪಾಳ್ಯದಿಂದ ಕೊಂಗಳ್ಳಿ ದೇವಾಲಯ ಎರಡೂವರೆ ಮೈಲುಗಳ ದೂರದಲ್ಲಿದೆ. ಏನೇನೆಲ್ಲ ಮಾತನಾಡುತ್ತ ಅವರು ದೇವಸ್ಥಾನದ ಬಳಿ ಬಂದು ಸೇರಿದರು. ಅಲ್ಲಿಂದಾಚೆಗೆ ಹೆಂಗಸರು ಬರಕೂಡದೆಂದು ರಾಮು, ಹನುಮಂತರಾಯನ ಗುಡಿಯ ಬಳಿಯಲ್ಲಿ ನಿಂತು ವಿವರಿಸಿದನು. ಗುಡಿಯ ಪಕ್ಕದಲ್ಲಿ ಒಂದು ಮರಕ್ಕೆ ಎರಡು ಘಂಟೆಗಳನ್ನು ನೇತುಹಾಕಿದ್ದಾರೆ. ರಾಮು ಢಣ್ ಢಣ್ ಎಂದು ಗಂಟೆ ಬಾರಿಸಿದನು. ಅದರ ನಿನಾದ ಕಾಡೆಲ್ಲಾ ವ್ಯಾಪಿಸಿ ಪ್ರತಿಧ್ವನಿಗೈದಿತು. ದಕ್ಷಿಣ, ಪಶ್ಚಿಮೋ

ತ್ತ್ರರ ಬೆಟ್ಟಗಳು ಒಂದು ಸೇರಿ, ಕೊಂಗದ ಆಕಾರವಾಗಿರುವುದ ರಿಂದ, ಕೊಂಗಳ್ಳಿ ಎಂದು ಇಲ್ಲಿಗೆ ಹೆಸರು ಬಂದಿತೆಂದು ಅವನು ವಿವರಿಸಿದನು. ಅಲ್ಲಿಯ ರಮಣೀಯವಾದ ನೋಟವನ್ನು ನೋಡಿ ಎಲ್ಲರೂ ಹಿಗ್ಗಿದರು. ದೂರದಲ್ಲಿ ನೀಲಗಿರಿ ಬೆಟ್ಟ ಅಲ್ಲಿಗೆ ಕಾಣುತ್ತದೆ. ನೀರು ಧುಮುಕುವ, ಹರಿಯುವ, ದೂರದ ದೃಶ್ಯ ವೊಂದು ಬೆಳ್ಳಗೆ, ಮಿಂಚಿನಂತೆ, ಒಂದು ಗೀರಿನಂತೆ ಹೊಳೆಯು ತ್ತದೆ. ಈ ದೇಗುಲದಲ್ಲಿ ನಾವು ಕಲಾಕೌಶಲ್ಯವನ್ನೋ, ಶಿಲ್ಪ ಚತುರತೆಯನ್ನೋ ಕಾಣಲಾಗುವುದಿಲ್ಲ. ಆದರೆ ಇಲ್ಲಿಯ ಪ್ರಕೃತಿಯ ಮನೋಹರವಾದ ದೃಶ್ಯಕ್ಕೆ ಎಂಥವನೂ ಮಾರು ಹೋಗುತ್ತಾನೆ. ಪೂಜೆ ನಡೆಯಿತು ; ಪ್ರಸಾದವನ್ನು ಸ್ವೀಕರಿಸ ಲಾಯಿತು. ಗುಂಡೂರಾಯ್ರರು ಹೆಂಗಸರು ಅಲ್ಲಿಗೇಕೆ ಬರ ಬಾರದೆಂದು ಪೂಜಾರಿಗೂ ಪ್ರಶ್ನೆಹಾಕಿದರು. “ಅದೇನೊ ನಮಗೆ ಅದೆಲ್ಲ ಗೊತ್ತಿಲ್ಲ ಸ್ವಾಮಿ, ತಲೆತಲಾಂತರದಿಂದ ಹಾಗೆ ನಡೆದು ಕೊಂಡು ಬಂದಿದೆ ”ಯೆಂದು ಅವರಿಗೆ ತಿಳಿದದ್ದಷ್ಟನ್ನೇ ಅವನೂ ಹೇಳಿದನು. “ ಪರೀಕ್ಷೆ ಮಾಡಿ ನೋಡಿದರೇನೇ ಗೊತ್ತಾಗುವುದು ಗುಂಡೂ ” ಎಂದು ಕುಟ್ಟಪ್ಪ ನುಡಿದನು. ಮಲೆಯ ಮಹದೇಶ್ವ ರನೂ ಕೊಂಗಳ್ಳಿ ಶ್ರೀ ಮಲ್ಲಿಕಾರ್ಜುನೇಶ್ವರನೂ ಅಣ್ಣ ತಮ್ಮಂದಿರೆಂಬ ವಿಶೇಷ ಸುದ್ದಿಯನ್ನು ಪೂಜಾರಿಯಿಂದ ಸಂಗ್ರ ಹಿಸಲಾಯಿತು. ಸ್ಥಳಪುರಾಣಗಳಾವುವೂ ನಮಗಿಲ್ಲಿ ದೊರಕು ವುದಿಲ್ಲ. ಸಂಶೋಧನೆ ನಡೆಸುವ ಮಹಾಶಯರುಗಳಾರಾದರೂ ಇಲ್ಲಿಗೆ ಬರುವುದು ಒಳಿತೆಂದು ನಮ್ಮ ಅಭಿಪ್ರಾಯ. ಸರಿ, ಈಗೆಲ್ಲರೂ ಪಾಳ್ಯದತ್ತ ನಡೆದರು. ಊಟವಾಯಿತು. ನಾಲ್ಕಾರು ಹಳ್ಳಿಗಳಿಂದ ಶಾಮರಾಯರ ಆಜ್ಞೆ ಮೇರೆಗೆ ನೂರಾರು ಆಳು ಗಳು ಸಂಜೆ ನಾಲ್ಕು ಘಂಟೆಗೆ ಬಂದು ಸೇರಿದರು. ಹುಲಿ ಎಲ್ಲಿದೆಯೆಂಬುದನ್ನು ಪತ್ತೆಹಚ್ಚಿ ಎಬ್ಬಿಸುವುದವರ ಕರ್ತವ್ಯ. ಬಂದೂಕಗಳನ್ನು ಹೆಗಲಿಗೇರಿಸಿದ ಈ ನಾಲ್ವರ ಹಿಂದೆ ಜನರ

ಗುಂಪೆಲ್ಲ ನಡೆಯಿತು. ಪಾಳ್ಯದಿಂದ ಪಶ್ಚಿಮಕ್ಕೆ ನಾಲ್ಕು ಮೈಲುಗಳ ದೂರ ಸಾಗಿದನಂತರ, ದಟ್ಟವಾದ ಕಾಡಿನೊಳಗೆ ಅವರೆಲ್ಲರೂ ಪ್ರವೇಶಿಸಿದರು. ನೆರೆದಿದ್ದ ಜನಸ್ತೋಮವೆಲ್ಲ ಕೂಗು ಹಾಕಿತು. ಬಲವಾಗಿ ತಮಟೆ ಬಡಿಯಲು ಪ್ರಾರಂಭಿಸಿದರು. ಹುಲಿ ಆ ಸ್ಥಳದಲ್ಲೇ ಇದ್ದಿತು. ಅದು ಶಬ್ದಕೇಳಿ ರೋಸಿದಂತೆ ಹಾಂ ಎಂದು ಬಾಯಿತೆರೆದು, ಮೇಲಕ್ಕೆದ್ದಿತು. ಹುಲಿಯನ್ನು ಕಂಡೊಡನೆಯೆ ಜನಗಳೆಲ್ಲ ಹತ್ತಾರು ಗುಂಪುಗಳಾಗಿ, ದೂರ ದೂರ ಸುತ್ತುಗಟ್ಟಿಕೊಂಡರು. ಈ ದಿನ ಹುಲಿಯ ಜಂಭ ವೇನೂ ನಡೆಯಲಿಲ್ಲ. ಕುಟ್ಟಪ್ಪನ ಒಂದೇ ಏಟು ಅವಕ್ಕೆ ಬಲವಾಗಿ ತಾಗಿ ಧಡಾರ್ ಎಂದು ಅದು ನೆಲಕ್ಕುರುಳಿತು.

## ೨೧

ಮೂರನೆಯ ದಿನ ಗದ್ದಲವೋ ಗದ್ದಲ ; ಕೋಲಾಹಲವೋ ಕೋಲಾಹಲ. ಸತ್ತ ಹುಲಿಯನ್ನು ನೋಡಲು ಹಳ್ಳಿಯ ಜನಗಳೆಲ್ಲ ಪಾಳ್ಯದಲ್ಲಿ ತುಂಬಿಕೊಂಡರು. ಬಾಲಕರ ಸಂಭ್ರಮವನ್ನಂತೂ ಹೇಳತೀರದು. ಮಣ್ಣೆರಚುವುದು, ಕೂಗುವುದು, ಕೇಕೆಹಾಕುವುದು ಮುಂತಾದುವುಗಳಿಂದ, ಅವರಿಗೆ ಅದು ಒಂದು ಆಟದ ವಸ್ತುವಾಗಿ ಪರಿಣಮಿಸಿತ್ತು. “ ಬಡ್ಡಿಮಗ್ನ ಹುಲಿ ನೆಗ್ದುಬಿತ್ತಲ್ಲಪ್ಪ, ಸದ್ಯ ಹೊಡದ್ರು ಮಾರಾಯ್ರು” ಎಂದು ಮುದುಕನೊಬ್ಬನು ನುಡಿದನು. ಹುಲಿಯನ್ನೂ, ಹುಲಿ ಹೊಡೆದವರನ್ನೂ, ಪಕ್ಕದಲ್ಲಿ ಕುಳ್ಳಿರಿಸಿ, ಮೆರೆವಣಿಗೆ ಮಾಡಬೇಕೆಂದು ಮುಖ್ಯಸ್ಥರೆಲ್ಲ ತೀರ್ಮಾನ ಮಾಡಿದರು. ಕುಟ್ಟಪ್ಪನೂ, ಗುಂಡೂರಾಯರೂ, ಇದೊಂದೂ ಬೇಡವೆಂದು ಆಕ್ಷೇಪಿಸಿದರು. ಆದರೆ ಅದಕ್ಕೆ ಅವರು ಒಪ್ಪುತ್ತಾರೇನು? ನೂರಾರು ಮಂದಿಯ ಪ್ರೀತಿ, ಗೌರವಗಳ ಕಾಣಿಕೆಯನ್ನು ನಿರಾಕರಿಸಲು ನಮ್ಮೀ ನಾಲ್ವರಿಗೆ ಸಾಧ್ಯವಾಗಲಿಲ್ಲ.

ಬಿದಿರುದಟ್ಟಿಗಳನ್ನು ಕಟ್ಟಿ ಆಗಲೇ "ಪಲ್ಲಕ್ಕಿ" ಸಿದ್ಧವಾಗ ತೊಡಗಿತು. ಮಧ್ಯೆ ಮಧ್ಯೆ ಚಿಕ್ಕಹಚ್ಚೆಗಳನ್ನು ಸೇರಿಸಿ ಹೆಣೆದು, ಅದನ್ನು ವಿಸ್ತಾರಗೊಳಿಸಿದರು. ಮೇಲೆ ಕಮಾಲ್ ಬಗ್ಗಿಸಿದರು. ಬಣ್ಣಬಣ್ಣದ ಕಾಗದಗಳನ್ನು ಕೊರೆದು ಕತ್ತರಿಸಿ, ಚಿತ್ರ ಚಿತ್ರ ವಾಗಿ ಮಾಡಲು ಅಗ್ರಹಾರದ ಹುಡುಗರೆಲ್ಲ ಮುಂದೆ ನಿಂತರು. ಮಾವಿನಸೊಪ್ಪನ್ನು ಇಕ್ಕಡೆಗಳಲ್ಲಿಯೂ ಸಿಕ್ಕಿಸಿ, ಮುಂದಿನ ಭಾಗ ದಲ್ಲಿ ಎರಡು ಹೊಂಬಾಳೆ ಗುಚ್ಛನ್ನೂ ಕಟ್ಟಿದರು. ಈ ದಿನವೂ ಇಲ್ಲಿಯೇ ಇರಬೇಕಾಯಿತಲ್ಲ ಎಂದು ಇವರೆಲ್ಲರೂ ಗೊಣಗಿದರು. ಆದರೆ ಹಳ್ಳಿಯ ಜನಗಳ ಕೋರಿಕೆಯನ್ನು ನಿರಾಕರಿಸಲು ಸಾಧ್ಯವೂ ಇಲ್ಲ, ಮರ್ಯಾದೆಯೂ ಅಲ್ಲವೆಂದು ಮಾತನಾಡಿಕೊಂಡರು. ಆ ದಿನ ಮಧ್ಯಾಹ್ನ ಊಟಕ್ಕೆ ಕುಳಿತಾಗ, "ನಾಲ್ಕು ಮಂದಿಗೆ ಬಡಿಸುವುದಕ್ಕೆ ಇಬ್ಬರಾಗಬೇಕೇನೋ, ನೀನೂ ಕುಳಿತುಕೋ" ಎಂದು ಶಾಮರಾಯರಂದಾಗ, ರಾಮುವೂ ಇವರ ಕೂಡಲೇ ಕುಳಿತುಕೊಂಡನು. ಲಕ್ಷ್ಮಿಗೆ ಈಗ ನಾಚಿಕೆ ಸ್ವಲ್ಪ ಕಡಿಮೆ ಯಾಗಿತ್ತು. ಅವಳು ಯಾವಾಗಲೂ ಹಾಗೇ, ಮೊದಲು ಮೊದಲು ತುಂಬ ಸಂಕೋಚ, ಆಮೇಲಾಮೇಲೆ ಒಗ್ಗಿದರೆ, ನಿಷ್ಕಪಟಿಯಾಗಿ, ಹುಡುಗತನ ಆಡಲು ಪ್ರಾರಂಭಿಸಿಬಿಡುತ್ತಾಳೆ. ಈಗ ಇವರೆಲ್ಲರೂ ಬಂದು ಎರಡು ದಿನಗಳಾಗಿತ್ತು. ಮೇಲಾಗಿ ಎಲ್ಲ ಮುದುಕರುಗಳೇ. ಹೀಗಾಗಿ ಅವಳು ಅಷ್ಟು ಸಂಕೋಚ ಪಡಬೇಕಾದ್ದಿರಲಿಲ್ಲ. ಈ ದಿನ ಅವಳು ತಾಯಿಯ ಕೂಡ ಬಡಿ ಸಲು, ತಾನೂ ನಿಂತಳು. ಬೇಡ ಬೇಡವೆಂದರೂ ನಾಲ್ಕು, ನಾಲ್ಕು ಸಂಡಿಗೆಗಳನ್ನು ಜಾಸ್ತಿ ಹಾಕಿದಳು. "ನನ್ನ ಹೊಟ್ಟೆ ನೋಡಿ ನಿಮ್ಮ ಮಗಳು ತುಂಬಾ ಜಾಸ್ತಿ ಹಾಕ್ತಿದಾಳೆ ಸ್ವಾಮಿ" ಎಂದು ನಕ್ಕು ಕುಟ್ಟಪ್ಪ ನುಡಿದಾಗ, ಲಕ್ಷ್ಮಿ ನಸುನಗುತ್ತ ತಟ್ಟೆ ಹಿಡಿದು ಒಳಹೊಕ್ಕಳು. ಗುಂಡೂರಾಯರಿಗೆ ಊಟದ ರುಚಿ ಗೊತ್ತಾಗಲೇಯಿಲ್ಲ. ಅವರು ರಾಘುವನ್ನೂ ಲಕ್ಷ್ಮಿಯನ್ನೂ

ತಮ್ಮ ಮನಸ್ಸಿನಲ್ಲಿ ನಿಲ್ಲಿಸಿ ಚಿತ್ರ ಬರೆಯುತಿದ್ದರು. ಊಟವಾದ ನಂತರ ಎಲ್ಲರೂ ಕೈತೊಳೆದರು. ಚಿನ್ನದ ತಗಡಿನಂಥ ಚಿಗುರು ವೀಳ್ಯದೆಲೆ, ವಾಸನಾ ದ್ರವ್ಯಗಳನ್ನು ಸೇರಿಸಿದ ಪುಡಿ ಅಡಿಕೆ, ಗುಲಾಬಿ ಬಣ್ಣ ಕಟ್ಟಿದ ಸುಣ್ಣ, ಇವುಗಳನ್ನು ಬೆಳ್ಳಿ ತಟ್ಟೆಯಲ್ಲಿರಿಸಿ ಲಕ್ಷ್ಮಿಯೇ ರೂಂನಲ್ಲಿ ಮೇಜದ ಮೇಲೆ ತಂದಿಟ್ಟಳು. ಎಲ್ಲರೂ ತಾಂಬೂಲ ಹಾಕಲು ಪ್ರಾರಂಭಿಸಿದರು. ಗುಂಡೂರಾಯರು ಮಾತ್ರ ತಟ್ಟೆಗಿನ್ನೂ ಕೈಹಾಕದಿದ್ದುನ್ನು ಕಂಡ ಲಕ್ಷ್ಮಿ "ನಿಮಗೆ ಅಭ್ಯಾಸವಿಲ್ಲವೇ ಮಾವ" ಎಂದು ಕೇಳಿಯೇ ಬಿಟ್ಟಳು. ಕ್ಷಣಕಾಲ ಗುಂಡೂರಾಯರಿಗೆ ವೈಜುಮ್ಮೆಂದಿತು. "ಇಲ್ಲವಮ್ಮಾ, ನಾನೂ ಹಾಕುತ್ತೇನೆ" ಎಂದು ಅಡಿಕೆಪುಡಿ ಬಾಯಿಗೆ ಹಾಕಿ ಎಲೆಗೆ ಸುಣ್ಣ ಹಚ್ಚ ತೊಡಗಿದರು. ಸಂಜೆಯಾಯಿತು. ಈಗ ಮೆರವಣಿಗೆಗೆಲ್ಲ ಸಿದ್ಧವಾಗಿತ್ತು. ಹತ್ತಾರು ಪೆಟ್ರೋಮ್ಯಾಕ್ಸ್‌ಗಳ ಪ್ರಕಾಶ ಕಾಂತಿ ಬೀರುತಿತ್ತು. ಹುಲಿಯನ್ನು ಮಧ್ಯದಲ್ಲಿರಿಸಿ ಅದರ ಬಲಭಾಗದಲ್ಲಿ ಗುಂಡೂರಾಯರು ಮತ್ತು ಶಿವುವನ್ನೂ, ಎಡಭಾಗದಲ್ಲಿ ಕುಟ್ಟಪ್ಪ ಮತ್ತು ನಾಣುವನ್ನೂ ಕುಳ್ಳಿರಿಸಲಾಯಿತು. ಅವರುಗಳಿಗೆ ಉದ್ದುದ್ದ ಹಾರಗಳನ್ನು ಹಾಕಿ ಚಪ್ಪಾಳೆ ತಟ್ಟಿದರು. ಸರಿ; ಪಲ್ಲಕ್ಕನ್ನು ಮೇಲಕ್ಕೆತ್ತಿ "ಉಘ್ಘೋ" ಎಂದು ಕೂಗಿಕೊಂಡರು. ದೀಪದ ಪ್ರಭೆಗೆ, ಅಂಟಿಸಿದ್ದ ಚಿಮಿಕಿ ದೂರಕ್ಕೆ ಮಿನುಗುಟ್ಟುತಿತ್ತು. ಅದು ಚಿಕ್ಕ ಹಳ್ಳಿಯಾದುದರಿಂದ ಬೀದಿ ಬೀದಿ ಸುತ್ತಿಬರಲು ಅಷ್ಟೇನೂ ಹೊತ್ತು ಹಿಡಿಯಲಿಲ್ಲ. ಅಗ್ರಹಾರ, ಲಿಂಗಾಯತರ ಬೀದಿ, ಕುಂಬಾರರ ಬೀದಿ, ಗಾಣಿಗರ ಬೀದಿ, ಇಷ್ಟೆ ಅಲ್ಲಿ ಮುಖ್ಯವಾದುವುಗಳು. ರಾಮುವಿಗೆ ಕ್ಯಾಮರಾ ಹಿಡಿದು ಫೋಟೊ ತೆಗೆಯಲು ತಿಳಿದಿದ್ದಿತು. ಕುಟ್ಟಪ್ಪ ತಂದಿದ್ದ ಕೈಕ್ಯಾಮರಾದಿಂದ ಅವನು ನಾಲ್ಕು ವಿಧವಾಗಿ ಫೋಟೋ ತೆಗೆದನು. ನಾಲ್ಕಾರು ಹಳ್ಳಿಗಳಲ್ಲೂ ಮೆರವಣಿಗೆ ಮಾಡಿಸಬೇಕೆಂದು ಜನ ರಂಪ ಮಾಡಿ

ದರು. ಇಷ್ಟು ಮರ್ಯಾದೆ ಮಾಡಿದುದೇ ಸಾಕೆಂದೂ, ಅವಶ್ಯ ಕಾರ್ಯಕ್ರಮಗಳಿರುವುದರಿಂದ ತಾವು ಊರಿಗೆ ಹಿಂದಿರುಗ ಬೇಕಾಗಿರುವುದಾಗಿಯೂ, ತಮ್ಮನ್ನು ಮನ್ನಿಸಬೇಕೆಂದೂ, ಇವ ರೆಲ್ಲ ಕೇಳಿಕೊಂಡರು. ಶಾಮರಾಯರು ಹೆಚ್ಚು ತೊಂದರೆ ಪಡಿಸ ಬೇಡಿ ಎಂದು ಹೇಳಿದಮೇಲೆ, ಜನ ಸುಮ್ಮನಾದರು. ರಾತ್ರಿ ಊಟ ತೀರಿಸಿ ಮಲಗಿದ ಮೇಲೆ ಬೆಳಗಾಯಿತು. ಎಲ್ಲರೂ ಕಾಫಿ ಮುಗಿಸಿ ಹೊರಡಲಣಿಯಾದರು. ಹೊರಡುವಾಗ ಶಾಮ ರಾಯರು ನಮ್ಮಲ್ಲೇನಾದರೂ ದೋಷವಿದ್ದರೆ ಮನ್ನಿಸಿಬಿಡಿ ಯೆಂದರು. "ನಿಮ್ಮದೇನೂ ಇಲ್ಲ ಸ್ವಾಮಿ. ನಿಮ್ಮ ಮಗಳು ಲಕ್ಷ್ಮಿಯದೇ ಭಾರಿ ತಪ್ಪು. ಬೇಡ ಬೇಡವೆಂದರೂ ತಿಂಡಿ ಜಾಸ್ತಿ ತಿನ್ನಿಸಿ, ಸಾಕು ಮಾಡಿದ್ದಾಳೆ" ಎಂದು ಕುಟ್ಟಪ್ಪ ನಗುತ್ತ ನುಡಿದನು. ಕುಟ್ಟಪ್ಪ ಹಾಸ್ಯ ಪ್ರವೃತ್ತಿಯುಳ್ಳವನು. ಮತ್ತೊಬ್ಬರನ್ನು ನಗಿಸುವುದೆಂದರೆ ಅವನಿಗೆ ಬಹಳ ಆನಂದ. ಇವರನ್ನೆಲ್ಲ ಸಾಗಗೊಳಿಸಲು ಹಳ್ಳಿಯ ಜನ ತಂಡ ತಂಡವಾಗಿ ನೆರೆದಿದ್ದರು. ಊರಿನ ಪ್ರಮುಖ ವ್ಯಕ್ತಿಗಳೆಲ್ಲ ಹೋಗಿದ್ದು ಬರ್ತೀರಾ ಸ್ವಾಮಿ ಎಂದು ಕೈಮುಗಿದ ಮೇಲೆ, ಎಲ್ಲರೂ ಜೀಪ್ ಹತ್ತಿದರು. ಘರ್ ಎಂದು ಶಬ್ದಮಾಡುತ್ತ ಅದು ಮೈಸೂರತ್ತ ಧಾವಿಸಿತು.

## ೨೨

ಮನೆ ಖಾಲಿಯಾದ ಮೇಲೆ ಲಕ್ಷ್ಮಿಗೆ ಬಿಕೋ ಎನ್ನಿಸ ಹತ್ತಿತು. ಎರಡು ದಿನಗಳಿಂದ ಗದ್ದಲವೋ ಗದ್ದಲ. ಕುಟ್ಟಪ್ಪನ ಹರಟೆಯೆಂದರೆ ಹರಟೆ. ಎಲ್ಲರನ್ನೂ ನಕ್ಕು ನಲಿಸಿ ಅವನು ರಾದ್ಧಾಂತ ಮಾಡುತ್ತಿದ್ದನು. ಲಕ್ಷ್ಮಿ ಎರಡನೇ ಬೀದಿ ಭಾಗೀ ರಥಮ್ಮನವರ ಮನೆಗೆ ನಡೆದಳು. ಅಲ್ಲಿಯೇ ಅವಳ ಮಿಕ್ಕೆಲ್ಲ ಸ್ನೇಹಿತೆಯರು ಕೂಡುವುದು ವಾಡಿಕೆ. ಕಮಲ, ವಿಮಲ, ಸರಳ,

ನಿರ್ಮಲ, ಪ್ರಮೀಳ, ಎಲ್ಲರೂ ಅಲ್ಲಿ ಸೇರಿಕೊಂಡರು. ಹರಟೆ ಪ್ರಾರಂಭವಾಯಿತು. "ಸುಗಂಧರಾಜ ಅರಳಿತೇನೇ ಲಕ್ಷ್ಮಿ, ನಿನ್ನೆ ನಿಮ್ಮ ಹಿತ್ತಲಿನಲ್ಲಿ ನಾನು ಬಂದು ನೋಡಿದಾಗ ಅರಳಿಯೇ ಇರಲಿಲ್ಲ" ಎಂದು ಪ್ರಮೀಳ ಪ್ರಾರಂಭಿಸಿದಳು. "ನಾಲ್ಕು ಬಾರಿ ಹಾಕಿದರೂ ಅದೇಕೊ ನಮ್ಮ ಹಿತ್ತಿಲಿನಲ್ಲಿ ಗುಲಾಬಿ ಚಿಗುರಲೇ ಇಲ್ಲ ಕಣಮ್ಮ, ಈವತ್ತೊಂದು ಕಡ್ಡಿ ಕೊಡೇ ಲಕ್ಷ್ಮಿ ಹಾಕಿ ನೋಡಿಯೇ ಬಿಡ್ತೀನಿ" ಎಂದು ಸರಳ ನುಡಿದಳು. ಯಾವ ಆಟ ಆಡುವುದೇ ಎಂದು ನಿರ್ಮಲ ಕೇಳಿದಾಗ ಪಗಡೆ ಎಂದು ಕಮಲ ಉತ್ತರಕೊಟ್ಟಳು. ಅವಳಿಗೆ ಪಗಡೆ ಆಟದಲ್ಲಿ ಅಕ್ಕರೆ ಜಾಸ್ತಿ. "ಆರು ಜನ ಸೇರಿ ಹೇಗೇ ಪಗಡೇ ಆಡೂದೂ" ಎಂದು ನಿರ್ಮಲ ಕೇಳಿದಳು. ವಿಮಲಳಿಗೂ, ಸರಳಳಿಗೂ, ನಡೆಸಲು ಬರೋಲ್ಲ ಕಣೇ; ಪ್ರಮೀಳ, ನಿರ್ಮಲ ಅವರಿಗೆ ನಡೆಸಿಕೊಡಲಿ, ನಾವು ಒಂದೊಂದು ಕಡೆ ಕುಳಿತುಕೊಳ್ಳೋಣ ಎಂದು ಲಕ್ಷ್ಮಿ ನುಡಿ ದಾಗ ಎಲ್ಲರೂ ಒಪ್ಪಿದರು. ಇಷ್ಟರಲ್ಲಿ ಭಾಗೀರಥಮ್ಮನವರು "ಲಕ್ಷ್ಮಿ, ನಿಮ್ಮ ಮನೇಲಿ ಮೂರು ದಿನದಿಂದಲೂ ತುಂಬ ಖರ್ಚು ಜಾಸ್ತಿಯಲ್ಲವೇನೇ, ಜಾನಕಮ್ಮನವರು ಬಹಳ ಕಷ್ಟಪಟ್ಟಿದಾರೆ" ಎಂದರು. "ಅಲ್ಲಕಣೇ ದಡಿಯರ ಹಾಗೆ ಎಷ್ಟೆಷ್ಟು ದಪ್ಪ ಉದ್ದು ದ್ದಕ್ಕೆ ಬೆಳೆದಿದ್ದರು ಬಂದವರು" ಎಂದು ನಿರ್ಮಲ ಅಂದಾಗ, "ಆ ಕುಟ್ಟಪ್ಪನ್ನ ನೋಡಿ ನನಗೆ ತುಂಬ ನಗು" ಎಂಮ ಸರಳ ನುಡಿ ದಾಗ, ಎಲ್ಲರೂ ಘೊಳ್ ಎಂದು ನಕ್ಕರು. "ಮೊದಲನೇ ದಿನ ನಾನವರನ್ನೆಲ್ಲ ನೋಡಿ ಭಯಪಟ್ಟೆ ಕಮಲ; ಅವರೆಲ್ಲ ಬಹಳ ಒಳ್ಳೆಯವರು ಕಣೇ; ಕುಟ್ಟಪ್ಪನಂತೂ ನನ್ನನ್ನು ನಗಿಸಿ ನಗಿಸಿ ನನ್ನ ಹೊಟ್ಟೆಯನ್ನೆಲ್ಲಾ ಹುಣ್ಣುಮಾಡಿದ" ಎಂದು ಲಕ್ಷ್ಮಿ ನುಡಿದಳು. "ಎಷ್ಟೊಂತ್ತು ಹರಟೆ; ಚೌರಿ ಹಾಸುಲ್ವೇನ್ರೇ" ಎಂದು ವಿಮಲ ನುಡಿದಾಗ ಎಲ್ಲರೂ ಪಗಡೆಯಾಡಲು ಪ್ರಾರಂಭಿ ಸಿದರು.

## ೨೩

ಗುಂಡೂರಾಯರು ಮನೆ ಬಂದು ಸೇರಿದಮೇಲೆ ಶಾರದಮ್ಮನವರಿಗೆ ನಡೆದ ಸಂಗತಿಯನ್ನೆಲ್ಲ ವಿವರಿಸಿ ಹೇಳಿದರು. ಹುಡುಗಿ ಬಹಳ ಚೆಲುವೆಯಾಗಿದ್ದಾಳೆಂದೂ, ಶಾಮರಾಯರ ಸಂಬಂಧ ಅತಿ ಮೇಲ್ಮಟ್ಟದ್ದೆಂದೂ, ನುಡಿದರು. ಶಾರದಮ್ಮನವರು "ಅದಕ್ಕೇನಂತೆ ಒಂದು ಮಾತು ನೀವಲ್ಲೇ ಕೇಳಬಹುದಾಗಿದ್ದಿತಲ್ಲಾ" ಎಂದು ಆಕ್ಷೇಪಿಸಿದರು. ತಮಗೆ ಯಾವುದೋ ಒಂದು ವಿಧವಾದ ಸಂಕೋಚವು ಆವರಿಸಿದುದರಿಂದ ಕೇಳಲಾಗಲಿಲ್ಲವೆಂದು ಅವರು ಸಮಾಧಾನವಿತ್ತರು. ಇಷ್ಟರಲ್ಲಿ ಏನೋ ಕಾರ್ಯನಿಮಿತ್ತ ಕುಟ್ಟಪ್ಪ ಇವರಲ್ಲಿಗೆ ಬಂದನು. ಪತಿಪತ್ನಿಯರ ಸಂಭಾಷಣೆಯೆಲ್ಲವನ್ನೂ ಅವನು ಕೇಳಿದನು. "ಯಾಕೆ ಗುಂಡೂ, ಅಲ್ಲೇ ಮಾತು ನಿಬಂಧನೆಮಾಡಬಹುದಾಗಿದ್ದಿತಲ್ಲಾ; ನಿನಗೆ ಸಂಕೋಚವಾದರೆ, ನನ್ನ ಕಿವಿಗೆ ಸ್ವಲ್ಪ ಹಾಕಬಾರದಾಗಿತ್ತೇ" ಎಂದನು. ಗುಂಡೂರಾಯರು ತಮ್ಮ ಮಗನ ನಡತೆಯನ್ನು ಚಾಚೂ ತಪ್ಪದೆ ಕುಟ್ಟಪ್ಪನಿಗೆ ವಿವರಿಸಿದರು. ತಾವೇನೇನೋ ಉಜ್ವಲಭವಿಷ್ಯ ಕಾಣುತ್ತಿದ್ದುದಾಗಿಯೂ, ಆಕಾಶ ಕೋಟೆ ಕಟ್ಟುತ್ತಿದ್ದುದಾಗಿಯೂ, ಆದರೆ ಅವೆಲ್ಲ ಗಾಳಿಗೆ ತೂರಿಹೋಯಿತೆಂದೂ ನುಡಿದರು. ಚಿನ್ನದಂಥ ಹುಡುಗಿಯನ್ನು ತಂದು ವಿವಾಹಮಾಡಿದ ಮೇಲೂ, ತಮ್ಮ ಮಗ ಸರಿಯಾದ ದಾರಿಯಲ್ಲಿ ನಡೆಯದೆ ಹೋದರೆ, ಒಂದು ಹೆಣ್ಣಿನ ಕಣ್ಣೀರನ್ನು ತಾವು ನೋಡಬೇಕಾಗುವುದಲ್ಲಾ, ಎಂದು ಕೊರಗುವುದಾಗಿ ನುಡಿದರು. "ಹಾಳು ಹುಡುಗ ನನ್ನ ಹೊಟ್ಟೆಯಲ್ಲಿ ಏಕೆ ಹುಟ್ಟಿತೋ, ನನ್ನ ದುರದೃಷ್ಟ" ಎಂದು ಮಗನನ್ನು ಬೈದರು. ಕುಟ್ಟಪ್ಪ ರಾಘುವನ್ನು ಸರಿಯಾಗಿ ತಿಳಿದುಕೊಂಡೇ ಇರಲಿಲ್ಲ. ಅವನು ಮನೆಗೆ ಬಂದರೆ ತಾನೇ. ಒಂದೆರಡಾವ್ಟು

ಬಂದಿದ್ದಾಗ ಶಾರದಮ್ಮನವರು ಹೇಳಿದ್ದರ ಮೇಲೆ, ಅವನ ವಿವರ ವೆಲ್ಲ ಅರ್ಧರ್ಧ ತಿಳಿದಿದ್ದಿತು. ಆದರೆ ಸರಿಯಾದ ಪರಿಚಯ ವಿರಲಿಲ್ಲ. ಕುಟ್ಟಪ್ಪ ಗುಂಡೂರಾಯರಿಗೆ, ಈ ದಿನ ಅಭಯ ವಿತ್ತನು. ತಾನೇ ನೇರ ಮಾರುತಿ ಕಂಪೆನಿಗೆ ಹೋಗಿ ರಾಘುವಿಗೆ ಬುದ್ಧಿವಾದ ಹೇಳುವುದಾಗಿಯೂ, ವಿವಾಹವಾದಲ್ಲಿ ಪತ್ನಿ ಮನೆಗೆ ಬಂದ ಮೇಲೆ ಎಲ್ಲ ಸರಿಹೋಗುವುದೆಂದೂ, ಇಂಥವರನ್ನೆಷ್ಟೋ ಮಂದಿಯನ್ನು ತಾನು ನೋಡಿರುವುದಾಗಿಯೂ, ನುಡಿದನು. ಮೊದಲು ಪಾಳ್ಯಕ್ಕೆ ಪತ್ರ ಬರೆದು ಹುಡುಗಿಯನ್ನು ನಿಷ್ಕರ್ಷೆ ಮಾಡಿಕೊಳ್ಳಿ ಎಂದನು. ಲಕ್ಷ್ಮಿ ಮನೆಗೆ ಕಾಲಿಟ್ಟರೆ ಸಾಕು. ಅವಳ ನಗುಮುಖ ನೋಡಿ ಎಂಥವನೂ ಸರಿಹೋಗುತ್ತಾನೆ ಎಂದು ಹೊಗಳಿದನು. ಕುಟ್ಟಪ್ಪನ ವರ್ಣನೆಯನ್ನೆಲ್ಲ ಕೇಳಿದ ಮೇಲೆ ಶಾರದಮ್ಮನವರಿಗೆ, ಸೊಸೆ ಕಣ್ಣಮುಂದೆ ನಿಂತಿರು ವಂತೆಯೇ ಭಾಸವಾಯಿತು. ಸಾಮಾನ್ಯವಾಗಿ ಅತ್ತೆ—ಸೊಸೆ ಕಚ್ಚಾಟ ಎಲ್ಲೆಲ್ಲೂ ಇದ್ದೇ ಇರುತ್ತದೆ. ಆದರೆ ಮಗನಿಗೆ ವಿವಾಹ ಮಾಡುವುದಕ್ಕೆ ಮೊದಲು, ಸೊಸೆಯೊಬ್ಬಳು ಮನೆಗೆ ಬರಬೇಕೆಂದು ಅತಿ ಆಸೆಪಡುವವಳು ಅತ್ತೆಯೇ ; ಪತಿಗಿಂತಲೂ ಅವಳಿಗೆ ಅಪರಿಮಿತಾನಂದ. ಇಂಥದೇ ಒಂದು ಆನಂದ ಶಾರದಮ್ಮನವರಿಗೂ ಉಂಟಾದುದು ಸ್ವಾಭಾವಿಕವಲ್ಲವೇ? ಮಾರ ನೆಯ ದಿನ ಗುಂಡೂರಾಯರು ಪಾಳ್ಯದ ಶಾಮರಾಯರಿಗೆ ಪತ್ರ ವೊಂದನ್ನು ಬರೆದರು. ತಮ್ಮ ಮಗ ರಾಘುವೇಂದ್ರನಿಗೆ ಲಕ್ಷ್ಮಿ ಯನ್ನು ಕೊಟ್ಟು ವಿವಾಹಮಾಡಲು ತಮಗೆ ತುಂಬ ಆಸೆಯಿರು ವುದೆಂದೂ, ತಾವಲ್ಲಿಗೆ ಬಂದಿದ್ದಾಗ ಕಾರಣಾಂತರಗಳಿಂದ ಅದನ್ನು ತಿಳಿಸಲು ಸಾಧ್ಯವಾಗಲಿಲ್ಲವೆಂದೂ, ಈ ಸಂಬಂಧಕ್ಕೆ ತಾವು ಒಪ್ಪಿಗೆಯನ್ನೀಯಬೇಕೆಂದೂ, ತಮ್ಮ ಪ್ರತ್ಯುತ್ತರ ನೋಡಿ ಜಾತಕಪತ್ರ ಕಳುಹಿಸುವುದಾಗಿಯೂ, ಬರೆದರು. ಕವರ್‌ನಲ್ಲಿ ಕಿ ಅಂಟಿಸುವುದಕ್ಕೆ ಮೊದಲು, ಶಾರದಮ್ಮನವರಿಗೂ ಓದಿ

ಹೇಳಿ, ಇನ್ನೇನಾದರೂ ಸಂಗತಿ ಸೇರಿಸಬೇಕೇ? ಎಂದು ಕೇಳಿದರು. ಇಷ್ಟೇ ಸಾಕು ಬಿಡಿ, ಎಂದು ಶಾರದಮ್ಮನವರಂದಮೇಲೆ, ಪತ್ರ ವನ್ನು ಕವರ್‌ನಲ್ಲಿ ಹಾಕಿ ಅಂಟಿಸಿ, ತಾವೇ ತಪಾಲಾಫೀಸಿಗೆ ಹೋಗಿ ಪೆಟ್ಟಿಗೆಗೆ ಹಾಕಿ ಬಂದರು.

## ೨೪

ಅದು ಮಾಘ–ಫಾಲ್ಗುಣಮಾಸ. ರಾಗಿ ಕೊಯ್ಲಿನ ಕಾಲ. ಕೆಂಪು ತೆನೆಗಳನ್ನು ಹೊತ್ತು, ಆಕಾಶದತ್ತ ನೋಡುತ್ತ, ಗಾಳಿಗೆ ತೂಗಾಡುತ್ತ, ಒಯ್ಯಾರದಿಂದ ಅವು ಹಿಗ್ಗುತ್ತ ನಿಂತಿವೆ. ಯಾವ ಬೆಳೆಯೂ ಅಷ್ಟೆ. ಅದು ಹಸುರಾಗಿದ್ದಾಗ ನೋಡಲು ಒಂದು ತರಹ ಲಕ್ಷಣ; ಹಣ್ಣಾದ ಮೇಲೆ ನೋಡುವುದಕ್ಕೇ ಒಂದು ತರಹ ಲಕ್ಷಣ. ಆದರೆ ಜೋಳ ಮತ್ತಿತರ ಧಾನ್ಯಗಳಿಗಿಂತ ರಾಗಿ ಸಮಾಚಾರ ಬೇರೆ. ಅದು ಹಣ್ಣಾದ ಮೇಲೆಯೇ ನೋಡಲು ಚೆಂದ. ಕೆಂಪು ಹರಳುಗಳನ್ನು ಸೇರಿಸಿದ ಒಂದು ಗುಚ್ಛದಂತೆ ಅದು ರಮಣೀಯವಾಗಿ ಕಾಣುತ್ತದೆ. ಎಂಥ ಚತುರನಾದ ಚಿನಿವಾರನೂ ಸಹ, ಹೀಗೆ ಹರಳುಗಳನ್ನು ಖಂಡಿತ ಸೇರಿಸ ಲಾರನು. ಬೆಳೆಸಿನ ಹೊಲಗಳನ್ನು ನೀವು ನೋಡಿದ್ದೀರಾ? ಎಗ್ಜಿಬಿಷನ್, ಪಾರ್ಕ್ ಮುಂತಾದವುಗಳನ್ನೆಲ್ಲ ನೋಡಿ ಆನಂದಪಟ್ಟಿದ್ದೀರಿ. ಅವೆಲ್ಲ ಕೃತಕವಾದವುಗಳು. ಪ್ರಕೃತಿಯ ಸೊಬಗಿನೊಂದಿಗೆ ಅವೆಂದೂ ಸಾಟಿಯಾಗಲಾರವು. ಇಕ್ಕಡೆ ಗಳಲ್ಲಿಯೂ ಅವರೆಕಾಯಿ ಜೋತು ಮುರಿಯುವ ಹಾಗೆ, ರಾಗಿ ಹೊಲಗಳ ನಡುವೆ ವೈಗಾವಲಿಗೆ ನಿಂತಿರುವಂತೆ, ಕಾಣುವ ದೃಶ್ಯವನ್ನು ನೀವು ನೋಡಿದಲ್ಲಿ ಎಷ್ಟು ಆನಂದಪಡುವಿರೊ! ಸರಿ; ಇನ್ನು ಕುಯಿಲು. ಕುಡುಗೋಲನ್ನು ಕೈನಲ್ಲಿ ಹಿಡಿದು ಆಳುಗಳೆಲ್ಲ ಹೊಲದೊಳಗೆ ಪ್ರವೇಶಿಸುತ್ತಾರೆ. ಒಂದೊಂದು

ವೇಳೆ ಅವರು ಕುಡುಗೋಲನ್ನು ಮೇಲಕ್ಕೆತ್ತಿ ಹಿಡಿದುಕೊಂಡು ನಿಂತಿದ್ದರೆ, ರಾಜಕೀಯದ ಅರಿವಿರುವವರಿಗೆ, ಖಂಡಿತ ಕಮ್ಯೂನಿಸ್ಟ್ ಧ್ವಜದ ಜ್ಞಾಪಕ ಬಂದೇ ಬರುತ್ತದೆ. ಗಂಡುಬೇರೆ, ಹೆಣ್ಣುಬೇರೆ ಎಂಬ ಭೇದಭಾವ ಇಲ್ಲಿ ಸ್ವಲ್ಪವೂ ಇರುವುದಿಲ್ಲ. ಎಲ್ಲರೂ ಒತ್ತಟ್ಟಿಗೆ ನಿಂತು ಕೆಲಸಮಾಡುತ್ತಾರೆ. ವಿವಿಧ ಮಾತುಗಳಿಂದ, ಹರಟೆಗಳಿಂದ, ಕೆಲಸದ ಭಾರವನ್ನು ಕಡಿಮೆ ಮಾಡಿಕೊಳ್ಳುತ್ತಾರೆ. ಇದರಲ್ಲಿ ಇನ್ನೂ ಒಂದು ವಿಶೇಷವೇನೆಂದರೆ, ... ಪ್ರಣಯಿಗಳಿರಬೇಕು, ಆಗ ನೋಡಬೇಕು: ಗಂಡು ರಸಿ... ...ವದೋ ಮಾತನ್ನೆತ್ತಿ, ಹೆಣ್ಣನ್ನು ಕೆಣಕುತ್ತಲೇ ಯಾವ ಯ... ...ಡುಗೋಲಿಗೆ ಸಿಕ್ಕಿ ಕೊಯ್ಯುವಾಗ ಹೊರಡುವ ಯಿರುತ್ತಾನೆ. ಕು... ಸರಭರ ಶಬ್ದ, ಆ ಕೂಗು... ... ನಮ್ಮನ್ನು ಯಾವುದೋ ಲೋಕಕ್ಕೆ ಎಳೆದುಕೊಂಡುಹೋಗುತ್ತದೆ. ಇಷ್ಟರಲ್ಲಿ ಅವರಲ್ಲೊಬ್ಬನು "ಯಾಕ್ರಮ್ಮ್ಕೋ, ಬಾಯ್ಗೆಬಟ್ಟೆ ಅಡೆಜಿದ್ದರ್ರ್ಯಾ... ...ದ ಹೇಳ್ರಮ್ಮ್ಕೊ" ಎನ್ನುತ್ತಾನೆ. "ಕಣ್ಣುಬಿಟ್ಟವ್ನೆ ಜವ್ರಾಯ... ನಮ್ಗಿಂದು" ಎಂದು ಅವರು ಹತ್ತಾರು ಜನ ಒತ್ತಟ್ಟಿಗೆ ಸೇ...ರಿ ಹಾಡುವಾಗ, ಯಾವ ಶ್ರುತಿಲಯಕ್ಕೆ ಸೇರದಿದ್ದರೂ, ಆ ನಾದಕ್ಕೆ ... ನೀವು ಖಂಡಿತ ತಲೆದೂಗುತ್ತೀರಿ. ಕುಯಿಲು ಮುಗಿದ ಮೇಲೆ ಮೆದೆ ಹಾಕುತ್ತಾರೆ. ಒಂದು ತಿಂಗಳು ಕಾಲ ಅದು ಸ್ವಲ್ಪ ಮುಗ್ಗುತ್ತದೆ. ಆಮೇಲೆ ಅದನ್ನು ಕೆಡವುತ್ತಾರೆ. ಕೊಠಾರ ಇಷ್ಟ...ಲ್ಲಿ ಸಜ್ಜಾಗಿರುತ್ತದೆ. ಕೊಠಾರವೆಂದರೆ ನೆಲದಲ್ಲಿದ್ದ ಹುಲ್ಲನ್ನೆಲ್ಲ ಕೆತ್ತಿ, ಸೆಗಣಿ ಸಾರಿಸಿ, ಶುದ್ಧಮಾಡಿರುವ ಜಾಗ. ಆಮೇಲೆ ಆ... ...ಂಟು ಎತ್ತುಗಳನ್ನು ಉದ್ದಕ್ಕೆ ನಿಲ್ಲಿಸಿ ಸರಪಣಿಯಂತೆ ಬಿ...ಗಿಯುತ್ತಾರೆ. ಇದಕ್ಕೆ "ಹೆಣೆ" ಎಂದು ಹೆಸರು. ಮಧ್ಯದಲ್ಲಿ ಕ...ಂಭನಟ್ಟು— ಇದಕ್ಕೆ ಮೇಟಿಕಂಭ ಎಂದು ಹೆಸರು—ಇದಕ್ಕೆ ತ...ಗಲು ಹಾಕುತ್ತಾರೆ. ಒಬ್ಬ ಆಳು ಇಡೀ ದಿನ ಹೆಣೆಯ ಹಿಂದೆ ಸುತ್ತುತ್ತಲೇ ಯಿರುತ್ತಾನೆ. ಹೆಹ್ಹೆ ಎಂದು ಗದ್ದಲ ಮಾಡುತ್ತಾ...ನೆ. ಮಾರ

ನೆಯ ದಿನ ಹುಲ್ಲನ್ನೆಲ್ಲ ತೆಗೆದು ಕೊಠಾರದ ಸುತ್ತ ಹಾಕುತ್ತಾರೆ. ಆಮೇಲೆ ಮೇಲಿನ ಹೊಟ್ಟನ್ನೆಲ್ಲ ಬೇರೆಮಾಡಿ, ಗಾಳಿಗೆ ತೂರುವ ಕೆಲಸ. ಗಾಳಿ ಚಲನೆ ಒಂದು ಸಮಯ ಇಲ್ಲವೆಂದುಕೊಳ್ಳಿ. ಕೊಂಗಗಳಲ್ಲಿ ಗುಂಗುತುಂಬಿಸಿದ ರಾಗಿಯನ್ನು, ಕೈಗಳಮೇಲೆ ಎತ್ತಿಕೊಂಡು ನಾಲ್ಕಾರು ಆಳುಗಳು ಕೂಗಿಕೊಳ್ಳುತ್ತಾರೆ. “ ನನ್ನ ಒಡೆಯಾ ಬೀಸಪ್ಪಾ, ಎಳ್ನೀರು ತಂದು ಕುಡಿಸ್ತೀವ್ನಿ ” ಎಂದು. ಗಾಳಿ ಬೀಸಿದಗೆ ಸಾಕು “ ಬೇಗ ಬೇಗ ತೂರ್ರಿರೋ, ಗಾಳಿ ಬೀಸ್ತದೆ ” ಎಂದು ಕೂಗಿಕೊಳ್ಳುತ್ತಾರೆ. ಈಗ ರಾಗಿ ಒಕ್ಕಣೆಯೆಲ್ಲ ಮುಗಿಯಿತು. ಇನ್ನುಳಿದಿರುವುದು ಧಾನ್ಯವನ್ನು ಮನೆಗೆ ಸಾಗಿಸುವುದೊಂದೇ. ಇದಕ್ಕೆ ಮೊದಲು “ ಹೆಚ್ಚು ” ಮಾಡುತ್ತಾರೆ. ಹೆಚ್ಚು ಎಂದರೆ ಧಾನ್ಯ ಸಾಗಿಸುವುದಕ್ಕೆ ಮೊದಲು ಮಾಡುವ ಒಂದು ಕ್ರಿಯೆ. ರಾಗಿಯನ್ನು ಒಂದು ಗುಡ್ಡೆಯಾಗಿ ಸುರಿದು, ಅದರ ಮೇಲಿನಿಂದ ಕೆಳಕ್ಕೂ, ಸುತ್ತಲೂ ಬೂದಿಯಿಂದ ರಂಗೋಲೆ ಎಳೆಯುತ್ತಾರೆ. ಕೊಠಾರದ ತುಂಬ ಚಿತ್ರವಿಚಿತ್ರ ಕೆಲಸಮಾಡುತ್ತಾರೆ. ಆ ರಾತ್ರಿ ಅಲ್ಲೇ ಊಟ. ಹತ್ತಾರು ಜನ ಬೆಳದಿಂಗಳಿನಲ್ಲಿ ಕುಳಿತು ಊಟಮಾಡುತ್ತಾರೆ. ವಿಶೇಷ ಭಕ್ಷ್ಯ ಭೋಜ್ಯಗಳನ್ನು ಈದಿನ ತಯಾರುಮಾಡಿರುತ್ತಾಗೆ. ಬೆಂಕಿಹಾಕಿ ಕೊಂಡು ಅದರ ಸುತ್ತಲು ಕುಳಿತು, ಏನೇನೆಲ್ಲ ಮಾತನಾಡುತ್ತ, ಬೆಳ ಬೆಳಗೂ ಆ ಧಾನ್ಯದ ರಾಶಿಯನ್ನು ಕಾಯುತ್ತಾರೆ. ಇನ್ನು ರಾಗಿಯನ್ನು ಮನೆಗೆ ಸಾಗಿಸುವ ಕೆಲಸ. ಚೀಲ ಹಿಡಿದು ಅಳೆಯಲು ಪ್ರಾರಂಭಿಸುತ್ತಾರೆ. ಪ್ರಾರಂಭದಲ್ಲಿ ಒಂದು ಎಂದು ಹೇಳುವುದಿಲ್ಲ. “ ಹೆಚ್ಚಲಿ ” ಎನ್ನುತ್ತಾರೆ. ಅನಂತರ ಆರುಕಳೆದು ಏಳನೆಯ ಸಂಖ್ಯೆ ಬಂದಾಗಲೂ ಹೆಚ್ಚಲಿ ಎನ್ನುತ್ತಾರೆ. ಏಳು ಎಂದರೆ ಧಾನ್ಯ ಎದ್ದು ಹೊರಟುಹೋಗುವುದೆಂದೂ, ಕಡಿಮೆ ಯಾಗುವುದೆಂದೂ, ಅವರ ನಂಬಿಕೆ. ಆಮೇಲೆ ಕೊನೆಸಂಖ್ಯೆ ಇಪ್ಪತ್ತು ಬಂದಾಗಲೂ ಹೆಚ್ಚಲಿ ಎನ್ನುತ್ತಾರೆ. ಇಪ್ಪತ್ತು

ಕೊಳಗಕ್ಕೆ ಒಂದು ಖಂಡುಗವಲ್ಲವೇ ? ಇನ್ನೂ ಒಂದು ವಿಶೇಷ ವನ್ನು ಬರೆಯಲು ನಾನು ಮರೆತೆ. ಕೊಠಾರದಲ್ಲಿ ಕೆಲಸಮಾಡು ತ್ತಿರುವಾಗಲೂ, ಧಾನ್ಯವನ್ನು ಗಾಳಿಗೆ ತೂರುತ್ತಿರುವಾಗಲೂ, ಮತ್ತಿತರ ಸಮಯಗಳಲ್ಲಿಯೂ, ರೈತ "ಹೆಚ್ಚಲಿ, ಹೆಚ್ಚಲಿ" ಎಂದು ಹೇಳುತ್ತಲೇಯಿರುತ್ತಾನೆ. ಇದರರ್ಥ ಧಾನ್ಯದೇವತೆ ಸಂತಸಪಟ್ಟು, ಹೆಚ್ಚು ಕೊಡುತ್ತಾಳೆಂದು ಭಾವನೆ. ಅಳೆದಾದ ಮೇಲೆ ಎಷ್ಟಾಯಿತೆಂದು ಅವರಿವರು ವಿಚಾರಿಸುತ್ತಾರೆ. ಇಷ್ಟು ಖಂಡುಗ ಎಂದು ಪ್ರತ್ಯುತ್ತರ ದೊರಕುತ್ತದೆ. ಹುಂ, ಏನೋ, ಭೂಮಿತಾಯಿ ಕೊಟ್ಟಷ್ಟು ಎಂದವನು ನುಡಿಯುತ್ತಾನೆ. ಹೊರ ಗಣ ಜನ ಎಷ್ಟೇ ಕಚ್ಚಾಡುತಿದ್ದರೂ, ನಗರಗಳಲ್ಲಿ ಏನೇ ಮೋಸ ಗಾರಿಕೆ, ಅಕೃತ್ಯಗಳು ನಡೆಯುತಿದ್ದರೂ, ಸರ್ಕಾರವೇ ಬದಲಾಗಿ ಉರುಳುತ್ತುರುಳುತ್ತ ಬರುತಿದ್ದರೂ, ಹಳ್ಳಿಯ ರೈತ ಅದಕ್ಕೆ ಗಮನ ಕೊಡುವುದಿಲ್ಲ. ಕಷ್ಟಪಟ್ಟರೆ ಭೂಮಿತಾಯಿ ನಮಗೆ ಮೋಸಮಾಡುವುದಿಲ್ಲವೆಂದು ಅವನು ಭೂಮಿಯನ್ನೇ ಅಚಲ ವಾಗಿ ನಂಬಿ ಕಾಲ ಕಳೆಯುತ್ತಿರುತ್ತಾನೆ.

## ೨೫

ಶಾಮರಾಯರಿಗೆ ಹಳ್ಳಿಯಲ್ಲಿ ಮಿಕ್ಕೆಲ್ಲರಿಗಿಂತಲೂ ಭೂಮಿ ಜಾಸ್ತಿ ಇದ್ದಿತು. ಅವರಿಗೀಗ ಓಡಾಟದ ಕಾಲ. ಮನೆಯಲ್ಲಿ ನಿಲ್ಲಲು ಪುರಸತ್ತೇ ಇಲ್ಲ. ಭೂಮಿ ಒಂದೇ ಸ್ಥಳದಲ್ಲಿ ಇಲ್ಲದೆ, ನಾಲ್ಕಾರು ಸ್ಥಳಗಳಲ್ಲಿ ಇದ್ದುದರಿಂದ, ರಾಮುವಿಗೂ ಈಗ ಹೆಚ್ಚಿನ ಕೆಲಸ. ಆಳುಗಳ ಮೇಲೆ ನಿಂತು ಕೆಲಸ ತೆಗೆಯುವುದೇನೂ ಸಾಮಾನ್ಯದ ಮಾತಲ್ಲ. ಅನೇಕ ವೇಳೆ ಅವರುಗಳು ಮನೆಗೆ ಬರುತ್ತಲೇಯಿರಲಿಲ್ಲ. ಒಕ್ಕಣೆ ನಡೆಯುವ ಸ್ಥಳಕ್ಕೇ ಕಾಫಿ ಊಟ ಹೋಗುತ್ತಿದ್ದುದೂ ಉಂಟು. ಊರ ಸಮೀಪದಲ್ಲಿದ್ದ

ಹೊಲಗಳಿಗೆ ಜಾನಕಮ್ಮನವರೂ ಹೋಗುವುದುಂಟು. ಬಿಸಿಲಿನಲ್ಲಿ ನಿಂತು ಕೆಲಸ ಮಾಡದಿದ್ದರೂ, ಕೆಲಸ ತೆಗೆಯುವುದಕ್ಕಾದರೂ ಬ್ರಾಹ್ಮಣ ಹೆಂಗಸರುಗಳಿಂದ ಸಾಧ್ಯವೇ? ದುಡಿದು, ದಣಿಯುವುದೆಂದರೆ ನಮ್ಮವರಿಗೆ ಸಾಧ್ಯವೇಯಿಲ್ಲ. ಜಾನಕಮ್ಮನವರು ಹೋಗುತ್ತಿದ್ದುದು ನೋಡುವುದಕ್ಕಾಗಿ; ಮಾಡುವುದಕ್ಕಲ್ಲ. ಒಂದೆರಡು ತಾಸುಗಳು ಕಳೆಯಿತೆಂದರೆ, ಅವರು ಹಿಂದಿರುಗುತಿದ್ದರು. ಅಷ್ಟಕ್ಕೇ ಅವರಿಗೆ, ಮನೆ ಬಂದು ಸೇರುವವರೆಗೆ, ಬೆವರು ಧಾರಾಕಾರವಾಗಿ ಹರಿಯುತಿತ್ತು. ಲಕ್ಷ್ಮಿಯೂ ಹೊಲಗಳಿಗೆ ಹೋಗುತಿದ್ದುದುಂಟು. ಆದರೆ ಅವಳು ಹೋಗುವ ಕಾರ್ಯವೇ ಬೇರೆ. ಸ್ನೇಹಿತೆಯರನ್ನು ಒತ್ತಟ್ಟಿಗೆ ಸೇರಿಸಿಕೊಂಡು ಆಟವಾಡುತ್ತ, ಮಾತನಾಡುತ್ತ, ಕೇಕೆಹಾಕುತ್ತ, ಅವರೆಕಾಯಿ ಬಿಡಿಸುವುದು ಅವಳ ಕೆಲಸ. ಹಸಿ ಅವರೆಕಾಯಿನ ಸಾರು ಬಹಳ ರುಚಿಯಲ್ಲವೆ? ಒಂದು ತಿಂಗಳ ಕಾಲವೂ ಜಾನಕಮ್ಮನವರ ಮನೆಯಲ್ಲಿ ಅವರೆಕಾಯಿನ ಹೊಡೆತವೇ. ಒಂದಕ್ಕೇ, ಎರಡಕ್ಕೇ, ಉಪ್ಪಿಟ್ಟು, ರೊಟ್ಟಿ, ಎಲ್ಲ ಸಾಮುಗ್ರಿಗಳಿಗೂ ಸೇರಿಸಿ, ರುಚಿರುಚಿಯಾಗಿ ಮಾಡಿ ತಿನ್ನುವುದೇ ಕೆಲಸ. ಹಸೀ ಅವರೇಕಾಯಿಯನ್ನು ಸುಲಿದು, ಬೇಳೆಮಾಡಿ, ಒಣಗಿಸಿ ಇರಿಸಿಕೊಂಡರೆ, ಅದು ಇನ್ನೂ ರುಚಿ; ಚೆಂದ. ಲಕ್ಷ್ಮಿಗಂತೂ ಇದೇ ಕೆಲಸ. ನಾಲ್ಕಾರು ಜನ ಅವರ ಮನೆಯಲ್ಲಿ ಒತ್ತಟ್ಟಿಗೆ ಕುಳಿತುಕೊಳ್ಳುವರು. "ನಾನು ಮುಂಚೆ ಬೇಳೆ ಮಾಡುತ್ತೇನೆಯೊ, ನೀನು ಮುಂಚೆ ಮಾಡುತ್ತೀಯೊ, ನೋಡಬೇಕು ಕಣೇ" ಎಂದು ಪಂದ್ಯ ಕಟ್ಟುವರು. ಸರಿ; ಪ್ರಾರಂಭವಾಯಿತೆನ್ನಿ. ಸರಭರ ಕೆಲಸ ಮಾಡುವರು. ಒಂದೇ ವಯಸ್ಸಿನ ನಾಲ್ಕಾರು ಹುಡುಗಿಯರು ಒತ್ತಟ್ಟಿಗೆ ಕುಳಿತು ಮಾತಿಗೆ ಮಾತನಾಡುತ್ತ, ಹರ್ಷವದನರಾಗಿರಲು, ಬೇಳೆ ಮಾಡುವ ರಭಸದಿಂದ, ಕೈ ಬಳೆಗಳೆಲ್ಲ ಅಲುಗಾಡುತ್ತ, ಝುಣ್ ಝುಣ್ ಎನ್ನುವಾ ದೃಶ್ಯ ನೀವು ನೋಡಬೇಕು. ಎಷ್ಟು ಆನಂದ

ಪಡುವಿರೊ? ನಿಮಗೆಲ್ಲಿ ಇಂಥ ನೋಟ ಸಿಗುತ್ತವೆ ಬಿಡಿ. ಶಾಮು ರಾಯರು ಭಾರಿಸ್ಥಿತಿವಂತರಾಗಿದ್ದುದರಿಂದ, ಅವರಿಗೆ ಹೇರಳವಾಗಿ ಅವರೆಕಾಯಿ ಬರುವುದುಂಟು. ಕೆಲವು ವೇಳೆ ಮೂಟೆ ಲೆಕ್ಕದಲ್ಲಿ ಹೋಗುವುದೂ ಉಂಟು. ಅನೇಕ ಸಮಯಗಳಲ್ಲಿ ಜಾನಕಮ್ಮನವರು ಮತ್ತಿತರರಿಗೂ ದಾನಮಾಡುವುದುಂಟು. ದಾನ ಅಗ್ರಹಾರ ನಿವಾಸಿಗಳಿಗೇ ಜಾಸ್ತಿ ದೊರಕುತಿದ್ದಿತು. ಮತ್ತಿತರರಿಗೆ ಅಲ್ಪಸ್ವಲ್ಪ. ಅಂದು ಶಾಮುರಾಯರೂ, ರಾಮುವೂ ಮನೆಯಲ್ಲಿರಲಿಲ್ಲ. ಹೊಲಗಳಿಗೆ ಹೋಗಿದ್ದರು. ಜಾನಕಮ್ಮನವರು ಕಂಭ ಒರಗಿಕೊಂಡು ಕುಳಿತು, ಲಕ್ಷ್ಮಿಗೆ ಜಡೆ ಹೆಣೆಯುತಿದ್ದರು. ಇಷ್ಟರಲ್ಲಿ ಹೊರಗೆ ಸೈಕಲ್ ಬೆಲ್ ಮಾಡಿದ ಶಬ್ದವಾಯಿತು. ಯಾರೆಂದು ನೋಡಬೇಕೆಂದೇಳುವದರೊಳಗಾಗಿ, ತಪಾಲು ಸೇವಕನು ಒಳಗೆ ಬಂದು "ಪತ್ರವೊಂದಿದೆ ತೆಗೆದುಕೊಳ್ಳಿರಮ್ಮಾ"ಎಂದು ಲಕ್ಷ್ಮಿಯ ಕೈಗಿತ್ತು ಹೊರಟನು. ಜಾನಕಮ್ಮನವರು ಮರ್ಯಾದೆಗಾಗಿ ಸ್ವಲ್ಪ ಕಾಫಿ ಇರಿಸಲೇ ಎಂದುದಕ್ಕೆ, ಬೇಡಮ್ಮಾ, ಹೊತ್ತಾಗುತ್ತದೆಂದು ಹೇಳಿ ಅವನು ಹೊರಟುಹೋದನು.

## ೨೬

ಲಕ್ಷ್ಮಿಯು ಹಳ್ಳಿಯ ಶಾಲೆಯಲ್ಲಿ ನಾಲ್ಕನೇ ತರಗತಿಯ ವರೆಗೆ ಮಾತ್ರ ಓದಿದ್ದಳು. ಮುದ್ದು ಮುದ್ದಾಗಿ ಅಕ್ಷರ ಬರೆಯಲು ಬಾರದಿದ್ದರೂ, ಕಾಗದ ಪತ್ರಗಳನ್ನು ಓದಿಕೊಳ್ಳುವಷ್ಟು ಸಾಮರ್ಥ್ಯ ಅವಳಿಗಿತ್ತು. ಯಾವ ಪತ್ರ ಬಂದರೂ ಅದನ್ನು ಒಡೆದು ನೋಡುವುದೆಂದರೆ ಲಕ್ಷ್ಮಿಗೆ ಬಹಳ ಆಸೆ. ಅವಳಿಗೆ ಅದೊಂದು ವಾಡಿಕೆಯಾಗಿ ಹೋಗಿದ್ದಿತು. ಜಾನಕಮ್ಮನವರು ಒಳಗೆ ಪ್ರವೇಶಿಸುವುದರೊಳಗಾಗಿ ಲಕ್ಷ್ಮಿ ಅರ್ಧ ಓದಿದ್ದಳು.

ಎಲ್ಲಿಂದ ಬಂದಿದೆಯೇ ಎಂದು ತಾಯಿ ಕೇಳಿದುದಕ್ಕೆ, ಮೈಸೂರಿನಿಂದ ಎಂದುತ್ತರಕೊಟ್ಟ ಮೇಲೂ ಓದತೊಡಗಿದಳು. ಜಾನಕಮ್ಮನವರಿಗೆ ತುಸು ಯೋಚನೆಯಾಯಿತು. ಅವರ ಬಂಧು ಬಳಗವೆಲ್ಲ ಚಾಮರಾಜನಗರ, ತೆರಕಣಾಂಬಿ, ಗುಂಡ್ಲುಪೇಟೆ, ಈಕಡೆಗೇ ಜಾಸ್ತಿ ಇದ್ದಿತು. ಮೈಸೂರಲ್ಲಿ ಅವರಿಗೆ ಯಾರೂ ಇರಲಿಲ್ಲ. ಕ್ಷಣಕಾಲ ಅವರಿಗೆ ಹಳೆಯ ನೆನಪಾಗಿ ಶ್ರೀಧರನ ಜ್ಞಾಪಕ ಬಂದಿತು. "ಯಾರೇ ಕಾಗದ ಬರೆದಿರುವವರು, ಗಟ್ಟಿಯಾಗಿ ಓದಿಹೇಳೇ" ಎಂದು ಆಜ್ಞಾಪಿಸುವುದರೊಳಗಾಗಿ, ಲಕ್ಷ್ಮಿ ಪೂರಾ ಕಾಗದ ಓದಿ ಮುಗಿಸಿದ್ದಳು. ಇಲ್ಲಿ ನಮ್ಮ ಮನೆಗೆ ಬಂದಿದ್ದರಲ್ಲ ಅವರು ಬರೆದಿದಾರಮ್ಮ" ಎಂದಳು. ಈಗ ಜಾನಕಮ್ಮನವರಿಗೆ ಹುಲಿ ಬೇಟೆಯವರ ಜ್ಞಪ್ತಿ ಬಂದು, ತುಸು ನಗುವೂ ಬಂದಿತು. ಮತ್ತೊಂದು ಬಾರಿ ಗಟ್ಟಿಯಾಗಿ ಓದು ಎಂದರು. ಹೆತ್ತತಾಯಿಯ ಎದುರಿಗಾದರೂ, ಮದುವೆ ವಿಚಾರ ಎಂದೊಡನೆ ಸಂಕೋಚಪಡುವುದು, ಹೆಣ್ಣಿಗೆ ಸ್ವಾಭಾವಿಕವಲ್ಲವೇ ? ಯಾವ ಹೆಣ್ಣು ತಾನೆ ತನ್ನನ್ನು ಮದುವೆ ಮಾಡಿಕೊಳ್ಳಲು ಪತ್ರ ಬರೆದಿದ್ದಾರೆ ಎಂದಾಳು ? ನಾನು ಬರೆಯುತ್ತಿರುವುದು ಹಳ್ಳಿಗರ, ಹಳ್ಳಿಯ ಸಮಾಚಾರವನ್ನು. ಪಟ್ಟಣದ ಮಾತನ್ನು ಬಿಡಿ. ಮಗುವಾಗಿದ್ದಾಗಲೇ ಪ್ರೇಮ ವೊಳೆತು, ಯೌವನಕ್ಕೆ ಬಂದಮೇಲೆ ಸಿಡಿದು ಮೆರೆಯುವವರವರು. ಜಾನಕಮ್ಮನವರ ಒತ್ತಡದ ಮೇಲೆ, ಲಕ್ಷ್ಮಿ ಪತ್ರವನ್ನು ಭಹಳ ಸಂಕೋಚದಿಂದಲೇ ಓದಿ ಮುಗಿಸಿದಳು. ಆವರೆಗೆ ಅವಳಿಗಾಗಲೆ ಹಣೆಯ ಮೇಲೆ ನಾಲ್ಕಾರು ಬೆವರು ಹನಿಗಳು ಕಾಣಿಸಿಕೊಂಡುವು.

## ೨೭

ಸಂಜೆಯಾಯಿತು. ತಂದೆಯೂ, ಮಗನೂ, ಹೊಲದಿಂದ ಹಿಂದಿರುಗಿದರು. ಜಾನಕಮ್ಮನವರು ಪತಿ ಮನೆಗೆ ಕಾಲಿಟ್ಟೊಡನೆಯೇ ಮೈಸೂರಿನ ಪತ್ರದ ಸಮಾಚಾರವನ್ನು ತಿಳಿಸಿದರು. ಅವರು ಕಾಲಿಗೆ ನೀರು ಹಾಕಿ, ಟವಲ್‌ನಿಂದ ಒರಸಿ ಕುಳಿತುಕೊಂಡರು. ಪತ್ರವನ್ನು ಕೈಗೆ ತೆಗೆದುಕೊಂಡು, ಕನ್ನಡಕ ಹಾಕಿಕೊಂಡು ಓದಿದರು. ರಾಮುವೂ ತಂದೆಗೆ ಸೇರಿಕೊಂಡೇ ಕುಳಿತು, ಓದುವುದನ್ನು ಕೇಳುತಿದ್ದನು. ಜಾನಕಮ್ಮನವರು ಮೂಗಿನ ಮೇಲೆ ಬೆರಳನ್ನಿರಿಸಿ, ಬಾಯಿಬಿಟ್ಟು ಕುಳಿತಿದ್ದರು. ಲಕ್ಷ್ಮಿ ಮೌನವಾಗಿ ಬೆಂಚಿನಮೇಲೆ ಕುಳಿತಿದ್ದಳು. ಓದಿ ಮುಗಿಸಿದ ನಂತರ ಶಾಮರಾಯರು ಮೆಲ್ಲನೆಯ ನಿಟ್ಟುಸಿರೊಂದನ್ನು ಬಿಟ್ಟರು. ಇಂಥ ಆಸೆಯನ್ನುಂಟುಮಾಡುವ ಪತ್ರಗಳೆಷ್ಟೋ, ಕೊನೆಗೆ ಅವರಿಗೆ ನಿರಾಸೆಯನ್ನು ತೋರಿಸಿ ಹೋಗಿದ್ದುವು. ಅವರು ಪತ್ರವನ್ನು ಕಿಸೆಯಲ್ಲಿ ಹಾಕಿ, ಅಂಗಿ ತೆಗೆದು ಮೊಳೆಗೆ ತಗಲಿಸಿ, ಸಂಧ್ಯಾವಂದನೆಗೆಂದು ಕುಳಿತರು. ಈ ವೇಳೆಗಾಗಲೆ ಲಕ್ಷ್ಮಿ ನೀರು ತಂದಿಟ್ಟಿದ್ದಳು. ಇಷ್ಟುದಿನವೂ ಅವಳು ತಂದೆಯ ಕೂಡ ಆಗಲೀ ಇಲ್ಲವೇ ಅಣ್ಣನ ಬಳಿಯಲ್ಲಾಗಲೀ ಏನೆಲ್ಲ ಹರಟೆ ಹೊಡೆಯುತಿದ್ದಳು. ಈದಿನ ಸದ್ದೇ ಇಲ್ಲ ; ಬೆಕ್ಕಿನಂತಿದ್ದಳು. ಶಾಮರಾಯರು ಸಂಧ್ಯಾವಂದನೆ ಮುಗಿಸುವವರೆಗೆ, ಮನೆಯಲ್ಲಿ ನಿಶ್ಶಬ್ದ. ಅಡಿಗೆ ಮನೆಯಲ್ಲಿ ಮಾತ್ರ ಊಟಕ್ಕೆ ನಂಚಿಕೊಳ್ಳುವುದಕ್ಕೆಂದು, ಜಾನಕಮ್ಮನವರು ಸಂಡಿಗೆ ಹುರಿಯುತಿದ್ದರು. ಎಣ್ಣೆವಾಸನೆ ಈಚೆಗೂ ವ್ಯಾಪಿಸಿ ಘಮಾಯಿಸುತಿತ್ತು. ರಾಮು ತಾಯಿಯ ಬಳಿಯಲ್ಲಿ, ಒಲೆಯ ಮುಂದೆ ಕುಳಿತುಕೊಂಡಿದ್ದನು. ತಾಯಿ–ಮಗನಿಗೇನೊ ಸಂಭಾಷಣೆ ನಡೆಯುತಿತ್ತು. ಅದು ಈಚೆಗೆ ಕೇಳುತ್ತಿರಲಿಲ್ಲ. ಉದ್ಧರಣೆ ಸದ್ದಿನಿಂದಲೇ ಸಂಧ್ಯಾ

ವಂದನೆ ಮುಗಿಯಿತೆಂದು ತಿಳಿದು ಜಾನಕಮ್ಮನವರು "ಬನ್ನಿ ಸಿದ್ಧವಾಗಿದೆ" ಎಂದು ಪತಿಯನ್ನು ಕರೆದರು. ಲಕ್ಷ್ಮಿ ಎಲೆ ಹಾಕಿ, ನೀರಿನ ಲೋಟಗಳನ್ನಿಟ್ಟು, ಆಗಲೇ ಸಜ್ಜುಗೊಳಿಸಿದ್ದಳು. ಊಟಕ್ಕೆ ಕುಳಿತುದಾಯಿತು. ಜಾನಕಮ್ಮನವರೇ ಊಟದ ಮಧ್ಯದಲ್ಲಿ ಮಾತಿಗೆ ಪ್ರಾರಂಭಿಸಿದರು. ಮೈಸೂರಿಗೆ ಹೋಗಿ ಅಲ್ಲಿನ ಸ್ಥಿತಿಗತಿಗಳನ್ನು ನೋಡಿ ಬರಬೇಕೆಂದು ಶಾಮರಾಯರು ಪ್ರತ್ಯುತ್ತರವಿತ್ತರು. ರಾಮು ಒಂದು ಅಭಿಪ್ರಾಯವನ್ನು ಸೂಚಿಸಿದನು. ಲಕ್ಷ್ಮಿಯ ಜಾತಕದ ಕೂಡ, ಗುಂಡೂರಾಯರಿಗೆ ಮೊದಲು ಪತ್ರ ಬರೆಯಬೇಕೆಂದೂ, ಪ್ರತ್ಯುತ್ತರ ದೊರೆತ ಮೇಲೆ ಹೋಗುವುದು ಒಳಿತೆಂದೂ, ಅಭಿಪ್ರಾಯವಿಟ್ಟನು. ಈ ಯೋಚನೆ ಶಾಮರಾಯರಿಗೆ ಹಿಡಿಯಿತು. ಮಧ್ಯೆ ಜಾನಕಮ್ಮನವರು "ನಕ್ಷತ್ರ ತಿಳಿಸುವುದೇ ಬೇಡ" ಎಂದರು. ಸುಳ್ಳುಹೇಳಿ ನಾನು ಲಗ್ನಮಾಡಲಾರೆ. ನನ್ನೀ ಜನ್ಮದಲ್ಲಿ ಅದು ಸಾಧ್ಯವೇಯಿಲ್ಲ. ಹುಡುಗಿ ನಿಂತಿದ್ದರೂ ನಿಂತಿರಲಿ ಎಂದವರು ಗುಡುಗಿದರು. ಕೊನೆಗೆ ರಾಮುವಿನ ನಿರ್ಣಯವೇ ಬಹುಮತದಿಂದ ಅಂಗೀಕೃತವಾಯಿತು. ಮರುದಿನ ಶಾಮರಾಯರು ಗುಂಡೂರಾಯರಿಗೆ ಪತ್ರವೊಂದನ್ನು ಬರೆದರು. ದೈವಸಂಕಲ್ಪವನ್ನು ಮೀರಲು ಯಾರಿಂದಲು ಆಗುವುದಿಲ್ಲೆಂದೂ, ಈ ಸಂಬಂಧ ಬೆಳೆಯ ಬೇಕೆಂದಿದ್ದಲ್ಲಿ ಅದನ್ನು ತಡೆಯಲು ಯಾರಿಂದಲೂ ಸಾಧ್ಯವಿಲ್ಲೆಂದೂ, ತಾವೇ ಜಾತಕ ಪತ್ರ ಕಳುಹಿಸಿರುವುದಾಗಿಯೂ, ಅಲ್ಲೀ ಸರಿಯಾಗಿ ನೋಡಿ ಪ್ರತ್ಯುತ್ತರ ಬರೆಯಬೇಕೆಂದೂ, ಅದರಲ್ಲಿ ಬರೆದಿದ್ದರು.

## ೨೮

ತಿಪ್ಪಾಶಾಸ್ತ್ರಿಗಳೆಂದರೆ ಮೈಸೂರು ಸೀಮೆಯಲ್ಲಿ ತಿಳಿಯದವರಿಲ್ಲ. "ಜ್ಯೋತಿಷ ಸಿದ್ಧಾಂತಕೇಸರಿ" ಎಂಬ ಬಿರುದನ್ನು

ಅವರು ಸಂಪಾದಿಸಿಕೊಂಡಿದ್ದರು. ಇಡೀ ದಿನ ಬೆವರು ಸುರಿಸಿ ದುಡಿಯುವ ಕೂಲಿಗಾರನಿಗೆ, ಅವನೆಷ್ಟೆ ಹೊಡೆದಾಡಿದರೂ, ಸಿಗುವ ಕೂಲಿ ಹನ್ನೆರಡಾಣೆಗೆ ಮೇಲ್ಪಟ್ಟಿರಲಾರದು. ರೈಲ್ವೆ ಪ್ಲಾಟ್‌ಫಾರಂ, ಬಸ್‌ಸ್ಟ್ಯಾಂಡ್, ಮತ್ತಿತರ ಸಾರ್ವಜನಿಕ ಸ್ಥಳಗಳ ಬಳಿ ಕೂಲಿಗಳನ್ನು ನೀವು ನೋಡಿದ್ದೀರಲ್ಲವೇ ? ನಿಮ್ಮ ಪೆಟ್ಟಿಗೆಯನ್ನೂ ಸಾಮಾನುಗಳನ್ನೂ ಕಸಿದುಕೊಳ್ಳುವುದಕ್ಕೇ ಅವನು ಬರುವನು. “ ಸಾಮಿ, ಸಾಮಿ, ಎರಡಾಣೆ, ಎರಡಾಣೆ, ಎಲ್ಲಿಗೆ ಹೋಗ್ಬೇಕು ಹೇಳಿ ”ಎಂದು ಕೂಗುವನು. ಅವನನ್ನು ನೋಡಿದರೆ, ಮಾನವ ಹೃದಯವಿರುವವರಿಗೆ ಸ್ವಲ್ಪ ಚುರುಕ್ ಎಂದೀತು : ಮತ್ತಿತರರಿಗಿಲ್ಲ. ಇದು ಒಂದು ಕಡೆ ಕಾಣುವ ದೃಶ್ಯ. ಇಪ್ಪತ್ತು ಇಪ್ಪತ್ತೈದು ಕೊಳಗ ಧಾನ್ಯವನ್ನು ಚೀಲನಲ್ಲಿ ತುಂಬಿ,ಕತ್ತೆಯಂತೆ ಬೆನ್ನಮೇಲಿರಿಸಿ ಸಾಗಿಸುವವನನ್ನು ನೋಡಿದ್ದೀರಲ್ಲವೆ ? ಅವನಿಗೆ ಸಿಗುವ ಕೂಲಿಯೆಷ್ಟು ? ಮಿಲ್ಲುಗಳಲ್ಲಿ ಹಗಲಿರುಳು ದುಡಿಯುವ ವನು, ಸಂಜೆವರೆಗೂ ಲೇಖನಿ ಹಿಡಿದು ಗುಮಾಸ್ತೆಯಾಗಿರುವ ವನು, ಇವರೆಲ್ಲ ಅತಿ ಮುಖ್ಯರಾದವರುಗಳು. ಇದು ಪಟ್ಟಣದ ಮಾತು. ಹಳ್ಳಿಯ ಕಡೆ ನೋಟ ಸ್ವಲ್ಪ ತಿರುಗಿಸಿ. ಜೋಲು ಬಟ್ಟೆ ಧರಿಸಿ, ಅಸ್ಥಿಪಂಜರದಂತೆ ಕಾಣುತ್ತ, ಸೊಪ್ಪುಸದೆಗಳನ್ನೆ ತಿಂದು ಕಾಲಕಳೆವವರು, ಸಹಸ್ರಾರು ಮಂದಿ ಇದ್ದಾರೆ. ದುಡಿಮೆ ದುಡಿಯುವವನು ದುಡಿಯುತ್ತಲೇಯಿರುತ್ತಾನೆ. ಸುಲಭದಲ್ಲಿ ಸಂಪಾದಿಸುವವನು ಲಕ್ಷಾಧೀಶ್ವರನಾಗಿ ಇರುತ್ತಾನೆ. ಇನ್ನು ಕೆಲವರು, ಅವರವರ ಬುದ್ಧಿವಂತಿಕೆಯಿಂದ ಅವರವರು ಮುಂದು ವರೆಯುತ್ತಾರೆಂದು ವ್ಯಾಖ್ಯಾನ ಮಾಡುತ್ತಿರುವುದು ನನ್ನ ಕಿವಿಗೆ ಬೀಳುತ್ತಲಿದೆ. ಬುದ್ಧಿವಂತರಾಗಿರುವವನೆಷ್ಟು ಮಂದಿ ಭಿಕಾರಿ ಗಳಾಗಿದ್ದಾರೆ, ನಿಮಗದು ತಿಳಿಯದ ವಿಷಯವೇ ? ಅದಕ್ಕೆ ಅದೃಷ್ಟ ಎನ್ನುತ್ತೀರೇನೋ ? ಹೀಗೆ ನಾನು ಬರೆದ ಮಾತ್ರಕ್ಕೆ ನನ್ನನ್ನು ನೀವು ಕಮ್ಯೂನಿಸ್ಟ್ ಎಂದೀರೇನೋ ? ಖಂಡಿತ ನಾನು

ಕಮ್ಯೂನಿಸ್ಟಲ್ಲ. ಹೋಗಲಿ ಆ ಮಾತು ಬಿಡಿ. ತಿಪ್ಪಾಶಾಸ್ತ್ರಿಗಳು ಜ್ಯೋತಿಷ ನಿಲಯ ವೊಂದನ್ನು ತೆರೆದಿದ್ದರು. ಅವರ ಆಫೀಸ್ ನಲ್ಲಿ ಯಾವಾಗಲೂ ಬಿಡುವೇಯಿಲ್ಲ. "ಜ್ಯೋತಿಷ" ಎಂದು ಟೆಲಿಫೋನ್ ಬೇರೆ ಇಟ್ಟಿದ್ದರು. ಅವರ ವ್ಯಕ್ತಿತ್ವವೂ ಸಹ ಅವರನ್ನು ನೋಡಿದವರಿಗೆ ಮರೆತು ಹೋಗದಂತಿದ್ದಿತು. ಕೆಂಪ ಗಿನ ದೇಹ, ನುಣ್ಣಗೆ ಬೋಳಿಸಿದ ತಲೆಯ ಹಿಂದುಗಡೆ ಎಂಟಾರು ಕೂದಲುಗಳು, ಕಿವಿಯಲ್ಲಿ ವೈರ ಕಡಕು, ಆ ವಿಸ್ತಾರವಾದ ಹಣೆಯಲ್ಲಿ ಮಿಂಚುವ ವಿಭೂತಿ ಪಟ್ಟೆ, ಪಂಚಗಚ್ಚೆ, ಜರತಾರಿ ಅಂಚಿನ ಮೇಲಿನ ಹೊದಿಕೆ, ಕತ್ತಿನಲ್ಲಿ ಒಂದೆಳೆ ಚಿನ್ನದ ಸರ, ಬೆರಳಿಗೆ ಹರಳು ಸೇರಿಸಿದ ಹೊಳೆಯುವ ಉಂಗುರವೊಂದು, ಇಷ್ಟು ಸಾಕು. ಅವರು ಪ್ರಬಲ ಪತ್ರಿಕೆಗಳಿಗೆಲ್ಲ ಜಾಹೀರಾತು ಕೊಡು ತಿದ್ದರು. ಒಂದು ಎರಡು ಭಾಷೆಯೇ! ಸಾಮಾನ್ಯವಾಗಿ ದಕ್ಷಿಣ ಭಾರತದ ಎಲ್ಲ ಭಾಷೆಯ ಪತ್ರಿಕೆಗಳಲ್ಲೂ ಅವರ ಚಿಕ್ಕದಾದ ಚಿತ್ರ, ವಿಳಾಸವಿರುವ ಜಾಹೀರಾತಿಲ್ಲದೆ ಇಲ್ಲ. ಅವರು ಲಕ್ಷ್ಕೋಟಿ ಒಡೆಯದೆ ಪ್ರಶ್ನೆಗಳಿಗೆ ಪ್ರತ್ಯುತ್ತರ ಕೊಡಬಲ್ಲವರಾಗಿದ್ದರು. ಜಾತಕ ಗುಣಿಸಿದರೆ ತೀರಿತು. ಬ್ರಹ್ಮಲಿಪಿ ಬರೆದಿದ್ದಾನೆ; ಇವರು ಅದನ್ನು ಓದಿ ಹೇಳುತ್ತಾರೆ. ಬ್ರಹ್ಮನ ಸಹಕಾರ್ಯ ದರ್ಶಿಯೇ ಇವರು ಎಂದಿಟ್ಟುಕೊಳ್ಳಿ. ಒಂದೆರಡು ಪತ್ರಿಕೆಗಳಿಗೆ ವಾರಭವಿಷ್ಯವನ್ನೂ ಸಹ ಅವರು ಬರೆಯುತಿದ್ದರು. ಹೇರಳ ವಾಗಿ ಹಣ ಸಂಪಾದಿಸುತಿದ್ದರು. ಭಾರಿ ಆಸ್ತಿಯನ್ನೂ ಮಾಡಿ ದ್ದಾರಂತೆ. ಚಿಕ್ಕಯಸ್ಸಿನಲ್ಲೇ ಅವರಿಗೆ ಪತ್ನೀವಿಯೋಗವಾಯಿ ತಂತೆ. ಇಬ್ಬರು ಗಂಡುಮಕ್ಕಳು ಅವರಿಗೀಗ ಇದ್ದಾರೆ. ಅವರು ಕಾಲೇಜ್‌ನಲ್ಲಿ ವ್ಯಾಸಂಗಮಾಡುತಿದ್ದಾರೆ. ಕೆಲವು ವೇಳೆ ರಾತ್ರಿ ಯಲ್ಲಿ ಅವರು ಎಲ್ಲಿಗೋ ಹೋಗಿದ್ದು ಬರುವುದುಂಟಂತೆ. ಆಗದ ವರು ಏನಾದರೂ ಆಡುತ್ತಲಿರುತ್ತಾರಲ್ಲವೇ? ದೊಡ್ಡವರ ಮಾತು ನಮಗೇಕೆ ಬಿಡಿ.

## ೨೯

ಅಂದು ಗುಂಡೂರಾಯರು ಮನೆಯಲ್ಲಿರಲಿಲ್ಲ. ಕಾಯಿ ಪಲ್ಯಗಳನ್ನು ತೆಗೆದು ತರಲು ಮಾರ್ಕೆಟ್ಟಿಗೆ ಹೋಗಿದ್ದರು. ಚಾಮರಾಜನಗರದಿಂದ ಮೈಸೂರಿಗೆ ಬರುವ ರೈಲ್ಲು, ಸರಿಯಾಗಿ ಎಂಟು ಮುಕ್ಕಾಲು ಘಂಟೆಗೆ ಒಂದು ಸೇರಿತು. ನಂಜನಗೂಡಿನಿಂದ ಪ್ರಯಾಣ ಮಾಡಿ ಬಂದಿದ್ದ ಶ್ರೀನಿವಾಸರಾಯರು, ರೈಲಿನಿಂದಿಳಿದು, ಗುಂಡೂರಾಯರ ಮನೆಯತ್ತ ನಡೆದರು. ಶಾರದಮ್ಮನವರು ಅವರನ್ನು ಸ್ವಾಗತಿಸಿದರು. ಈರ್ವರೂ ಮೊದಲು ಕುಶಲ ಪ್ರಶ್ನೆಗಳನ್ನು ವಿಚಾರಿಸಿಕೊಂಡರು. ಇಷ್ಟರಲ್ಲಿ ಗುಂಡೂರಾಯರೂ ಮಾರ್ಕೆಟ್ಟಿನಿಂದ ಕೈಚೀಲ ಹೊತ್ತುಬಂದರು. ಒಳಗೆ ಅಸಮಾಧಾನವಿದ್ದರೂ ಹೊರಗೆ ತೋರ್ಪಡಿಸದೆ, ಆದರದಿಂದಲೇ ಮೈದುನನನ್ನು ಸ್ವಾಗತಿಸಿದರು. ಸರಸಳಿಗೆ ಈ ತಿಂಗಳ ಅಂತ್ಯದಲ್ಲಿ ಅಂದರೆ, ಇಪ್ಪತ್ತನಾಲ್ಕನೇತೇದಿ ಲಗ್ನ ನಿಷ್ಕರ್ಷೆಮಾಡಿದೆಯೆಂದೂ, ವರ ಯಳಂದೂರಿನವನೆಂದೂ, ಅವರದು ಶ್ರೇಷ್ಠ ಮನೆತನವೆಂದೂ, ತಾವು ಹೊಸದಾಗಿ ಏರ್ಪಡಿಸಿಕೊಳ್ಳುವ ಬೀಗರನ್ನು ಕುರಿತು ಪರಿಚಯ ಮಾಡಿಕೊಟ್ಟರು. ಮೊದಲಿನ ಎರಡು ಹೆಣ್ಣುಮಕ್ಕಳಿಗೆ ವಿವಾಹ ಮಾಡಿದಾಗ ಬರಲಿಲ್ಲವಾದುದರಿಂದ, ಈಗ ತಾವೇ ಕರೆಯಲು ಬಂದಿರುವುದಾಗಿಯೂ, ಖಂಡಿತ ಉಳಿದುಕೊಳ್ಳದೆ ವಿವಾಹಕ್ಕೆ ಬಂದು, ನಡೆಯಿಸಿಕೊಡಬೇಕೆಂದೂ ಕೇಳಿಕೊಂಡರು. ಇಷ್ಟರಲ್ಲಿ ಅಡಿಗೆ ಸಿದ್ಧವಾಗಿತ್ತು. ಊಟವೂ ಆಯಿತು. ಶ್ರೀನಿವಾಸರಾಯರು ರಾಘುವನ್ನು ವಿಚಾರಿಸಿದರು. ಕಂಪೆನಿ ದೂರವಾಗಿರುವುದರಿಂದ, ಅವನು ಹೋಟಲ್‌ನಲ್ಲಿಯೇ ಊಟ ಮುಗಿಸುವುದಾಗಿಯೂ, ಇಲ್ಲಿಗೆ ಬರುವುದಿಲ್ಲವೆಂದೂ, ಶಾರದಮ್ಮನವರು ನುಡಿದರು. ತಾಂಬೂಲ ಜಗಿಯುತ್ತ ಶ್ರೀನಿವಾಸರಾಯರು, ತಮಗೆ ಅಗತ್ಯ ಕೆಲಸವಿರುವುದರಿಂದ ತಾವು

ಮೂರು ಘಂಟೆ ರೈಲಿಗೇ, ಊರಿಗೆ ಪ್ರಯಾಣ ಮಾಡಬೇಕಾಗಿರುವುದಾಗಿ ತಿಳಿಸಿದರು. "ಯಾವಾಗಲೂ ಕೆಲಸಾನೇ, ಇಂದು ಇದ್ದು ಹೋಗವರಾಗದೇ ಎಂದು ಶಾರದಮ್ಮನವರು ಆಕ್ಷೇಪಿಸಿದರು. ಆಗುವುದಿಲ್ಲೆಂದು ಶ್ರೀನಿವಾಸರಾಯರು ನುಡಿದು, ರಾಘುವನ್ನು ತಾವು ಕಂಪನಿಯಲ್ಲೇ ಕಂಡು ಅವನಿಗೂ ತಿಳಿಸಿ, ಅಲ್ಲಿಂದಲೇ ತಾವು ರೈಲ್ವೇ ಸ್ಟೇಷನಿಗೆ ಹೋಗುವುದಾಗಿ, ರಾಘುವಿನ ವಿಳಾಸವನ್ನು ತೆಗೆದುಕೊಂಡರು. ಈ ತಡವೆ ರಾಘುವಿನೊಂದಿಗೆ ನೀವು ಖಂಡಿತ ಬರಬೇಕು. ತಪ್ಪಿದಲ್ಲಿ, ನೋಡಿ, ಜನ್ಮ ಜನ್ಮಕ್ಕೂ ನಾನು ನಿಮ್ಮ ಮುಖಸಂದರ್ಶನ ಮಾಡಲಾರೆ ಎಂದು, ನಾಲ್ಕು ನಾಲ್ಕು ತಡವೆ ಹೇಳಿ, ಶ್ರೀನಿವಾಸರಾಯರು ಮೇಲಕ್ಕೆದ್ದರು. ಅವರನ್ನು ಸಾಗಗೊಳಿಸಲು ಪತಿಪತ್ನಿಯರೀರ್ವರೂ ಎದ್ದು, ಈಚೆ ರಸ್ತೆಯವರೆಗೂ ಬಂದಿದ್ದು, ಅನಂತರ ಅವರು ಹೋದಮೇಲೆ ಮನೆಹೊಕ್ಕರು. "ಲಗ್ನವಂತೆ ಲಗ್ನ, ಅಯೋಗ್ಯ, ಕರೆಯಲು ಬೇರೆ ಬಂದಿದಾನೆ" ಎಂದು ಗುಂಡೂರಾಯರು ಗೊಣಗಿದರು. ಸ್ವಲ್ಪ ಹೊತ್ತು ಶಾರದಮ್ಮನವರು ಮೌನತಾಳಿದ್ದು "ಹಾಗೆಂದ ಮಾತ್ರಕ್ಕೆ ಬಿಟ್ಟುಬಿಡುವುದಕ್ಕಾಗುತ್ತದೆಯೇ ಹೇಳಿ, ಏನೋ, ಇಷ್ಟವಿಲ್ಲ; ನಮಗೆ ಹುಡುಗಿ ಕೊಡಲಿಲ್ಲ. ಅಷ್ಟು ಬಗೆಯಲ್ಲಿ ಹೇಳಿ ಹೋಗಿದಾರೆ; ಹೋಗದಿದ್ದರೆ ಚೆನ್ನಿಲ್ಲ" ಅಂದರು. ಕ್ಷಣ ಕಾಲ ಗುಂಡೂರಾಯರು ಮೌನವಾಗಿದ್ದರು. ಯಾರೊಂದಿಗೆ ಹಠವೆಂದು ಅವರ ಮನಸ್ಸು ಅವರಿಗೇ ಪ್ರಶ್ನೆ ಹಾಕಿತು. ಮೇಲಾಗಿ ರಾಘು ಹದವಿಲ್ಲದುದರಿಂದಲೇ, ಶ್ರೀನಿವಾಸರಾಯರು ಹುಡುಗಿ ಕೊಡಲು ಇಷ್ಟಪಡಲಿಲ್ಲವೆಂದು, ಅವರಿಗೆ ಖಚಿತವಾಗಿ ತಿಳಿದಿತ್ತು. ಒಡಹುಟ್ಟಿದ ತಂಗಿಯ ಬಳಿ ಅವರಿಗೆಂಥ ದ್ವೇಷ; ಅವರು ಮಾತನಾಡದಿದ್ದುದನ್ನು ಕಂಡು, ಶಾರದಮ್ಮನವರ ಅಭಿಪ್ರಾಯವನ್ನು ಅವರು ಅನುಮೋದಿಸಿದಂತೆಯೇ ಆಯಿತು. ದಂಪತಿಗಳಿಬ್ಬರೂ ನಂಜನಗೂಡಿಗೆ ಹೋಗಿ ಬರುವುದಾಗಿ ತೀರ್ಮಾನಿಸಿ

ಬಿಟ್ಟರು. ವಿವಾಹ ತೇದಿ ಸಮೀಪಿಸಲು, ವಧೂವರರಿಗೆ ಉಡುಗೊರೆ ಕೊಡಲೆಂದು, ಬೆಳ್ಳಿ ಪಂಚಪಾತ್ರೆ, ಜರತಾರಿವಸ್ತ್ರ ಮುಂತಾದುವುಗಳನ್ನು ಸಿದ್ಧಪಡಿಸಲಾಯಿತು. ರಾಘುವನ್ನೂ ಖಂಡಿತ ಕರೆದುಕೊಂಡೇ ಹೋಗಬೇಕೆಂದು ಶಾರದಮ್ಮನವರು ಒತ್ತಾಯಪಡಿಸಿದುದರಿಂದ, ಒಂದು ದಿನ ಗುಂಡೂರಾಯರು "ಮಾರುತಿ" ಕಂಪೆನಿಗೆ ಹೋದರು. ರಾಘು ಈಗ ಬರಲು ಸಾಧ್ಯವೆಯಿಲ್ಲವೆಂದನು. ಜಾಸ್ತಿ ನಿರ್ಬಂಧಪಡಿಸವೆ, ಗುಂಡೂರಾಯರು ಹಿಂದಿರುಗಿದರು. ಮಗನನ್ನು ಬಿಟ್ಟು ಹೊರಡಲು ಶಾರದಮ್ಮನವರಿಗೆ ಮನಸೇ ಇಲ್ಲ, ಆದರೇನು ಮಾಡುವುದು? ಅವನು ಬಂದರೆ ತಾನೆ. ವಿವಾಹ ತೇದಿ ಬಂದೇ ಬಂದಿತು. ಪತಿಪತ್ನಿಯರೀರ್ವರೂ ರಾಘು ಬಂದರೆ ಕೊಡಿರೆಂದು, ಕುಟ್ಟಪ್ಪನ ಕೈಯಲ್ಲಿ ಬೀಗದ ಗೊಂಚಲನ್ನು ಕೊಟ್ಟು, ನಂಜನಗೂಡಿಗೆ ಪ್ರಯಾಣ ಮಾಡಿದರು.

## ೩೦

ಅಂದು ಭಾನುವಾರ; ರಜೆಯ ದಿನ. ಕಾರ್ಮಿಕರೂ, ಉದ್ಯೋಗಸ್ಥರೂ, ಮತ್ತಿತರರೂ, ಇಡೀ ಆರುದಿನ ದುಡಿದು, ಅಂದು ಹಾಯಾಗಿ ಸ್ವೇಚ್ಛೆಯಿಂದ ವಿಶ್ರಮಿಸಿ, ದೇಹದ ಆಲಸ್ಯವನ್ನು ತುಸು ತಗ್ಗಿಸುವ ದಿನ. ಈ ದಿನ ಚಿತ್ರಮಂದಿರಗಳಲ್ಲೆಲ್ಲ ಗುಜು ಗುಜು ಗುಂಪೇ. ನಗರದ ಭಾರಿ ಥಿಯೇಟರಾದ "ಜ್ಯೋತಿ" ಯಲ್ಲಂತೂ ಬಹಳ ಗದ್ದಲ. ಅರುವತ್ತು ಲಕ್ಷರೂಪಾಯಿ ಖರ್ಚುಮಾಡಿ ತೆಗೆದ ಕನ್ನಡ "ನವೀನ" ಅಂದೇ ಬಿಡುಗಡೆಯಾಗಲಿದೆ. ಮೈಸೂರಿನ ಗೋಡೆಗಳ ಮೇಲೆಲ್ಲ ನವೀನದ ಜಾಹೀರಾತೇ: ವಿವಿಧ ಭಂಗಿಗಳಲ್ಲಿ ತಾರೆಯರ ಚಿತ್ರಗಳು ಎಂಥ ನೈಷ್ಠಿಕ ಬ್ರಹ್ಮಚಾರಿಯ ಮನಸ್ಸನ್ನೂ ಸ್ವಲ್ಪ ಅಲುಗಿಸು

ವಂತೆ, ಆಕರ್ಷಕವಾಗಿ ಅಂಟಿಸಲ್ಪಟ್ಟಿದ್ದುವು. ಪತ್ರಿಕೆಗಳಲ್ಲಂತೂ ಹೇಳಬೇಕಾದುದೇ ಇಲ್ಲ. ತ್ರಿವರ್ಣ ರಂಜಿತವಾಗಿ ಸುಂದರ ವಾಗಿ ಅಚ್ಚಾಗಿದ್ದುವು. ಮೈಸೂರಿನ ಪ್ರಮುಖ ಪತ್ರಿಕೆಯಾದ "ಸಿಡಿಲ"ಂತೂ ವಿಶೇಷ ಅನುಬಂಧವೊಂದನ್ನೇ ಸೇರಿಸಿದ್ದಿತು. ನವೀನದಲ್ಲಿ ಕಾಣಿಸಿಕೊಳ್ಳುವ ನಟನಟಿಯರ ವ್ಯಕ್ತಿ ಪರಿಚಯ ವನ್ನೂ ಅವರ ಕಲಾಸೇವೆಯನ್ನೂ ಅದು ಬಹಳ ಹೊಗಳಿ ಬರೆ ದಿತ್ತು. ಕುಟ್ಟಪ್ಪನ ಪತ್ನಿ ಗಿರಿಜಮ್ಮ ತಾನು ಸಿನಿಮಾ ನೋಡಿ ಬಹಳ ದಿನವಾದುದರಿಂದ, ಈ ದಿನ ಹೋಗಿದ್ದು ಬರಬೇಕೆಂದು ಪತಿಯ ಕೂಡ ನುಡಿದಳು. ಕುಟ್ಟಪ್ಪನಿಗೆ ಪತ್ನಿಯೆಂದರೆ ಬಹಳ ಪ್ರೇಮ. ಅವಳು ಗಯ್ಯಾಳಿಯಲ್ಲ. ಸಿನಿಮಾ ಹುಚ್ಚು ಅವಳಿ ಗಿಲ್ಲವೇ ಇಲ್ಲ. ಅಪರೂಪಕ್ಕೆ ಎಂದಾದರೂ ಒಂದು ದಿನ ಪತಿಯ ಕೂಡ ಹೋಗುವಳು. ಮನೋರಂಜನೆ ಇಲ್ಲದಿದ್ದಗೆ ಆದೀತೇ? ಅಲ್ಲದೆ ಕುಟ್ಟಪ್ಪ ಬಡವನೇನೂ ಅಲ್ಲ, ತಕ್ಕಮಟ್ಟಿಗೆಂದರೆ ತಿರು ಳುಳ್ಳವನೆಂದೇ ಹೇಳಬಹುದು. ಆದರೆ ಅವನು ದುರದೃಷ್ಟಶಾಲಿ. ಅವನ ಹೊಟ್ಟೆಯಲ್ಲಿ ಒಂದು ಪುತ್ರರತ್ನವನ್ನು ದೇವರು ಅವನಿಗೆ ಕರುಣಿಸಲಿಲ್ಲ. ಕುಟ್ಟಪ್ಪನ ತಮ್ಮ ಶಾಂತಪ್ಪ ಶಿವಮೊಗ್ಗೆಯ ಮಂಡಿಯೊಂದರಲ್ಲಿ, ಗುಮಾಸ್ತೆಯಾಗಿದ್ದನು. ಅವನಿಗೆ ನಾಲ್ಕು ಜನ ಗಂಡು ಮಕ್ಕಳೂ, ಮೂವರು ಪುತ್ರಿಯರೂ ಆಗಿದ್ದರು. ಶಾಂತಪ್ಪನ ತೃತೀಯ ಹುಡುಗ ಗುರುಪಾದಸ್ವಾಮಿಯನ್ನು ದತ್ತು ಮಗನನ್ನಾಗಿ ತೆಗೆದುಕೊಳ್ಳುವುದೆಂದು ಕುಟ್ಟಪ್ಪ ನಿರ್ಧರಿಸಿದ್ದನು. ಅಣ್ಣತಮ್ಮಂದಿರೊಳಗೆ ಮಾತುಕತೆಗಳೂ ನಡೆದು, ನಿರ್ಧಾರ ವಾಗಿತ್ತು. ಇನ್ನೂ ಅವನನ್ನು ದತ್ತುಮಗನನ್ನಾಗಿ ಸ್ವೀಕರಿಸಿರ ಲಿಲ್ಲ ಅಷ್ಟೆ. ಈವಾಗ ಗುರುಪಾದಸ್ವಾಮಿಗೆ ವಯಸ್ಸು ಹನ್ನೆರಡು. ಆತ ಶಿವಮೊಗ್ಗೆಯ ಹೈಸ್ಕೂಲಿನಲ್ಲಿ ವ್ಯಾಸಂಗ ಮಾಡುತಿದ್ದಾನೆ. ಖರ್ಚಿಗೆ ಹಣವನ್ನೆಲ್ಲ ಕುಟ್ಟಪ್ಪನೇ ಮಾಸಮಾಸವೂ ತಪ್ಪದೆ ಕಳುಹಿಸುತಿದ್ದಾನೆ. ಪತಿಪತ್ನಿಯರೀರ್ವರೂ 'ನವೀನ' ವನ್ನು

ನೋಡಲು, "ಜ್ಯೋತಿ"ಗೆ ತೆರಳಿದರು. ಅವರು ದುಂದು ಗಾರಿಕೆಯಿಂದ, ಯಾವಾಗಲೂ ಖರ್ಚುಮಾಡುವವರಲ್ಲ. ಸಾಮಾನ್ಯವಾಗಿ ಹನ್ನೆರಡಾಣೆ ಟಿಕೆಟ್ ತೆಗೆಯುವುದೇ ಅವರ ವಾಡಿಕೆ. ಆದರೆ ಈದಿನ ಜನಜಂಗುಳಿ ಜಾಸ್ತಿಯಾಗಿದ್ದುದರಿಂದ, ಹನ್ನೆರಡಾಣೆ ಟಿಕೆಟ್ ಅವರಿಗೆ ಸಿಗಲಿಲ್ಲ. ಮೇಲಾಗಿ ಅವರಂಥ ಸ್ಥೂಲ ಶರೀರದವರಿಗೆ ಗಲಾಟೆಯಲ್ಲಿ ನುಗ್ಗಿ ತೆಗೆಯಲು ಸಾಧ್ಯವೂ ಇಲ್ಲ. ಅಂದು ಅವರು ಒಂದೂವರೆ ರೂಪಾಯಿ ಕೊಟ್ಟು ಸೆಕಂಡ್ ಕ್ಲಾಸ್ ಟಿಕೆಟ್ ತೆಗೆದು ಒಳಹೊಕ್ಕರು. ಪತ್ನಿಯನ್ನು ತಮ್ಮ ಬಲಭಾಗದಲ್ಲಿ ಕುಳ್ಳಿರಿಸಿ ತಾವೂ ಕುಳಿತುಕೊಂಡರು. ಫ್ಯಾನ್ ಗಿರ್ರನೆ ಮೇಲೆ ಬೀಸುತಿತ್ತು. ಆಟ ಪ್ರಾರಂಭವಾಗಲು ಇನ್ನು ಇಪ್ಪತ್ತು ನಿಮಿಷಗಳೇ ಉಳಿದಿವೆ. ಇಷ್ಟರೊಳಗಾಗಿ ಒಳಗೆ ಗದ್ದಲವೋ ಗದ್ದಲ. ಕೆಲವರು "ನವೀನ"ದ ವಿಮರ್ಶೆ ಮಾಡುತಿದ್ದರೆ, ಮತ್ತೆ ಕೆಲವರು "ಜ್ಯೋತಿ" ಟಾಕೀಸಿನ ಅಂದ ಚೆಂದವನ್ನು ಕುರಿತು ವರ್ಣಿಸುತಿದ್ದಾರೆ. ಅವರಲ್ಲೊಬ್ಬನು "ಜ್ಯೋತಿಯವನು ಬ್ರಾಂದಿಯಲ್ಲಿ ತುಂಬ ಸಂಪಾದಿಸಿಬಿಟ್ಟ ಕಣಯ್ಯ, ಆ ಹಣ ಇದು" ಎನ್ನುತಿದ್ದಾನೆ. ಮನೆಮಾತು, ಕಾಡಮಾತು ಎಲ್ಲ ಅಲ್ಲಿ ನಡೆಯುತ್ತಲಿದೆ. ಸೋಡಾ, ಕಡಲೆ ಬೀಜ ಮಾರುವ ಹುಡುಗರಂತೂ, ಕಿವಿ ಮುಚ್ಚಿಹೋಗುವ ಹಾಗೆ ಕೂಗಿಕೊಳ್ಳುತಲಿದ್ದಾರೆ. ಅವರ ಗಲಾಟೆಯೊ ಗಲಾಟೆ. ಇದರ ಮಧ್ಯೆ ಪುಸ್ತಕಮಾರುವ ಹುಡುಗರ ತಂಟೆ ಬೇರೆ. "ನವೀನ", ನವೀನ" 'ನವೀನದ ಹಾಡಿನ ಪುಸ್ತಕ' ಎಂದು ಕೂಗುತಲಿದ್ದಾರೆ. ಒಂದೇ ಕೈನಲ್ಲಿ ಹತ್ತಾರು ಪುಸ್ತಕಗಳನ್ನು ಒಂದರ ಹಿಂದೆ ಒಂದು ಸೇರಿಸಿ, ಪ್ರತಿಯೊಬ್ಬರ ಮುಖದ ಎದು ರಿಗೂ ಹಿಡಿದು ತೋರಿಸಿ ತೋರಿಸಿ ಹೋಗುತಿದ್ದಾರೆ. ಇವೆಲ್ಲ ಕ್ಕಿಂತ ಹೆಚ್ಚಿನ ಶಬ್ದ ಹಾಡಿನ ಹೊಡೆತ. ಕನ್ನಡವಾದರೆ ಸ್ವಲ್ಪ ಅರ್ಥವಾಗುತ್ತದೆನ್ನಿ. ನಮ್ಮ ಜನಗಳೂ ಹಾಗೆಯೇ: ಕನ್ನಡ

ಹಾಡು ಅವರ ಕಿವಿಗೆ ಅಷ್ಟು ಇಂಪಾಗಿರುವುದಿಲ್ಲ. ಇದು ಚಿತ್ರ ಮಂದಿರದ ಮಾಲೀಕರುಗಳಿಗೆ ಗೊತ್ತು. ಆದುದರಿಂದಲೇ ಅವರುಗಳು ಬರೀ ಹಿಂದಿರಿಕಾರ್ಡುಗಳನ್ನೇ ಹಾಕುತ್ತಾರೆ. ನಮಗಂತೂ ಅವು ಸ್ವಲ್ಪವೂ ಅರ್ಥವಾಗದೆ ನಡಾ ಮುಡಾ ಎಂದು ಕಿರಿಚಿಕೊಳ್ಳುತ್ತಲಿರುತ್ತವೆ. ಅಲ್ಲಲ್ಲಿ ಕಡಲೆಕಾಯಿ ಬಾಯಿಗೆ ಹಾಕಿ ಜಗಿಯುತಿದ್ದುದರಿಂದ, ಕಡಕ್, ಕಡಕ್, ಶಬ್ದ ಕೇಳುತ್ತಲಿದೆ. ನಾಲ್ಕಾರು ಕಡೆಗಳಿಂದಲೂ ಡಬ್ ಡಬ್ ಎಂದು ಒಡೆಯುವ ಸೋಡಾ, ಕ್ರಷ್ ಶಬ್ದವೂ ಇದರ ಕೂಡ ಸೇರಿಕೊಂಡು, ಹೆಚ್ಚು ಧ್ವನಿಗೂಡಿಸಿದೆ. ಸರಿ; ಆಟ ಪ್ರಾರಂಭವಾಯಿತು. ವಿದ್ಯುದ್ದೀಪಗಳೆಲ್ಲ ಈಗ ಒಂದೊಂದಾಗಿ ಆರತೊಡಗಿದುವು. ಈಗ ಸದ್ದೇ ಇಲ್ಲ. ಜನ ಮೌನವಾಗಿ ಪರದೆಯ ಕಡೆಗೆ ದೃಷ್ಟಿ ಹಾಯಿಸಿದರು. ಮೊದಲೆಲ್ಲ ಜಾಹೀರಾತಿನ ಹೊಡೆತ. ಬೀಡಿ, ನಸ್ಯದ ಜಾಹೀರಾತೇ ಅರ್ಧಕ್ಕರ್ಧ ಜಾಸ್ತಿ ಎನ್ನಿ. ಕಥಾನಾಯಕಿ ಮೋಹನ ತನ್ನ ಇನಿಯನನ್ನು ಕಾಣದೆ, ಪರಿತಪಿಸುವುದೇ ಮೊದಲನೆಯ ದೃಶ್ಯ. ಜನವೆಲ್ಲ ಬಾಯಿಬಾಯಿ ಬಿಟ್ಟು, ಆಟ ನೋಡುವುದರಲ್ಲೇ ಮಗ್ನರಾಗಿದ್ದುದರಿಂದ, ಹೊತ್ತು ಎಷ್ಟಾಯಿತೆಂಬುದನ್ನೇ ಗಮನಿಸಲಿಲ್ಲ. "ನವೀನ" ಕಥಾರಚನೆಯಲ್ಲೂ, ಪಾತ್ರಾಭಿನಯದಲ್ಲೂ, ಸೊಗಸಾಗಿ ತೆಗೆಯಲ್ಪಟ್ಟಿದ್ದಿತು. ಇಂಟರ್‌ವಲ್ ಬೆಲ್ ಶಬ್ದ ಆದೊಡನೆ, ಜನಕ್ಕೆ ಆಗ ಅರ್ಧ ಆಟ ಮುಗಿಯಿತೆಂದು, ಗೋಚರವಾಯಿತು. ಈಗ ದೀಪಗಳೆಲ್ಲ ಮತ್ತೆ ಹಾಕಲ್ಪಟ್ಟುವು. ಮತ್ತೆ ಅದೇ ಕೂಗು, ಗಲಾಟೆ. ಜನ ಒಳಗೂ ಹೊರಗೂ ನಡೆಯ ಹತ್ತಿದರು. ಕುಟ್ಟಪ್ಪ ಯಾವಾಗಲೂ ಅತ್ತಿತ್ತ ನೋಡುವ ಆಸಾಮಿಯಲ್ಲ. ಆದರೆ ಈಗ ಪತ್ನಿ ಸೋಡಾ ಬೇಕೆಂದು ಹೇಳಿದುದರಿಂದ, ಹಿಂದುಗಡೆ ಕೂಗುತಿದ್ದ ಹುಡುಗನನ್ನು ಕರೆಯಲು ಹಿಂದಿರುಗಿದನು. ಕ್ಷಣಕಾಲ ಕುಟ್ಟಪ್ಪ ಸ್ತಂಭಿತನಾದನು. ರಾಘು–ಸರೋಜ ಹಿಂದುಗಡೆ ಆಸನದಲ್ಲಿ

ಕುಳಿತುಕೊಂಡಿದ್ದರು. ಕುಟ್ಟಪ್ಪನನ್ನು ಕಂಡು ರಾಘು, ಅವನನ್ನು ಕಾಣದವನಂತೆ, ಬೇರೊಂದೆಡೆ ಮುಖ ತಿರುಗಿಸಿಕೊಂಡನು. ಕುಟ್ಟಪ್ಪ ಪತ್ನಿಗೆ ಪಿಸುಮಾತಿನಲ್ಲಿ ಹೇಳಿದನು, ಆಕೆಯೂ ಹಿಂದಿರುಗಿ ನೋಡಿದಳು. ಆಟ ಪ್ರಾರಂಭವಾಗುವವರೆಗೆ, ಗಿರಿಜಮ್ಮ ನಾಲ್ಕಾರು ತಡವೆ, ಹಿಂದಿನ ಆಸನದ ಕಡೆಗೆ, ಮೆಲ್ಲಮೆಲ್ಲಗೆ ಕಣ್ಣು ಹಾಯಿಸುತಿದ್ದಳು. ಆಟವೂ ಮುಗಿಯಿತು. ಕುಟ್ಟಪ್ಪ ಪತ್ನಿಯೊಂದಿಗೆ ಮನೆ ಬಂದು ಸೇರಿದನು.

## ೩೧

ರಾಘು ನೆನಸಿದಂತೆಯೇ ಆಯಿತು. ತಂದೆಯ ಸ್ನೇಹಿತರೊಬ್ಬರು ತನ್ನನ್ನು ನೋಡಿದರಲ್ಲಾ ಎಂದು ಅವನ ಮನಸ್ಸು ಸ್ವಲ್ಪ ಚುರುಕ್ ಎಂದಿತು. ಯಾರ ಹಂಗಿನಿಂದ, ದಾಕ್ಷಿಣ್ಯದಿಂದ ನನಗೇನು? ನೋಡಿದರೆ ನೋಡಲಿ, ಎಂದು ಧೈರ್ಯ ಮಾಡಿದನು. ಆದರೂ ಮನಸ್ಸಿನಲ್ಲಿ ಸ್ವಲ್ಪ ಅಳುಕೇ. ಮಾರನೆಯ ದಿನ ರಾಘು ಕಂಪೆನಿಯಲ್ಲಿ ಕೆಲಸ ಮಾಡುತಿದ್ದಾಗ, ಯಾರೋ ವ್ಯಕ್ತಿ ತನ್ನನ್ನು ಕರೆಯುತ್ತಿದ್ದಾರೆಂದು ತಿಳಿದು, ಹೊರಬಂದನು. ನೋಡಿದಾಗ ವ್ಯಕ್ತಿ ಬೇರಾರು ಅಲ್ಲದೆ, ಕುಟ್ಟಪ್ಪನೇ ಆಗಿದ್ದನು. ಈ ಪೀಡೆ ನನಗೆಲ್ಲಿಂದ ಬಂದು ಸುತ್ತಿಕೊಂಡಿತು ಎಂದು, ಅವನು ಮನಸ್ಸಿನಲ್ಲೇ ಗೊಣಗಿಕೊಂಡನು. ಕುಟ್ಟಪ್ಪ, ಆವಶ್ಯಕವಾದ ಕೆಲವು ಮಾತುಕತೆಗಳಿರುವುದರಿಂದ, ಕೆಲಸದ ಬಿಡುವು ದೊರೆತೊಡನೆ, ಮನೆಗೆ ಬರಬೇಕೆಂದು ಕೇಳಿಕೊಂಡನು. ಮನಸ್ಸಿಲ್ಲದ ಮನಸ್ಸಿನಿಂದ, ರಾಘು ಒಪ್ಪಿಕೊಂಡನು. ಇಷ್ಟರಲ್ಲಿ ಧನಪಾಲಶೆಟ್ಟರು ಏತಕ್ಕೋ ಬಾಗಿಲಿನಲ್ಲಿ ನಿಂತು ಬಗ್ಗಿ ನೋಡಿದರು. ರಾಘುವೂ, ಕುಟ್ಟಪ್ಪನೂ, ಮಾತನಾಡುತಿದ್ದುದನ್ನು ಕಂಡು, ಒಳಗೇ ಮಾತಾಡಬಹುದಲ್ಲ, ಹೊರಗೇಕೆ ನಿಂತಿದ್ದೀರಾ

ಎಂದು ಪ್ರಶ್ನಿಸಿದರು. ಅಂಥ ಮಾತುಕತೆಗಳೇನಿಲ್ಲವೆಂದು ನುಡಿದು, ಕುಟ್ಟಪ್ಪ ಒಂದು ಹೆಜ್ಜೆ ಮುಂದೆ ಹಾಕಿದನು. ಬನ್ನಿ ಎಂದು ಶೆಟ್ಟರು ಸ್ವಾಗತಿಸಿ, ಆಸನವಿತ್ತರು. ಪರಸ್ಪರ ವಿಚಾರ ವಿನಿಮಯಗಳೆಲ್ಲವೂ ನಡೆದುವು. ರಾಘುವಿನ ವಿವಾಹ ಸಂಬಂಧವಾದ ಮಾತುಕತೆಗಳನ್ನಾಡಲು ಕುಟ್ಟಪ್ಪ ಬಂದಿರುವ ನೆಂದು ಶೆಟ್ಟರು ತಿಳಿದುಕೊಂಡರು. ಹುಡುಗಿ ನಿಬಂಧನೆ ಯಾಗಿದೆಯೇ ಎಂದು ಕೇಳಿದರು. ಕುಟ್ಟಪ್ಪ ಪಾಳ್ಯದ ಚರಿತ್ರೆ ಯನ್ನೆಲ್ಲ ವಿವರಿಸಿ, ನಿನ್ನೆ ಅಲ್ಲಿಂದ ಜಾತಕದ ಸಹಿತ ಒಂದು ಪತ್ರ ಬಂದಿರುವುದಾಗಿಯೂ, ಗುಂಡೂರಾಯರು ಪತ್ನೀಸಮೇತ ನಂಜನಗೂಡಿಗೆ ಪ್ರಯಾಣಮಾಡಿರುವುದರಿಂದ, ತಮ್ಮ ಕೈನಲ್ಲೇ ಆ ಪತ್ರ ಇರುವುದಾಗಿಯೂ ತಿಳಿಸಿದರು. ಅಗತ್ಯವಾಗಿ ಆಗ ಬೇಕಾದ ಕಾರ್ಯವೆಂದು ಶೆಟ್ಟರು ಅನುಮೋದಿಸಿದರು. ತಾವು ಮನೆಗೆ ಹೋಗಬಹುದೆಂದೂ, ರಾಘುವನ್ನು ಅಲ್ಲಿಗೇ ಕಳುಹಿಸು ವುದಾಗಿಯೂ, ಭರವಸೆಯಿತ್ತರು. ಕುಟ್ಟಪ್ಪ ಇದರ ಮೇರೆಗೆ ಶೆಟ್ಟರಿಗೆ ನಮಸ್ಕರಿಸಿ, ರಾಘುವಿನ ಕೂಡ ಮತ್ತೊಂದು ತಡವೆ ಹೇಳಿ, ಹೊರಬಂದನು. ಹೋಗುವಾಗ ಅವನು, ಅಲ್ಲೆ ಊದು ಬತ್ತಿ ಕಟ್ಟುತ್ತಿದ್ದ ಸರೋಜಳ ಮೇಲೆಯೂ, ಸ್ವಲ್ಪ ಕಣ್ಣು ಹಾಯಿಸಿ ನಡೆದನು. ಕುಟ್ಟಪ್ಪನ ಮಾತಾದರೆ ರಾಘು ಎಂದಿಗೋ ಮೀರುತಿದ್ದನು. ಆದರೆ ಧಣಿಯೇ ತನ್ನನ್ನು ನಿರ್ಬಂಧಪಡಿಸಿದು ದರ ಪರಿಣಾಮವಾಗಿ, ಅವನು ಮನೆಗೆ ಬರಲೇಬೇಕಾಯಿತು. ಮಧ್ಯಾಹ್ನ ಒಂದು ಘಂಟೆಗೆ ಸರಿಯಾಗಿ ಅವನು ಕುಟ್ಟಪ್ಪನ ಮನೆಗೆ ಬಂದನು. ಮೊದಲು ಗಿರಿಜಮ್ಮ ಮಂಗಳಾರತಿ ಎತ್ತಿದರು. “ ಶಾರದಮ್ಮನವರಂಥ ತಾಯಿಯನ್ನು ಪಡೆಯಬೇಕಾದರೆ ಪುಣ್ಯ ಮಾಡಿರಬೇಕು. ತಾಯಿತಂದೆಗಳನ್ನು ಗೋಳುಹುಯಿದು ಕೊಂಡರೆ, ಖಂಡಿತ ನೀನು ಮುಂದುವರೆಯಲಾರೆ ರಾಘು ” ಎಂದು ಪುಷ್ಪಾರ್ಚನೆ ಮಾಡಿದರು. ರಾಘು ಯಾವ ಮಾತನ್ನೂ

ಆಡುವ ಹಾಗಿರಲಿಲ್ಲ. "ಸಾಕು ಬಾಯಿ ಮುಚ್ಚೀ ; ಹುಡುಗ ತನದಲ್ಲಿ ಅದೆಲ್ಲ ಸಹಜ. ನಾನೂ ಚಿಕ್ಕತನದಲ್ಲಿ ಇದರ ಅಪ್ಪನ ಹಾಗೆ ಇದ್ದೆ" ಎಂದು, ತನ್ನ ಚರಿತ್ರೆಯನ್ನು ಕುಟ್ಟಪ್ಪ ಹೇಳ ಲಾರಂಭಿಸಿದನು. ಪ್ರೋಸ್ಟ್ಕಂಭ ಹತ್ತಿ ಮನೆಗೆ ಧುಮುಕಿದು ದನ್ನೂ, ಏಟುತಿಂದುದನ್ನೂ, ಸ್ವಾರಸ್ಯವಾಗಿ ವಿವರಿಸಿದನು. "ಸಾಕು ಸುಮ್ಮನಿರಿ ; ಕೇಳಿ, ಯಾರಾದರೂ ನಾಚಿಕೊಂಡಾರು" ಎಂದು ಪತ್ನಿ ಆಜ್ಞೆಮಾಡಿದ ಮೇಲೆ, ಅವನು ಅಲ್ಲಿಗೆ ಪೂರ್ಣ ವಿರಾಮ ಹಾಕಿದನು. ರಾಘು ತಲೆ ಬಗ್ಗಿಸಿಕೊಂಡು, ಏನೊಂದೂ ಮಾತಾಡದೆ ಕುಳಿತಿದ್ದನು. ಈಗ ಕುಟ್ಟಪ್ಪನು ಪಾಳ್ಯದ ವೃತ್ತಾಂತವನ್ನೆಲ್ಲ ಅವನಿಗೆ ವಿವರಿಸಿದನು. ಹುಡುಗಿ, ನಿಂಬೆ ಹಣ್ಣಿನ ಹಾಗೆ ಇದೆಯೆಂದೂ, ಇನ್ನು ಸಭ್ಯತನದಿಂದ ಸಂಸಾರ ಮಾಡಬೇಕೆಂದೂ ಬೋಧಿಸಿ, ಅವನನ್ನು ಕಳುಹಿದನು.

## ೩೨

ಎರಡು ದಿನಗಳು ಕಳೆದನಂತರ, ಗುಂಡೂರಾಯರು ಪತ್ನೀ ಸಮೇತ, ನಂಜನಗೂಡಿನಿಂದ ಹಿಂದಿರುಗಿದರು. ಕುಟ್ಟಪ್ಪ ಬಂದೊಡನೆಯೇ "ಸಿಹಿ ಪದಾರ್ಥ ಏನಾದರೂ ಕೊಡುತ್ತೀರಾ? ಎಂದು ಕೇಳಿದನು. ಕುಟ್ಟಪ್ಪ ಹಾಸ್ಯ ಪ್ರವೃತ್ತಿಯುಳ್ಳವ ನಾಗಿದ್ದುದರಿಂದ, ವಿವಾಹದ ತಿಂಡಿಗಳನ್ನೇನಾದರೂ ಕೇಳುವ ನೆಂದು ಬಗೆದು, ಶಾರದಮ್ಮನವರು "ನಿಮಗಿಲ್ಲದ ತಿಂಡಿಯೇ ಎಂದು ನಗುತ್ತ ಪೊಟ್ಟಣ ಬಿಚ್ಚಲು ಶುರುಮಾಡಿದರು. "ಹಾ, ಹ್ಞಾ, ಅದಲ್ಲ, ಅದಲ್ಲ, ಅದು ಬೇಡಿ ; ವಿಶೇಷ ಸುದ್ದಿಯೊಂದಿದೆ; ಅದಕ್ಕೆ ಸ್ಪೆಷಲ್ ಸಿಹಿಬೇಕು" ಎನ್ನುತ್ತ ಕುಟ್ಟಪ್ಪ, ಗುಂಡೂ ರಾಯರ ಕೈಗೆ ಪಾಳ್ಯದ ಪತ್ರವನ್ನಿತ್ತನು. ಗುಂಡೂರಾಯರು ಆದ್ಯಂತವಾಗಿ ಓದಿ ಪತ್ನಿಗೂ ವಿಷಯ ತಿಳಿಸಿದರು. ಸ್ನೇಹಿತರು

ಗಳು ಮಾತುಕತೆಗೆ ತೊಡಗುವಷ್ಟರಲ್ಲಿ, ಶಾರದಮ್ಮನವರು ಚಕ್ಕುಲಿಯನ್ನು ತಟ್ಟೆಯಲ್ಲಿ ಹಾಕಿ, ಕುಟ್ಟಪ್ಪನ ಮುಂದೆ ಇಟ್ಟರು. " ಹಾಗೂ ಕೊಟ್ಟೇಬಿಟ್ಟರಲ್ಲಾ " ಎಂದವನನ್ನಲು " ತೊಗೊಳ್ಳಿ " ಎಂದು ಗುಂಡೂರಾಯರು ನುಡಿದು, ತಾವೇ ಮೊದಲು ತಟ್ಟೆಗೆ ಕೈಹಾಕಿದರು. ಕಟುಂ, ಕಟುಂ ಶಬ್ದದೊಂದಿಗೆ, ಸ್ನೇಹಿತರು ಗಳೀರ್ವರೂ ಏನೇನೋ ಹರಟೆ ಹೊಡೆದನಂತರ, ಕುಟ್ಟಪ್ಪ ತನ್ನ ಮನೆಗೆ ಹೊರಟು ಹೋದನು. ಈಗ ಪತಿಪತ್ನಿಯರಲ್ಲಿ ವಿವಾದ ಪ್ರಾರಂಭವಾಯಿತು. ಮೂಲಾ ನಕ್ಷತ್ರವಲ್ಲ ಏನು ಮಾಡುವು ದೆಂದು, ಶಾರದಮ್ಮನವರು ಪ್ರಶ್ನಾರ್ಥಕ ಚಿಹ್ನೆ ಹಾಕಿದರು" "ಮೂಲಾನಕ್ಷತ್ರ, ಮೂಲಾನಕ್ಷತ್ರ, ಎಂಥ ಮೂಲನಕ್ಷತ್ರವೇ." ಎಂದು ಗುಂಡೂರಾಯರು ಗುಡುಗಿದರು. " ಹಾಗೆಂದರಾಯಿತೇ" ಎಂದು ಶಾರಗಮ್ಮನವರು ಆಕ್ಷೇಪಿಸಿದರು. ನಿನ್ನ ಮಗನಿಗೆ ಯಾರೆ ಹೆಣ್ಣು ಕೊಡುವವರು, ಇಂಥ ಸಂದರ್ಭ ಬಿಡಬಾರದು ಎಂದು ಪಾಳ್ಯದ ಶಾಮರಾಯರ ಮನೆಯವರನ್ನು ಕುರಿತು, ಅವರು ವರ್ಣಿಸಿದರು. " ಚಿನ್ನದ ಸೂಜಿ ಅಂತ ಕಣ್ಣು ಚುಚ್ಚಿ ಕೊಳ್ಳುವುದಕ್ಕಾಗುತ್ತದೆಯೇ ಹೇಳಿ " ಎಂದು ಪತ್ನಿ ಮರುಪ್ರಶ್ನೆ ಹಾಕಿದರು. ಇದಾದನಂತರ ಪತಿ ಪತ್ನಿಯರೀರ್ವರಿಗೂ ಮುಕ್ಕಾಲು ಘಂಟೆಕಾಲ, ದೊಡ್ಡ ಕಾಳಗವೇ ನಡೆಯಿತು. ಆಗ್ನೇಯಾಸ್ತ್ರ ವನ್ನು ಬಿಟ್ಟರೆ ವರುಣಾಸ್ತ್ರದಿಂದಲೂ ಇಂದ್ರಾಸ್ತ್ರವನ್ನು ಬಿಟ್ಟರೆ ಬ್ರಹ್ಮಾಸ್ತ್ರದಿಂದಲೂ, ಒಬ್ಬರಿಗೊಬ್ಬರು ರಕ್ಷಣೆ ಮಾಡಿಕೊಳ್ಳು ತಿದ್ದರು. ಅನಂತರ ಸಂಧಾನಕ್ಕೆ ಉಭಯಪಕ್ಷದವರೂ ಅಣಿ ಯಾಗಿ, ಶಾಂತಿಯುತವಾದ ಮಾತುಕತೆಗಳನ್ನಾಡಲು, ಮುಂದೆ ಬಂದರು. ಈಗ ಒಪ್ಪಂದ ಸಿದ್ಧವಾಯಿತು, ಅದರ ಸಾರಾಂಶ ಕರಾರು ಇಷ್ಟೇ:– ಮೊದಲನೆಯದು :—ಜಾತಕ ಪತ್ರವನ್ನು ತಿಪ್ಪಾಶಾಸ್ತ್ರಿಗಳಲ್ಲಿ ತೋರಿಸಿ, ಈ ವಿವಾಹ ನಡೆಸಬಹುದೇ ಎಂದು ಅವರ ಅನುಮತಿ ಕೋರುವುದು. ಎರಡನೆಯದು :—

ಶಾಸ್ತ್ರಿಗಳು ಸಮ್ಮತ ಸೂಚಿಸಿದಲ್ಲಿ, ಧನಪಾಲಶೆಟ್ಟರ ಮನೆಗೇ ಕುಟ್ಟಪ್ಪನನ್ನೂ ಕರೆದುಕೊಂಡು ಹೋಗಿ, ರಾಘುವನ್ನು ಸಮ್ಮತಿ ಗೊಳಿಸುವುದು. ಮೂರನೆಯದು :—ಎಲ್ಲ ಸರಿಬಂದಲ್ಲಿ ಪಾಳ್ಯಕ್ಕೆ ಪತ್ರ ಬರೆದು, ಮುಂದಿನ ಕಾರ್ಯಕಲಾಪಗಳಿಗೆ ದಾರಿಮಾಡಿ, ಜಾಂ ಜಾಂ ಯೆಂದು ವಿವಾಹವನ್ನು ನೆರವೇರಿಸುವುದು.

## ೩೩

ಮರುದಿನ ಜ್ಯೋತಿಷ ನಿಲಯಕ್ಕೆ ಪತಿಪತ್ನಿಯರು ತೆರಳಿದರು. ರಾಘುವಿನ ಜಾತಕವನ್ನೂ, ಲಕ್ಷ್ಮಿಯ ಜಾತಕವನ್ನೂ, ತಿಪ್ಪಾಶಾಸ್ತ್ರಿಗಳ ಕೈಯಲ್ಲಿ ಕೊಡಲಾಯಿತು. ಅವರು ಮೇಲೆ ನೋಡಿದರು ; ಕೆಳಗೆ ನೋಡಿದರು ; ಏನೇನೊ ಗುಣಿಸಿದರು ; ಹಾಯ್ ಎಂದು ಆಕಳಿಸಿ, ಸರ್‍ರೆಂದು ಮೂಗಿಗೆ ನಶ್ಯ ಏರಿಸಿದರು; ಕೊನೆಗೆ ಆಗಬಹುದು, ಚೆನ್ನಾಗಿದೆ ಎಂದರು. ಮಧ್ಯೆ ಶಾರದಮ್ಮನವರು ಬಾಯಿಹಾಕಿ, "ಮೂಲಾನಕ್ಷತ್ರದ ಹುಡುಗಿ, ತಮ್ಮನ್ನು ಕೇಳಬೇಕೂಂತಲೇ ಬಂದದ್ದು" ಅಂದರು. "ಅದಕ್ಕೇನಂತಮ್ಮಾ, ಶಾಸ್ತ್ರಿಗಳು ನುಡಿದರು. "ಏನೂ ಸಂದೇಹ ಇಲ್ಲವಲ್ಲಾ" ಎಂದು ಮತ್ತೆ ಕೇಳಿದುದಕ್ಕೆ "ಒಂದೂ ಇಲ್ಲ, ಧೈರ್ಯವಾಗಿ ಮಾಡಬಹುದು" ಎಂದು ಹೇಳಿ, ಕನ್ನಡಕದ ಒಳಗಣ ಕಣ್ಣಿನಿಂದ, ಶಾರದಮ್ಮನವರನ್ನು ದೃಷ್ಟಿಸಿ ನೋಡುತ್ತ, ಶಾಸ್ತ್ರಿಗಳು ಹೇಳಿದರು. ಪತಿಪತ್ನಿಯರು ಅವರಿಂದ ಮತ್ತೂ ಭರವಸೆಯನ್ನು ತೆಗೆದುಕೊಂಡರು. ವಿವಾಹ ಸುಮುಹೂರ್ತ ನಿಶ್ಚಯಿಸಲು ತಾವು ಇಲ್ಲಿಗೇ ಬರುವುದಾಗಿಯೂ, ಶಾಂತಿ ತಾವೇ ಮಾಡಿಸಿಕೊಡಬೇಕೆಂದೂ ನುಡಿದು, ಅವರಿಗೆ ಕೊಡಬೇಕಾದ ಸಂಭಾವನೆಯನ್ನಿತ್ತು ಹೊರಬಂದರು. ಮನೆಗೆ ಬಂದಮೇಲೆ ತಿಪ್ಪಾಶಾಸ್ತ್ರಿಗಳ ವಿಮರ್ಶೆ ನಡೆಯಿತು. ಶಾಸ್ತ್ರಿಗಳು ಒಪ್ಪಿದಲ್ಲಿ,

ಶಾಂತಿ ಮಾಡಿಕೊಟ್ಟಲ್ಲಿ, ಬ್ರಹ್ಮನೇ ಮಾಡಿಕೊಟ್ಟಹಾಗೆ ಎಂದು ಗುಂಡೂರಾಯರು ನುಡಿದರು. ಶಾರದಮ್ಮನವರಿಗೆ ಈಗ ಸಮಾಧಾನವಾಯಿತು. ತಿಪ್ಪಾಶಾಸ್ತ್ರಿಗಳವರಲ್ಲಿ ಅವರಿಗೆ ಪೂರ್ಣ ನಂಬಿಕೆ. ಇನ್ನು ಮುಂದೆ ರಾಘುವನ್ನು ಕಂಡು ಒಡಂಬಡಿಸುವುದೆಂದು ತೀರ್ಮಾನವಾಯಿತು. ಗುಂಡೂರಾಯರು ಕುಟ್ಟಪ್ಪನನ್ನು ಕರೆದುಕೊಂಡು, ಧನಪಾಲಶೆಟ್ಟರ ಮನೆಗೆ ಹೋಗಿ ಬರುವುದಾಗಿ ತಿಳಿಸಿದರು.

## ೩೪

ಟೈರ್ ಕಂಪೆನಿಯಲ್ಲಿ ಕೆಲಸಮಾಡುತಿದ್ದ ವೆಂಕಣ್ಣ ರಾಘುವಿಗೆ ಆಪ್ತಮಿತ್ರ. ಅವನೀಗ ಬೊಂಬಾಯಿನಲ್ಲಿ ಮಿಲ್ಲಿನಲ್ಲಿ ಕೆಲಸಮಾಡುತಿದ್ದಾನೆ. ರಾಘುವಿಗೂ, ವೆಂಕಣ್ಣನಿಗೂ, ಆಗಾಗ್ಯೆ ಪತ್ರವ್ಯವಹಾರಗಳು ನಡೆಯುತ್ತಲೇಯಿವೆ. ತನ್ನ ಮನೆಯವರು ತನಗೆ ಹೇಗೊ ನಿರ್ಬಂಧಮಾಡಿ ವಿವಾಹಮಾಡುವರೆಂದು ರಾಘುವಿಗೆ ತಿಳಿದಿತ್ತು. ಆದುದರಿಂದ ಅವನು ಈಗ ಹೊಸದೊಂದು ಯೋಚನೆ ಮಾಡಿದನು. ವೆಂಕಣ್ಣನಿಗೆ ಪತ್ರ ಬರೆದು, ಸರೋಜಳನ್ನು ಬೊಂಬಾಯಿಗೆ ಕರೆದುಕೊಂಡು ಹೊರಟು ಹೋಗುವುದೆಂದು ನಿರ್ಧರಿಸಿದನು. ಕುಟ್ಟಪ್ಪನನ್ನು ಸಿನಿಮಾ ಮಂದಿರದಲ್ಲಿ ಕಂಡ ಮರುದಿನವೇ, ಆ ಯೋಚನೆ ಅವನಿಗುದಿಸಿ, ಅಂತೆಯೇ ಅವನು ವೆಂಕಣ್ಣನಿಗೆ ಪತ್ರ ಬರೆದಿದ್ದನು. ಈಗವನಿಂದ ಉತ್ತರ ದೊರಕಿದ್ದಿತು. ಬಂದಲ್ಲಿ ತಾನು ಖಂಡಿತ ಕೆಲಸ ದೊರಕಿಸಿ ಕೊಡುವುದಾಗಿ, ಅವನು ಪ್ರತ್ಯುತ್ತರವಿತ್ತಿದ್ದನು. ರಾಘು ತಾನು ಬೊಂಬಾಯಿನಲ್ಲಿರುವ ಹಾಗೆಯೇ ಆಕಾಶಕೋಟೆ ಕಟ್ಟಿದನು. ಪೀಡೆಯೆಲ್ಲ ಮೈಸೂರೊಂದಿಗೆ ತೊಲಗಲಿ ಎಂದುಕೊಂಡನು. ಆದರೆ ಮಾನವನೆಣಿಸುವುದೇ ಬೇರೆ; ಅದು

ನಡೆಯುವುದೇ ಬೇರೆ. ರಾಘುವಿನ ಸ್ಥಿತಿಯೂ ಹೀಗೆಯೇ ಆಯಿತು. ಬೊಂಬಾಯಿಯಂಥ ದೊಡ್ಡಪಟ್ಟಣವನ್ನು ನೋಡಬೇಕೆಂಬ ಇಚ್ಛೆ ಸರೋಜಳಿಗೆ ಬಹಳವಾಗಿದ್ದರೂ, ಈಗವಳು ಹೊರಡಲು ಸಾಧ್ಯವಿಲ್ಲವೆಂದುಬಿಟ್ಟಳು. ಮೈಸೂರಿಗೆ ಅವಳೀಗ ಕಾಲಿಟ್ಟು ಬಹಳ ದಿನಗಳು ಕಳೆದುಹೋಗಿದ್ದುವು. ಎಷ್ಟೋ ಮಂದಿ ಈಗ ಅವಳ ಪಾದಸೇವೆ ಮಾಡುತಿದ್ದಾರೆ. ವರಮಾನ ಅಪಾರವಾಗಿದೆ. ಮನೆಗೆಲಸ ನಡೆಯಲು ಹೇಗೂ ಒಬ್ಬ ಗಂಡಸು ಅತ್ಯಗತ್ಯವಲ್ಲವೇ ? ಆ ನಿಮಿತ್ತ ರಾಘು. ನಿಜವಾದ ಪ್ರೇಮದಿಂದ ತಾವಿಲ್ಲಿದ್ದರೆ ತೊಂದರೆಯೆಂದು ಬಗೆದು, ದೂರ ದೇಶಗಳಿಗೆ ತೆರಳಿ, ತನ್ನ ಪ್ರಿಯನೊಬ್ಬನನ್ನೇ ಹೊಂದಬೇಕೆಂಬ ಆಸೆಯುಳ್ಳ ಹೆಣ್ಣಲ್ಲ ಅವಳು. ಹತ್ತಾರು ಮಂದಿಯ ಕೈರುಚಿ ನೋಡಿದವಳವಳು. ಇಂದು ತನ್ನನ್ನು ಆಶ್ರಯಿಸಿರುವವನು, ನಾಳೆ ತನಗಿಂತಲೂ ಚೆಲುವೆಯಾದ ಮತ್ತೊಬ್ಬಳನ್ನು ಕಂಡರೆ, ಖಂಡಿತ ಅವಳ ಬಲೆಗೇ ಬೀಳುತ್ತಾನೆ. ಇಂಥ ಕಾಮುಕರುಗಳನ್ನು ನಂಬಿ ಹೇಗೆ ಪರ ಊರಿಗೆ ಹೊರಡುವುದು. ಅನುಭವಸ್ಥಳಾದ ಅವಳಿಗೆ ಯಾರೂ ಇಂಥ ವಿಷಯಗಳನ್ನು ಹೇಳಿಕೊಡಬೇಕಾದ್ದಿರಲಿಲ್ಲ. ಅವಳೇ ಅಪಾರ ಪಾಂಡಿತ್ಯವುಳ್ಳವಳಾಗಿರುವಾಗ, ಯಾರು ಏನು ಹೇಳಿಕೊಡಬೇಕಾದ್ದಿದೆ ! ಅವಳಿಗೆ ಇಂಥ ವಿಷಯವೆಲ್ಲ ತಿಳಿಯದೆ ? ರಾಘುವಿನ ಕೋರಿಕೆಗೆ ಅವಳು ಒಡಂಬಟ್ಟಾಳೇ ? ಅವನು ಏನೇನೆಲ್ಲ ಹೇಳಿದರೂ, ಆಸೆಯ ವಾರ್ತೆ ತೋರಿಸಿದರೂ, ಅವಳು ಒಪ್ಪದೆ "ನಿಮಗೆ ಧೈರ್ಯವಿದ್ದಲ್ಲಿ, ನೀವು ವಿವಾಹವಾಗುವುದಿಲ್ಲೆಂದು ತಂದೆ ತಾಯಿಗಳಲ್ಲಿ ತಿಳಿಸಿ" ಎಂದಳು. ಆ ಧೈರ್ಯ ರಾಘುವಿಗೆಲ್ಲಿಂದ ಬರಬೇಕು ?

೩೫

ರಾಘು ಬೊಂಬಾಯಿಗೆ ಕಾಗದ ಬರೆದುದು, ಸರೋಜಳನ್ನು ಕರೆದುಕೊಂಡು ಹೋಗುವುದಕ್ಕೆ ನಿರ್ಧರಿಸಿದುದು, ವೆಂಕಣ್ಣನಿಂದ ಪ್ರತ್ಯುತ್ತರ ದೊರಕಿದುದು, ಮುಂತಾದವುಗಳೆಲ್ಲ ಯಾರೋ ಸಿ.ಐ.ಡಿ. ಗಳಿಂದ ಗುಂಡೂರಾಯರಿಗೆ ತಿಳಿಯಿತು. ಅವರು ಬೆಚ್ಚಿದರು ; ಕುಟ್ಟಪ್ಪನಿಗೆ ವರದಿ ಒಪ್ಪಿಸಿದರು. ಹಾಗೇನಾದರೂ ಬೊಂಬಾಯಿಗೆ ಹೋಗುವ ಏರ್ಪಾಡು ಮಾಡಿದಲ್ಲಿ,ಅವನೆಲ್ಲಿದ್ದರೂ ಕಂಡು ಹಿಡಿದು, ಅವನ ಕಾಲು ಮುರಿಯುವುದಾಗಿ, ಕುಟ್ಟಪ್ಪ ಕೂಗಾಡಿದನು. ಸಂಜೆ ಕುಟ್ಟಪ್ಪನೂ, ಗುಂಡೂರಾಯರೂ, "ಮಾರುತಿ" ಕಂಪೆನಿಗೆ ಹೋದರು. ಧನಪಾಲಶೆಟ್ಟರು ಈರ್ವರನ್ನೂ ಆದರದಿಂದ ಬರಮಾಡಿಕೊಂಡರು. ರಾತ್ರಿ ಕಂಪೆನಿ ಮುಚ್ಚಿದ ಮೇಲೆ ಶೆಟ್ಟರ ಕೂಡ ಎಲ್ಲರೂ ಅವರ ಮನೆಗೆ ತೆರಳಿದರು. ಶೆಟ್ಟರ ಆಜ್ಞೆಯ ಮೇರೆಗೆ ರಾಘುವೂ ಹಿಂದೆ ಹಿಂದೆ ಬರುತಿದ್ದನು. ಅವನೀಗ ಇವರುಗಳ ಕೈದಿಯಾಗಿದ್ದನು. ಮನೆಗೆ ಸೇರಿದ ಮೇಲೆ ಮಾತುಕತೆಗಳಿಗೆ ಪ್ರಾರಂಭವಾದುವು. "ಇದೇನು ವಿಚಿತ್ರ; ಹೀಗೆಲ್ಲಾ ಮಾತನಾಡುತ್ತೀರಿ, ಯಾರು ಲಗ್ನಮಾಡಿಕೊಳ್ಳುವುದಿಲ್ಲವೆಂದರು. ಅವರಿವರ ಇಲ್ಲದಸಲ್ಲದ ಮಾತನ್ನೇಕೆ ಕೇಳಿ, ರಾಘುವನ್ನು ಅವಮಾನ ಮಾಡುತ್ತೀರಾ ?" ಎಂದರು. ಮೇಲೂ ಮುಂದುವರೆದು, "ಅವನೇನು ದಡ್ಡನೇ, ಏನೋ ಹುಡುಗುತನ. ಇದಕ್ಕೆ ನಾಲ್ಕಾರು ಮಂದಿ ಸೇರಿ ನ್ಯಾಯ ಮಾಡಬೇಕೇ ? ಪೋಲೀಸಿನವರು ಅಂದರೆ ಸರಿಯಾಗಿದ್ದೀರಿ, ಒರಟುತನವೇ ಹೊರತು ನಿಮ್ಮಲ್ಲಿ ನಯವೇ ಇಲ್ಲ" ಎಂದು ನಗುತ್ತ ನುಡಿದರು. ರಾಘುವಿಗೆ ಕಟ್ಟುವುದಕ್ಕೂ ಇಲ್ಲ ; ಬಿಡುವುದಕ್ಕೂ ಇಲ್ಲದ ಹಾಗಾಯಿತು. ಅವನು ಕಂಪೆನಿಯಿಂದ

ಬರುವಾಗ, ಈವಾಗ ವಿವಾಹ ಸಾಧ್ಯವಿಲ್ಲವೆಂದೇ ಹೇಳುವೆನೆಂದು ಹೊರಟಿದ್ದನು. ಶೆಟ್ಟರಲ್ಲ, ಯಾರ ಮಾತನ್ನೂ ಕೇಳುವುದಿಲ್ಲವೆಂದು ಕೊಂಡಿದ್ದನು. ಆದರೆ ಇಲ್ಲಿಯ ಪರಿಸ್ಥಿತಿಯೇ ಬೇರೆಯಾಗಿ ಪರಿಣಮಿಸಿತು. ಕುಟ್ಟಪ್ಪನೂ, ಗುಂಡೂರಾಯರೂ ಒಂದು ಪಕ್ಷ ಮಾತಾಡಿದರೆ, ಶೆಟ್ಟರು ತಾವೇ ರಾಘುವಿನ ವಕಾಲತ್ತು ವಹಿಸಿ ಮಾತಾಡುತ್ತಿದ್ದರು. ರಾಘು ಮುಚ್ಚಿದ ಬಾಯನ್ನು ತೆರೆಯಲೇ ಇಲ್ಲ. ವಕೀಲರೇ ವಾದಮಾಡುವಾಗ ವಾದಿಗೇನು ಕೆಲಸ. ಅವನೇನೊ ಅನ್ನಬೇಕೆಂದು ಎರಡಾವೃತ್ತಿ ಪ್ರಯತ್ನಪಟ್ಟನು. ಆದರೆ ಅವನ ಮಾತು ಬಾಯಿಂದ ಈಚೆಗೆ ಹೊರಡಲೇ ಇಲ್ಲ. ಇವರುಗಳ ಮಧ್ಯೆ ಶೆಟ್ಟರ ಪತ್ನಿಯೂ, ಅವರ ತಾಯಿಯೂ, "ಅವನಿಗೇನು ಬುದ್ಧಿಯಿಲ್ಲವೇ ? ಇಂಥಾವರುಗಳೇ ಮುಂದೆ ಸಂಸಾರವನ್ನು ಚೆನ್ನಾಗಿ ನಡೆಯಿಸುವುದು" ಎಂದರು. ಅನಂತರ ಬೇರೆಬೇರೆ ಮಾತು ಕತೆಗಳು ನಡೆಯುತಿದ್ದುವು. ಇಷ್ಟರಲ್ಲಿ ಹೋಟೆಲ್‌ನಿಂದ ಮಾಣಿ ಕಾಫಿ ತಂದು ಹಿಡಿದು ನಿಂತಿದ್ದನು. "ಇದ್ಯಾಕೊ ನಿಂತಿದ್ದೀ, ಕೊಡೋ" ಎಂದು ಶೆಟ್ಟರಂದ ಮೇಲೆ, ಅವನು ಎಲ್ಲರಿಗೂ ಒಂದೊಂದು ಕಪ್ ಬಿಸಿಬಿಸಿ ಕಾಫಿ ಕೊಟ್ಟನು. ಅನಂತರ ಶೆಟ್ಟರು ಗುಂಡೂರಾಯರನ್ನುದ್ದೇಶಿಸಿ "ಪಾಳ್ಯಕ್ಕೆ ಕುಟುಂಬ ಸಹಿತ ಹೋಗಿದ್ದು ನಿಷ್ಕರ್ಷೆಮಾಡಿ ಬನ್ನಿ ; ರಾಘುವನ್ನೂ ಕರೆದುಕೊಂಡು ಹೋಗಿ ; ಹುಡುಗಿಯನ್ನು ನೋಡಲಿ. ವಿವಾಹವನ್ನು ತ್ವರಿತವಾಗಿ ನಡೆಯಿಸಿ, ಸಾವಧಾನ ಮಾಡಬೇಡಿ" ಎಂದರು. ಸರಿ; ಎಲ್ಲ ಮೇಲಕ್ಕೆದ್ದುದಾಯಿತು. ನಮಸ್ಕಾರ ಮಾಡಿ ಕುಟ್ಟಪ್ಪನೂ, ಗುಂಡೂರಾಯರೂ, ಹೊರಬಂದರು. ಕುಟ್ಟಪ್ಪನು ಕೂಗಿದ ಮೇಲೆ ಬೇರೆ ವಿಧಿಯಿಲ್ಲದೆ ರಾಘುವೂ ತನ್ನ "ಅನ್ನಪೂರ್ಣ" ದತ್ತ ಈರ್ವರನ್ನೂ ಹಿಂಬಾಲಿಸಿ ನಡೆದನು.

ಗುಂಡೂರಾಯರು ಈದಿನ ಶಾಮರಾಯರಿಗೆ ಪತ್ರವೊಂದನ್ನು ಬರೆದರು. ಅದರಲ್ಲಿ ಜಾತಕ ಕೂಡಿ ಬರುವುದೆಂದೂ, ಹುಡುಗಿ ಮೂಲಾನಕ್ಷತ್ರದ್ದೆಂಬ ಭೀತಿ ಮನೆಯವರಿಗಿದ್ದುದಾಗಿಯೂ, ಆದರೆ ಜ್ಯೋತಿಷ್ಕರ ಅಭಿಪ್ರಾಯದ ಮೇರೆ ಶಾಂತಿ ಮಾಡಿಸಿದಲ್ಲಿ ಎಲ್ಲ ಸರಿಹೋಗುವುದೆಂದೂ, ಆದುದರಿಂದ ಈ ಪತ್ರ ಕಂಡೊಡನೆಯೇ ಬಂದು ಮತ್ತಿತರ ವಿಚಾರಗಳಿಗೆ ಮಾರ್ಗಮಾಡಿಕೊಡಬೇಕೆಂದೂ, ಬರೆದರು. ಶಾಮರಾಯರಿಗೆ ಎರಡು ದಿನಗಳಲ್ಲೇ ಪತ್ರ ಕೈಸೇರಿತು. ಈಗಲಾದರೂ ದೇವರು ಕಣ್ಣುಬಿಟ್ಟನಲ್ಲಾ ಎಂದವರು ಸಂತಸಗೊಂಡರು. ಮನೆಯಲ್ಲಿ ಎಲ್ಲರ ಮುಖದಲ್ಲೂ ಉತ್ಸಾಹದ ಅಲೆ ಏಳತೊಡಗಿತು. ಶಾಮರಾಯರೂ, ಜಾನಕಮ್ಮನವರೂ, ಸಂಭಾಷಣೆಗೆ ತೊಡಗಿದರು. ಮೈಸೂರಿಗೆ ತಂದೆಯ ಕೂಡ ಮಗನೂ ಹೋಗುವುದೆಂದು ತೀರ್ಮಾನಮಾಡಲಾಯಿತು. ಜಾನಕಮ್ಮನವರು ಪತಿಯ ಕೂಡ "ಹೆಚ್ಚಿಗೆ ಮಾತನ್ನೊಂದೂ ಕೊಡಬೇಡಿ. ವರ ಹುಡುಗಿಯನ್ನು ಬಂದು ನೋಡಲಿ. ಅನಂತರದ ಮಾತುಕತೆಗಳನ್ನೆಲ್ಲಾ ಇಲ್ಲೇ ಆಡೋಣ. ಔತಣಕ್ಕೆ ಆಹ್ವಾನವಿತ್ತು ಬನ್ನಿ" ಎಂದರು. ಪ್ರಯಾಣಕ್ಕೆ ಅಣಿಯಾಗತೊಡಗಿತು. ದಾರಿಯಲ್ಲಿ ಉಣ್ಣಲೆಂದು ಸ್ವಲ್ಪ ಹುಳಿ ಅನ್ನವನ್ನೂ, ಸ್ವಲ್ಪ ಮೊಸರನ್ನವನ್ನೂ, ಜಾನಕಮ್ಮನವರು ಬುತ್ತಿ ಕಟ್ಟಿದರು. ಗಾಡಿಯಲ್ಲಿ ಹೋಗುವುದಕ್ಕಿಂತ, ನಡೆದುಹೋಗುವುದೇ ಉತ್ತಮವೆಂದು ತೀರ್ಮಾನಿಸಿಕೊಂಡರು. ಈ ಮಧ್ಯೆ ಆನೆಗಳ ಉಪದ್ರವ ಜಾಸ್ತಿಯಿದ್ದುದರಿಂದ, ಮಲ್ಲನಗುಳಿವರೆಗೆ ನಾಲ್ಕಾರು ಆಳುಗಳನ್ನು ಕರೆದುಕೊಂಡು ಹೋಗುವುದೆಂದು ತೀರ್ಮಾನವಾಯಿತು. ಜಾನಕಮ್ಮನವರು ಆಳುಗಳಿಗೆ ಪ್ರತ್ಯೇಕವಾಗಿ ಸಾಮಕ್ಕಿ ಅನ್ನ ಬುತ್ತಿಕಟ್ಟಿ

ಕೊಟ್ಟರು. ಬೆಳಗಿನ ಎಂಟು ಘಂಟೆಗೆ ಎಲ್ಲರೂ ಹೊರಟರು. ಮುಂದೆ ಶಾಮರಾಯರು, ಅವರ ಹಿಂದೆ ರಾಮು, ರಾಮುವಿನ ಹಿಂದೆ ಹೆಗಲಮೇಲೆ ದೊಣ್ಣೆಯಿರಿಸಿದ ನಾಲ್ಕಾಳುಗಳು ಪ್ರಯಾಣ ಮಾಡಿದರು. ಈ ಆರು ಮಂದಿಯೂ ನಡೆದು ಹೋಗುತಿದ್ದಾಗ, ಚಪ್ಪಲಿ ಶಬ್ದ ಛಡಕ್, ಛಡಕ್ ಎಂದು ಕೇಳುತಿತ್ತು. ವ್ಯವಸಾಯದ ಮಾತು, ಹುಲ್ಲ ಹಸುಕು ಹಾಕಿದ ವಿಧಾನ, ಮುಂಗಾರು ಮಳೆಗೆ, ಜೋಳದ ಬೆಳೆಗೆ, ಯಾವ ಯಾವ ಹೊಲಗಳನ್ನು ಕೃಷಿಮಾಡಬೇಕು, ಎಂಬ ಇತ್ಯಾದಿ ವಿಚಾರಗಳನ್ನು ಮಾತನಾಡುತ್ತ ಅವರು ನಡೆದರು. ಮಲ್ಲನಗುಳಿ ದಾಟಿದ ಮೇಲೆ, " ಹೋಗಿದ್ದು ಬಂದರ್‍ಯಾ ನಮ್ಮ ಒಡೆಯಾ " ಎಂದು ಆಳುಗಳು ಕೈಮುಗಿದು, ಹಿಂದಿರುಗಿದರು. ತಂದೆಯೂ, ಮಗನೂ, ಸೊತ್ತನಪುರದ ಹಳ್ಳವನ್ನು ಸೇರುವಾಗ, ಮಧ್ಯಾಹ್ನ ಒಂದು ಘಂಟೆಯಾಗಿತ್ತು. ತಂದಿದ್ದ ಬುತ್ತಿಯನ್ನು ಬಿಚ್ಚಿ ತಂದೆ ಮಕ್ಕಳಿಬ್ಬರೂ ತಿಂದರು. ಊರ ಹೊರಗಿನ ಜಗಲಿಯ ಮೇಲೆ ವಿಶ್ರಮಿಸಿಕೊಳ್ಳಲೆಂದು ತುಸು ಕುಳಿತರು. ಬಿಸಿಲು ತೀವ್ರವಾಗಿದ್ದರೂ, ಬೇವಿನ ಮರದ ಗಾಳಿ ಬೀಸುತಿದ್ದುದರಿಂದ ತಣ್ಣಗಿದ್ದಂತಿದ್ದು,ದೇಹಕ್ಕೆ ತುಸು ಆಲಸ್ಯ ಕಡಿಮೆಯಾದಂತಿತ್ತು. " ಸ್ವಲ್ಪ ಮಜ್ಜಿಗೆ ಕುಡಿದಿದ್ದರೆ ಎಷ್ಟೋ ಚೆನ್ನಾಗಿತ್ತು " ಎಂದು ಶಾಮರಾಯರು ನುಡಿದರು. ರಾಮು " ಊರೊಳಗೆ ಹೋಗಿದ್ದೇ ಬರೋಣ ಬನ್ನಿ." ಎಂದು ವೀರಯ್ಯನ ಮನೆಯ ಬಾಗಿಲಿಗೆ ತಂದೆಯ ಸಹಿತ ಬಂದನು. ವೀರಯ್ಯ ಶಾಮರಾಯರಿಗೆ ಪರಿಚಿತ ವ್ಯಕ್ತಿ. ಆಗಾಗ್ಗೆ ಚಾಮರಾಜನಗರಕ್ಕೆ ಹೋಗುವಾಗ ಶಾಮರಾಯರು ವೀರಯ್ಯನನ್ನು ಭೇಟಿಯಾಗುವುದುಂಟು. ಕೊಂಗಳ್ಳಿ ದೇವಾಲಯಕ್ಕೆ ಹೋಗುವಾಗ ವೀರಯ್ಯ ಶಾಮರಾಯರನ್ನೂ ಕಂಡು ಭೇಟಿಯಾಗುವುದುಂಟು. ತನ್ನ ಮನೆಯ ಬಾಗಿಲಿಗೇ ಬಂದ ಶಾಮರಾಯರನ್ನುಕಂಡ ವೀರಯ್ಯ"ಬಂದ್ರ್ಯಾ"

ಎಂದು ಕೈ ಮುಗಿದು, " ಮಾದೇವಿ, ಮಂದಲ್ಗೆ ತೆಕ್ಕೊಂಡು ಬಮ್ಮೇ " ಎಂದು ಮಗಳನ್ನು ಕೂಗಿ ಹೇಳಿದನು. ತಂದೆಯೂ, ಮಗನೂ, ಈಗ ಕುಳಿತುಕೊಂಡರು. " ಚಿಕ್ಕಯ್ನವ್ರು ಬಂದವ್ರೆ ಪಯಣ ಎಲ್ಲಿವರ್‍ಗೊ " ಎಂದು ವೀರಯ್ಯ ಪ್ರಶ್ನಿಸಿದುದಕ್ಕೆ, ಶಾಮರಾಯರು" ಮೈಸೂರುವರೆಗೆ ಹೋಗಿದ್ದು ಬರ್‍ತೇವೆ. ದಾಹ ಜಾಸ್ತಿಯಾಗಿತ್ತು; ಸ್ವಲ್ಪ ಮಜ್ಜಿಗೆ ಕುಡಿದು ಹೋಗೋಣವೆಂದು ಬಂದೆ " ಎಂದರು. " ಅದಕ್ಕೇನಂತೆ ಸ್ವಾಮಿ. ಈರುಳ್ಳಿ ಹಾಕ್ಬೋದಾ," ಎಂದು ವೀರಯ್ಯ ಕೇಳಿದುದಕ್ಕೆ, ಆಗಲಿ ಎಂದು ಸೂಚಿಸುವಂತೆ ರಾಮು ತಲೆಯಲ್ಲಾಡಿಸಲು, ಎರಡೂವರೆ ಗೇಣುದ್ದದ ಪಾತ್ರೆಯೊಂದರಲ್ಲಿ ತುಂಬ ಮಜ್ಜಿಗೆ ಹಾಕಿ, ನಿಂಬೆ ಹಣ್ಣಿನ ರಸವನ್ನು ಅದಕ್ಕೆ ಹಿಂಡಿ, ಸಣ್ಣ ಸಣ್ಣದಾಗಿ ಈರುಳ್ಳಿ ಹೆಚ್ಚಿ ಹಾಕಿ, ಎರಡು ಲೋಟದ ಸಹಿತ ವೀರಯ್ಯ ಅವರ ಮುಂದೆ ತಂದಿಟ್ಟನು. ತಂದೆಯೂ, ಮಗನೂ, ಎರಡೆರಡು ಲೋಟಾ ಮಜ್ಜಿಗೆ ಕುಡಿದು ಆಯಾಸ ತೀರಿಸಿಕೊಂಡರು. ಪಟ್ಟಣಿಗರಿಗೆ, ಸೋಡಾ, ಕ್ರಷ್, ಹೇಗೋ ಹಾಗೆ, ಹಳ್ಳಿಗರಿಗೆ ಮುಖ್ಯವಾದ ಪಾನೀಯ ಮಜ್ಜಿಗೆ. ಹೋಟಲುಗಳಿಗೆ ಹೋಗಿ ಬಾದಾಮ್ ಖೀರು, ಅಂಥಾಖೀರು ಇಂಥಾಖೀರು ಎಂದು ಕುಡಿಯುತ್ತೀರಿ. ಆದರೆ ಈರುಳ್ಳಿ ನಿಂಬೆಹಣ್ಣಿನ ರಸ ಬೆರೆಸಿದ ಮಜ್ಜಿಗೆ ಕುಡಿದು ನೋಡಿ, ಆಯಾಸ ಹೇಗೆ ಪರಿಹಾರವಾಗುತ್ತದೆಂದು. ಷೋಕು ಥಂಬಗಳಿಂದ ನೀವು ಕಾಲ ಕಳೆಯುತ್ತೀರಿ. ಆದರೆ ಹಳ್ಳಿಗರ ದೇಹಬಲ ಖಂಡಿತ ನಿಮಗಿಲ್ಲ. ಬರೇ ಬಟ್ಟೆ ಜಬರ್ದಸ್ತು ನಿಮ್ಮದು. ಆರೋಗ್ಯದ ವಿಚಾರವಾಗಿ ಉದ್ದುದ್ದ ಭಾಷಣ ಮಾಡುತ್ತೀರಿ, ಲೇಖನ ಬರೆಯುತ್ತೀರಿ. ಆದರೆ ಆರೋಗ್ಯ ಶಾಸ್ತ್ರದ ಗಂಧವನ್ನೇ ಅರಿಯದ ಹಳ್ಳಿಗರು ಎಷ್ಟೊಂದು ಧಡೂತಿಗಳಾಗಿದ್ದಾರೆ. ಇರಲಿ,-ವಿಶ್ರಮಿಸಿದನಂತರ ತಂದೆಯೂ, ಮಗನೂ, ವೀರಯ್ಯನಿಗೆ ಹೇಳಿ ಹೊರಟರು. ಅವರು ಚಾಮರಾಜ

ನಗರ ಸೇರುವಾಗ ಸಂಜೆ ನಾಲ್ಕೂವರೆ ಘಂಟೆಯಾಗಿತ್ತು. ಮೈಸೂರಿಗೆ ಆರು ಘಂಟೆಗೆ ರೈಲು ಹೊರಡುವುದರಿಂದ, ಇನ್ನೂ ಬಹಳ ಹೊತ್ತಿದೆಯೆಂದು, ಪಕ್ಕದ ಕಾಫಿ ಹೋಟಲಿಗೆ ಹೋಗಿ ತಿಂಡಿತಿಂದು, ಐದೂ ಕಾಲು ಘಂಟೆಗೆಲ್ಲ ಅವರು ಸ್ಟೇಷನ್ ಸೇರಿದರು.

## ೩೭

ಲಕ್ಷ್ಮಿ ಇಂದು ಉತ್ಸಾಹದಿಂದಲೇ ಇದ್ದಳು. ಜಾನಕಮ್ಮನವರು ಕಂಭ ಒರಗಿಕೊಂಡು ಕುಳಿತು, ದೇವರ ಮುಂದಿನ ದೀಪಗಳಿಗೆ ಹಾಕಲೆಂದು, ಹತ್ತಿಯಿಂದ ಬತ್ತಿ ಹೊಸೆಯುತ್ತಾ, ಕುಳಿತಿದ್ದರು. “ ನೀನೂ ಬಾರೆ ಲಕ್ಷ್ಮಿ, ಬೇಗ ಮುಗಿಸೋಣ ” ಎಂದವರು ಕೂಗಿದೊಡನೆ, ಜಿಂಕೆಯಂತೆ ಹಾರುತ್ತ ಲಕ್ಷ್ಮಿ ತಾಯಿಯ ಬಳಿ ಬಂದು ಕುಳಿತಳು. ಅಷ್ಟರಲ್ಲಿ ಊರ ಬಸಪ್ಪ ಅಲ್ಲಿಗೆ ಬಂದನು. “ ಬಾ, ಬಸಪ್ಪ ” ಎಂದು ಜಾನಕಮ್ಮನವರು ಅವನನ್ನು ಆದರದಿಂದ ಬರಮಾಡಿಕೊಂಡರು. ಬಸಪ್ಪ ಊರ ಗೌಡ ; ನಾಲ್ಕು ಮಂದಿಗೆ ಬೇಕಾದವನು ; ಶಾಮರಾಯರಿಗೆ ಅಂತರಂಗ ಕಾರ್ಯದರ್ಶಿ ಇದ್ದ ಹಾಗೆ. “ ಕುಳಿತುಕೋ ” ಎಂದಂದಮೇಲೆ ಅವನು ಕುಳಿತುಕೊಂಡನು. “ ಒಡೇರ್ರು ಎಲ್ಲವ್ವಾ ಕಾಣೆ ” ಎಂದವನಂದಾಗ ಜಾನಕಮ್ಮನವರು “ ಅವರಿಲ್ಲ ಮೈಸೂರಿಗೆ ಹೋಗಿದ್ದಾರೆ ” ಅಂದರು. “ ರಾಮಪ್ನವ್ರು ” ಎಂದು ಪ್ರಶ್ನಿಸಿದುದಕ್ಕೆ, “ ಅಪ್ಪ, ಮಗ ಇಬ್ಬರೂ ಹೋಗಿದಾರೆ” ಎಂದರವರು. ಸ್ವಲ್ಪ ಹೊತ್ತು ಅದೂ ಇದೂ ಮಾತಾಡುತಿದ್ದು ಬಸಪ್ಪ “ ಅದ್ಯಾನವ್ವ ಈಗ ಇಬ್ಬರಿಗೂ ಕೆಲ್ಸ ” ಎಂದು ಕೇಳಿದನು. ಜಾನಕಮ್ಮನವರು ವರನೊಬ್ಬನನ್ನು ಗಳಿಸಲು ಮೈಸೂರಿಗೆ ತೆರಳಿರುವುದಾಗಿ ತಿಳಿಸಿ ಸಂಗತಿಯನ್ನೆಲ್ಲ ವಿವರಿಸಿ ಹೇಳಿದರು.

ಎಲ್ಲವನ್ನು ಕೇಳಿ ಮುಗಿಸಿದ ಮೇಲೆ ಬಸಪ್ಪ "ಹಾಗ್ಯಾ-ಲಕ್ಷಮ್ಮವ್ರ ಮನೆಬಿಟ್ಟು ಆಚೆಗೆ ತಳ್ಬೇಕೂಂತ, ಏರ್ಪಾಡು ಮಾಡ್ತಿದೀರಿ ಅನ್ನಿ" ಎಂದಾಗ ಲಕ್ಷ್ಮಿಗೂ ಸಹ ನಗುಬಾರದೆ ಇರಲಿಲ್ಲ. ನಗುವಿನ ಲಹರಿ ಹಾಯ್ದಮೇಲೆ ಜಾನಕಮ್ಮನವರು "ಏನು ವಿಷಯ ಬಸಪ್ಪ, ಎಲ್ಲಿ ಬಂದಿದ್ದೆ ?" ಎಂದು ಕೇಳಿದರು. ಅದಕ್ಕವನು "ಊರವರನ್ನು ಸೇರಿಸಿ ನ್ಯಾಯಕೇಳಬೇಕಾಗಿರುವುದಾಗಿಯೂ, ಮಲ್ಲೇಶ್ವರನ ಗುಡಿಯನ್ನು ಕಟ್ಟಲು ಒಬ್ಬರಿಗೊಬ್ಬರು ತಕರಾರು ಮಾಡುತ್ತಿರುವುದಾಗಿಯೂ," ತಿಳಿಸಿದನು. ನ್ಯಾಯವೆಂದರೆ ಗ್ರಾಮದ ಎಲ್ಲ ರೈತರುಗಳೊಂದಿಗೆ, ಊರಗೌಡ, ಪಟೇಲ, ಶಾನುಭೋಗ, ಎಲ್ಲಸೇರಿ, ನಿರ್ಣಯವನ್ನು ಅಂಗೀಕರಿಸಿ, ತಪ್ಪಿದ್ದ ವರನ್ನು ಶಿಕ್ಷಿಸಿ ಬಂದೋಬಸ್ತು ಮಾಡುವುದು. ಇದು ಹಳ್ಳಿ ಗಳಲ್ಲಿ ನಡೆಯುವ ಒಂದು ವಿಶಿಷ್ಟ ಪದ್ಧತಿ. ಲಕ್ಷ್ಮಿ "ಅದಕ್ಕೇ ನಂತೆ ಬಸಪ್ಪ, ನಾನೇ ನ್ಯಾಯ ತೀರಿಸುತ್ತೇನೆ. ಅಪ್ಪನಿಗಿಂತ ನಾನೇ ನ್ಯಾಯ ಚೆನ್ನಾಗಿ ಬಲ್ಲೆ" ಎಂದಳು. "ಆಗಲಿ ತಾಯಿ. ಸಂಜೆ ಎಲ್ರೂನ್ನು ಸೇರಿಸಿ ಬುಡ್ತೀನಿ" ಎಂದವನು ನಕ್ಕು ನುಡಿ ದನು. ಇಷ್ಟರಲ್ಲಿ ಹೊಲಕ್ಕೆ ಗರಿಕೆ ಶೋಧಿಸಲು ಹೋಗಿದ್ದ ನಾಲ್ಕಾರು ಆಳುಗಳು ಗುದ್ದಲಿಗಳನ್ನು ತಂದು ಪಡಸಾಲೆಯ ಮೇಲಿಟ್ಟು ದೂರ ನಿಂತರು. ಅವರೆಲ್ಲರೂ ಹರಿಜನರು. ದೂರ ನಿಲ್ಲಬೇಕಲ್ಲವೆ? ನಮ್ಮನ್ನು ಕಂಡರೆ ಸಾಕು ಒಂದು ಮಾರು ಬಳಸಿಕೊಂಡು ಹೋಗುತ್ತಾರೆ. ಮೈಲಿಗೆಯಾಗುತ್ತದೆಂದು ಬಗೆದು, ಅವರಷ್ಟು ದೂರ ಹೋಗುತ್ತಾರೆಂದು ನೀವು ನೆನಸಿ ಕೊಂಡಿದ್ದೀರೇನೋ ? ನಾನು ಹಾಗೆ ನೆನೆಸಿಲ್ಲ. ಮಾನವರಲ್ಲೆ ಭೇದಭಾವವೆಣಿಸುವ ನಮ್ಮಂಥ ಮೂರ್ಖರ ಸಹವಾಸದಿಂದ, ತಮಗೂ ಸಂಕುಚಿತ ಬುದ್ಧಿ ಬರಬಾರದೆಂದೇ, ನಮ್ಮನ್ನು ಕಂಡರೆ ಅವರುಗಳು ದೂರ ದೂರ ಹೋಗುತ್ತಾರೆಂದು ನನ್ನ ಭಾವನೆ. ಲಕ್ಷ್ಮಿ ಅವರೆಲ್ಲರಿಗೂ ಎಲೆ ಅಡಿಕೆ ತಂದುಕೊಟ್ಟಳು.

"ನಾಳೆಗೂ ಬನ್ನಿರಪ್ಪಾ, ತಪ್ಪಿಸಿಕೊಳ್ಳಬೇಡಿ" ಎಂದು ಕೂತಲ್ಲಿಂದಲೇ ಜಾನಕಮ್ಮನವರು ಕೂಗಿ ಹೇಳಿದರು. "ಆಗಲಿ ತಾಯಿ ಬರ್ತೀವಿ" ಎಂದೆಂದು ಅವರೆಲ್ಲರೂ ಹೊರಟರು. "ನಾ ಕೇಳ್ದಿದ್ರೆ ಯಲಡ್ಕೆ ಕೊಡ್ಬೇಡ್ವಾ, ಲಕ್ಷ್ಮವ್ವ. ಆದ್ಯಾಕ ಜಿಪ್ಣಾಟ ಇಷ್ಟು ಕಲ್ತುಬುಟ್ರಿ. ಗಂಡ್ನ ಮನ್ಗೆ ಹೋಗದ್ಬೋಗ್ತಾ, ಸ್ವಲ್ಪ ಧಾರಾಳ್ವಾಗೇ ಹೋಗಿ" ಎಂದು ಬಸಪ್ಪ ನುಡಿದಾಗ, ಜಾನಕಮ್ಮನವರು ಮುಗುಳ್ನಗೆ ನಕ್ಕರು. ಲಕ್ಷ್ಮಿಯೂ ನಗುತ್ತ "ಬಸಪ್ಪ, ನಿನಗೆ ಬೇಕಾದುದನ್ನು ಕೇಳು ಕೊಡುತ್ತೇನೆ. ಸುಮ್ಮನೆ ಹಾಸ್ಯ ಮಾಡಬೇಡ" ಎಂದು ಹೇಳಿ, ಸುಣ್ಣದ ಸಹಿತ ಎಲೆ ಅಡಿಕೆ ತಂದು ಮುಂದಿಟ್ಟಳು. ಬಸಪ್ಪ ಅದನ್ನು ಸ್ವೀಕರಿಸಿ ಹೊರಟು ಹೋದನು.

## ೩೮

ರಾಮುವೂ, ಶಾಮರಾಯರೂ, ಅಂದು ಗುಂಡೂರಾಯರ ಮನೆಸೇರುವಾಗ ರಾತ್ರಿ ಒಂಭತ್ತು ಘಂಟೆಯಾಗಿತ್ತು. ಬಂದವರನ್ನು ಪತಿಪತ್ನಿಯರು ಉತ್ಸಾಹದಿಂದ ಸ್ವಾಗತಿಸಿದರು. ಬೆಳಗಾಗುತಲೆ ಎದ್ದು ಗುಂಡೂರಾಯರು ಧನಪಾಲಶೆಟ್ಟರ ಮನೆಗೆ ಹೋಗಿ, ನಡೆದ ಸಂಗತಿಯನ್ನು ವಿವರಿಸಿ, ರಾಘುವನ್ನು ಈದಿನ ಮನೆಗೆ ಕಳುಹಿಸಿಕೊಡಿರೆಂದು ಹೇಳಿ ಬಂದರು. ಗುಂಡೂರಾಯರಂತೂ ಮಗನನ್ನು ಕಂಡು ನೋಡಿ ಮಾತಾಡಿಸುಹಾಗಿರಲಿಲ್ಲ. ಸಂಜೆ ಕೆಲಸ ಮುಗಿದಮೇಲೆ, ಅವನು ಸರೋಜಳೊಂದಿಗೆ, ಅವಳ ಮನೆಗೆ ಹೋಗಿಬಿಡುತಿದ್ದನು. ಇದೆಲ್ಲವೂ ಗುಂಡೂರಾಯರಿಗೆ ಚೆನ್ನಾಗಿ ತಿಳಿದಿದ್ದಿತು. ಅವಳ ಮನೆಗೆ ಇವರು ಹೋಗಿ ಅವನನ್ನು ಕರೆದಾರೇ? ಅದಕ್ಕೇ ಅವರು ಶೆಟ್ಟರನ್ನು ಹಿಡಿದಿದ್ದರು. ರಾಘು ಶೆಟ್ಟರ ಮಾತನ್ನುಮೀರುತ್ತಿರಲಲ್ಲ. ಧಣಿಯನ್ನು

ಅವನು ಬಹಳ ನಂಬಿಕೊಂಡಿದ್ದನು. ಈಗ ಘಂಟೆ ಎಂಟು ಹೊಡೆಯಿತು. ಕಾಫಿ ತಿಂಡಿಗಳೆಲ್ಲ ಆಗಲೇ ಮುಗಿದಿದ್ದುವು. ಇಷ್ಟರಲ್ಲಿ ಕುಟ್ಟಪ್ಪನೂ ಗುಂಡೂರಾಯರ ಮನೆಗೆ ಬಂದು ಸೇರಿದನು. ಹರಟೆ ಪ್ರಾರಂಭವಾಯಿತು. ಹಳೆಯ ಸ್ನೇಹಿತರಲ್ಲವೇ ? ರಾಘುವಿಗೆ ನೀವು ಹೇಳಿಕಳಿಸಲೇ ಇಲ್ಲವೇ? ಎಂದು ಕುಟ್ಟಪ್ಪ ರಾಯರನ್ನು ಪ್ರಶ್ನಿಸಿದನು. ಈಗ ಬರುತ್ತಾನೆ ಎಂದವರು ಉತ್ತರವಿತ್ತರು. "ಏನು ಕೆಲಸದಲ್ಲಿದ್ದಾನೊ ?" ಎಂದು ಶಾಮರಾಯರು ಪ್ರಶ್ನೆ ಹಾಕಿದರು. "ಮಾರುತಿ ಊದುಬತ್ತಿ ಕಂಪೆನಿಯಲ್ಲಿ ಮೇನೇಜರಾಗಿದ್ದಾನೆ" ಎಂದು ಶಾರದಮ್ಮನವರು ನುಡಿದರು. ಹೇಗೂ ಮಗನನ್ನು ಹೆಚ್ಚಿಸಿ ಮಾತಾಡುವುದೆಂದರೆ ತಾಯಿಗೆ ಆನಂದವಲ್ಲವೇ? ಸರಿಯಾಗಿ ಒಂಭತ್ತು ಘಂಟೆಗೆ ರಾಘು ಬಂದನು. "ಏನಯ್ಯಾ ನೀನೇ ಅತಿಥಿಯಂತೆ, ನಿನ್ನನ್ನು ಬರಮಾಡಿಕೊಳ್ಳಲು, ಬಹಳ ಸಾಹಸಪಡಬೇಕಾಗಿದೆಯಲ್ಲಾ" ಎಂದು ಕುಟ್ಟಪ್ಪನಂದಾಗ, ರಾಘು ಸ್ವಲ್ಪ ನಕ್ಕು ಒಳಗೆ ಬಂದು ಕುಳಿತನು. ಹಿರಿಯರುಗಳೆಲ್ಲ ಮೂಗಿಗೆ ಒಂದೊಂದು ಚಿಟಕಿ ನಸ್ಯ ಏರಿಸಿ, ವಿವಾಹದ ವಿಷಯವನ್ನು ಕುರಿತು ಚರ್ಚಿಸಿ ಮಾತನಾಡುತಿದ್ದರು. ಇದರಲ್ಲಿ ಮಾತನಾಡದೆ ಕುಳಿತಿದ್ದವರು ಇಬ್ಬರೇ. ರಾಘು ಮತ್ತು ರಾಮು. ಇಷ್ಟರಲ್ಲಿ ಮಧ್ಯಾಹ್ನವಾದುದರಿಂದ, ಅಡಿಗೆಯೂ ಸಿದ್ಧವಾಗಿತ್ತು. ಗುಂಡೂರಾಯರ ಬಲವಂತದ ಮೇಲೆ, ಕುಟ್ಟಪ್ಪನೂ ಆದಿನ ಊಟಕ್ಕೆ ಕುಳಿತನು. ಬಿಸಿಲು ತಂಪಿದಮೇಲೆ, ಎರಡು ಘಂಟೆ ಕಳೆದ ಮೇಲೆ, ಎಲ್ಲರೂ ಊರುಸುತ್ತಿಕೊಂಡು ಬರುವುದೆಂದು ತೀರ್ಮಾನವಾಯಿತು. ರಾಮು ತಾನು ಚಾಮುಂಡಿ ಬೆಟ್ಟ ನೋಡದಿದ್ದುದರಿಂದ, ಮೊದಲು ಅಲ್ಲಿಗೇ ಹೋಗಬೇಕೆಂದು ಹೇಳಿದ್ದನು. ಅವನ ಕೋರಿಕೆಯಂತೆ ಮೊದಲೇ ಬೆಟ್ಟಕ್ಕೆ ಹತ್ತಲಾಯಿತು. ಕುಟ್ಟಪ್ಪನು ದೇಹವನ್ನು ಜಗ್ಗಿಸಿ ಜಗ್ಗಿಸಿ ಹತ್ತುತಿದ್ದನು. ದೇವಿಯ ಸಂದ

ರ್ಶನ ಪಡೆದಮೇಲೆ, ಎಲ್ಲರೂ ಬೆಟ್ಟದಿಂದ ಕೆಳಗಿಳಿದರು. ಬೆಟ್ಟದ ತುದಿಯಲ್ಲಿದ್ದಾಗ ಮೈಸೂರಿನ ಅಂದವನ್ನು ನೋಡಿ ರಾಮು ಹರ್ಷಿತನಾದನು. ಶಾಮರಾಯರು ಎಷ್ಟೋ ತಡವೆ ದೇವಿಯ ದರ್ಶನ ಪಡೆದು ಹೋಗಿದ್ದರು. ರಾಮು ಇದೇ ಪ್ರಪಥಮ ಮೈಸೂರಿಗೆ ಕಾಲಿಟ್ಟುದು. ಅನಂತರ ಅಲ್ಲಿಂದೆಲ್ಲರೂ, ಮೃಗಾಲಯಕ್ಕೆ ನಡೆದರು. ಚಿತ್ರವಿಚಿತ್ರ ಪ್ರಾಣಿಗಳು ಬಂಧಿತ ವಾಗಿ ಮಾನವನ ಕೈಯಲ್ಲಿ ಸಿಕ್ಕಿಬಿದ್ದಿದ್ದುವು. ರಾಮುವಿಗೆ ಇದೇನೂ ಅಷ್ಟು ಹಿಡಿಸಲಿಲ್ಲ. ನೀರ್ನುದೆರೆ, ನೀರಾನೆ, ಮುಂತಾದ ತಾನು ನೋಡದಿದ್ದ ಕೆಲವು ಪ್ರಾಣಿಗಳನ್ನು ನೋಡಿದನು. ಹಕ್ಕಿ, ಕಪಿ, ಆನೆ, ಹುಲಿ ಮುಂತಾದುವೆಲ್ಲ ಅವನ ಕಾಡಿ ನಲ್ಲಿಲ್ಲವೆ ? ಮುಂದೆ ಕನ್ನಂಬಾಡಿಕಟ್ಟೆ ನೋಡುವುದೆಂದು ತೀರ್ಮಾನವಾಯಿತು. ರಾಮು ಮಿಗೆಯಾದ ಸಂತಸಪಟ್ಟುದು ಇಲ್ಲೇ. ವಿವಿಧ ವರ್ಣಗಳ, ಮನೋರಂಜಕವಾದ, ಆ ನೀರ ಬುಗ್ಗೆಗಳನ್ನು ನೋಡಿ ಹಿಗ್ಗಿದನು. ಬೃಂದಾವನವೆಂದು ಅದಕ್ಕೆ ಹೆಸರಿಟ್ಟಿರುವುದು ಸರಿಯಾಗಿದೆಯೆಂದುಕೊಂಡನು. ಇವರೆಲ್ಲ ಮನೆ ಸೇರುವಾಗ ರಾತ್ರಿ ಏಳೂವರೆಯಾಗಿತ್ತು. ಕುಟ್ಟಪ್ಪ ದಾರಿಯಲ್ಲಿ ಬರುವಾಗಲೇ, ಕಂಪೆನಿ ಬೆಳಗ್ಗೆ ಎಂಟು ಘಂಟೆಗೆ ತೆರೆಯುವುದರಿಂದ, ಆ ದಿನ ಮನೆಯಲ್ಲೆ ಮಲಗಿದ್ದು, ಬೆಳಗ್ಗೆ ಕಾಫಿ ಮುಗಿಸಿ ಹೋಗಬೇಕೆಂದು ರಾಘುವಿಗೆ ಆಜ್ಞೆಮಾಡಿದ್ದನು. ಬಂದವರನ್ನು ಬಿಟ್ಟುಹೋಗುವುದು ಉಚಿತವಲ್ಲವೆಂದು ನುಡಿ ದಿದ್ದನು. ಅವನ ಆಜ್ಞೆಯನ್ನು ಮೀರುವ ಸಾಹಸವನ್ನು, ಮಾಡಲು ರಾಘುವಿಗೆ ಸಾಧ್ಯವಾಗಲಿಲ್ಲ. ಆದರೆ ಸರೋಜ ಏನೆಂದುಕೊಂಡಾಳೋ ಎಂದು ಮನಸ್ಸು ಮಾತ್ರ ಹೊಯ್ದಾಡು ತಿತ್ತು. ರಾತ್ರಿ ಊಟವೆಲ್ಲ ಮುಗಿದ ಮೇಲೆ ಎಲ್ಲರು ಮಲಗಿ ದರು. ಮಾರನೆಯ ದಿನ ಹನ್ನೆರಡು ಘಂಟೆ ರೈಲಿಗೇ ಊರಿಗೆ ಪ್ರಯಾಣಮಾಡುವುದಾಗಿ ಶಾಮರಾಯರು ನುಡಿದಿದ್ದರು.

ಗುಂಡೂರಾಯರೂ ಶಾರದಮ್ಮನವರೂ, ಮಗನ ಕೂಡ ತಿಂಗಳ ಅಂತ್ಯದಲ್ಲಿ ಪಾಳ್ಯಕ್ಕೆ ಬರಬೇಕೆಂದು ಮಾತುಕತೆಗಳ ನ್ನಾಡಿಕೊಂಡರು. ಬೆಳಗ್ಗೆ ಕುಟ್ಟಪ್ಪ, ಶಾಮರಾಯರನ್ನೂ, ರಾಮುವನ್ನೂ, ತನ್ನ ಮನೆಗೆ ಕರೆದುಕೊಂಡು ಹೋದನು. ಕಾಫಿ ತಿಂಡಿಗಳನ್ನು ಅಲ್ಲಿಯೂ ಕೊಡಲಾಯಿತು. " ಹೊಟ್ಟೆ ಹಿಡಿಯದಲ್ಲಾ " ಎಂದು ಶಾಮರಾಯರೆಂದಾಗ, " ಹಿಡಿಸ ಬೇಕು " ಎಂದು ಕುಟ್ಟಪ್ಪ ನಕ್ಕು ನುಡಿದನು. ಕುಟ್ಟಪ್ಪ ಒಂದು ಕೈಚೀಲದಲ್ಲಿ ಕಿತ್ತಿಳೆ, ಸೇಬು, ಚಕ್ಕೋತ ಇವನ್ನೆಲ್ಲ ತುಂಬಿಸಿ "ಲಕ್ಷ್ಮಿಗೆ ಕೊಡು ರಾಮು" ಎಂದು ಅವನ ಕೈಗಿತ್ತನು. "ಇವೆಲ್ಲಾ ಏನು?" ಎಂದು ಶಾಮರಾಯರು ಪ್ರಶ್ನಿಸಿದುದಕ್ಕೆ " ಹಣ್ಣು ನಾನು ಕೊಟ್ಟೇಂತ ಲಕ್ಷ್ಮಿಗೆ ಹೇಳಿ "ಎಂದವನೆಂದನು. ಶಾಮರಾಯರು ಕುಟ್ಟಪ್ಪನ ಪತ್ನಿ ಗಿರಿಜಮ್ಮನನ್ನು " ನೀವು ಲಗ್ನಕ್ಕೆ ಬರದೆ ಉಳಿದುಕೊಂಡು ಬಿಟ್ಟೇರಿ ಜೋಕೆ " ಎಂದು ಎಚ್ಚರಿಸಿದಾಗ, " ನೀವು ಕರೆಯದಿದ್ದರೂ ಖಂಡಿತ ನಾವು ಬರು ತ್ತೇವೆ ಸ್ವಾಮಿ "ಎಂದು ಕುಟ್ಟಪ್ಪ ನುಡಿದನು. ರೈಲಿಗೆ ಹೊತ್ತಾಗು ವುದೆಂದು ಗುಂಡೂರಾಯರ ಮನೆಗೆ ಮೂವರೂ ಬೇಗ ಬಂದರು. ಆಗಲೇ ಅಲ್ಲಿ ಅಡಿಗೆಯೂ ಸಿದ್ಧವಾಗಿತ್ತು. ಬೆಳಗಿನಿಂದ ಈವರೆಗೆ ಎರಡು ತಡವೆ ಕಾಫಿ ತಿಂಡಿ ತಿಂದು, ಹನ್ನೊಂದು ಘಂಟೆಗೆ ಊಟ ಸೇರುತ್ತದೆಯೇ ? ಏನೋ, ಅಷ್ಟು ಇಷ್ಟು ಬಾಯಿಗೆ ಹಾಕಿದರು. ಸ್ಟೇಷನ್ನಿಗೆ ಹೊರಟುದಾಯಿತು. ರಾಮು ತಂಗಿಗೆಂದು ಟೇಪ್, ಹೇರಾಯಿಲ್, ಮತ್ತಿತರ ಚಿಲ್ಲರೆ ಸಾಮಾನುಗಳನ್ನು ತೆಗೆದುಕೊಂ ಡನು. ಹಿಂದಿನ ದಿನ ಅವನ್ನೆಲ್ಲ ತೆಗೆಯಲು ಅವನು ಮರೆತಿದ್ದನು. ಕುಟ್ಟಪ್ಪನೂ, ಗುಂಡೂರಾಯರೂ, ಶಾಮರಾಯರೊಂದಿಗೆ ಸ್ಟೇಷನ್ನಿಗೂ ಸಹ ಬಂದರು. ರಾಘು ಬೆಳಗ್ಗೆಯೇ ಕಾಫಿಕುಡಿದು, ಕಂಪೆನಿಗೆ ಹೊರಟು ಹೋಗಿದ್ದನು. ಅತಿಥಿಗಳಿಬ್ಬರೂ ರೈಲು ಏರಿದನಂತರ, ರಾಯರೂ ಕುಟ್ಟಪ್ಪನೂ ಮನೆಗೆ ಹಿಂದಿರುಗಿದರು.

## ೩೯

ತಂದೆಯೂ ಮಗನೂ ಊರಿಗೆ ಬಂದು ಮನೆ ಸೇರುವಾಗ ರಾತ್ರಿ ಒಂಭತ್ತು ಘಂಟೆಯಾಗಿತ್ತು. ಇನ್ನಾದಿನ ಬರುವುದಿಲ್ಲವೆಂದು ಜಾನಕಮ್ಮನವರು, ಹೊತ್ತಿಗೆ ಮುಂಚೆಯೇ ಹಸುಗಳನ್ನು ಕರೆದು, ಆಳುಗಳಿಂದ ಕರುಗಳನ್ನು ಮನೆಗೆ ಕೂಡಿಸಿದ್ದರು. ಲಕ್ಷ್ಮಿಯ ಸ್ನೇಹಿತೆಯರೆಲ್ಲ ಏಳು ಘಂಟೆಯವರೆಗೂ ಅಲ್ಲೇ ಇದ್ದು, ಹರಟೆಹೊಡೆದು ಹೋಗಿದ್ದರು. ಆಗ ತಾಯಿಯೂ ಮಗಳೂ ಊಟ ತೀರಿಸಿಕೊಂಡು ದೀಪವನ್ನು ಸಣ್ಣದು ಮಾಡಿ ಮಲಗಿಕೊಂಡರು. ಲಕ್ಷ್ಮಿ ದೊಡ್ಡವಳಾಗಿದ್ದರೂ ತಾಯಿಯನ್ನು ಸೇರಿಕೊಂಡು ಮಲಗುವುದೇ ಅವಳಿಗೆ ವಾಡಿಕೆಯಾಗಿದ್ದಿತು. "ನಿನ್ನ ಭಾಗ್ಯ ಕಣಮ್ಮ, ಹೋದ ಕಾರ್ಯ ಜಯವಾಗಲಿ "ಎಂದು ಮಗಳ ತಲೆಯನ್ನು ಸವರುತ್ತ ಜಾನಕಮ್ಮನವರು ನುಡಿದರು. ಲಕ್ಷ್ಮಿಯಿಂದ ಏನೊಂದು ಮಾತನಾಡಲೂ ಸಾಧ್ಯವಾಗಲಿಲ್ಲ. ಬೇರೆ ವಿಷಯಗಳಾದಲ್ಲಿ ಅವಳು ಏನೇನೆಲ್ಲ ಹರಟೆ ಹೊಡೆಯುತಿದ್ದಳು. ಆದರೆ " ಮದುವೆ " ಸಮಾಚಾರವೆಂದೊಡನೆ, ಬಾಯಿ ಮುಚ್ಚಿಕೊಂಡು ತೆಪ್ಪಗಿರುತಿದ್ದಳು. ಜಾನಕಮ್ಮನವರಿಗೆ ತುಸು ನಿದ್ದೆ ಬಂದಿತೆನ್ನಬಹುದು. ಲಕ್ಷ್ಮಿಗಿನ್ನೂ ನಿದ್ದೆ ಬಂದಿರಲಿಲ್ಲ. ತನ್ನ ಅಗಲವಾದ ಕಣ್ಣುಗಳನ್ನು ಮುಚ್ಚುತ್ತಲೂ, ಬಿಡುತ್ತಲೂ, ಅವಳು ಮಿಟಿಮಿಟಿಯೆನ್ನುತ್ತಿದ್ದಳು. ಅಷ್ಟರಲ್ಲಿ ಹೊರಗೆ ಬಾಗಿಲು ತಟ್ಟಿದ ಶಬ್ದ ಕೇಳಿಸಿತು. "ಅಮ್ಮ, ಅಪ್ಪ ಬಂದಾಯ್ತು" ಎಂದು ಕೂಗುತ್ತ ದೀಪವನ್ನು ದೊಡ್ಡದು ಮಾಡಿ, ಸಡಗರದಿಂದ ಎದ್ದು ಲಕ್ಷ್ಮಿ ಬಾಗಿಲನ್ನು ತೆರೆದಳು. ಜಾನಕಮ್ಮನವರೂ ಈಗ ಎದ್ದು ಹೊರಬಂದರು. "ಈ ಆನೆ ಗಲಾಟೆಯಲ್ಲಿ ಇಷ್ಟು ಹೊತ್ತಿನಲ್ಲಿ ಬರುತ್ತೀರಲ್ಲಾ, ಚಾಮರಾಜನಗರದಲ್ಲಿ ತಂಗಿದ್ದು, ನಾಳೆ ಬಂದಿದ್ದರೆ ಏನಾಗುತಿತ್ತು" ಎಂದು ಜಾನಕಮ್ಮನವರು

ಆಕ್ಷೇಪಿಸಿದರು. "ಬೆಳಕೂರಿನ ಆಳುಗಳು ಸಂಗಡಕ್ಕೆ ದೊರೆತು ದರಿಂದ ಬರಲಾಯಿತೆಂ" ದು ರಾಮು ಉತ್ತರಕೊಟ್ಟನು. ಕಾಲಿಗೆ ನೀರು ಕೊಟ್ಟುದಾಯಿತು. ಲಕ್ಷ್ಮಿ ಗಂಟು ಪೊಟ್ಟಳಗಳನ್ನು ಒಳಗೆ ಬೆಂಚಿನ ಮೇಲೆ ತಂದಿಟ್ಟಳು. ದಾರಿಯಲ್ಲಿ ತಿನ್ನಲಿಕ್ಕೆಂದು ನಗರದ ಹೋಟಲ್‌ನಲ್ಲಿ ಉಪ್ಪಿಟ್ಟು ಕಟ್ಟಿಸಿಕೊಂಡು ಬಂದುದಾಗಿಯೂ, ಆದರೆ ತಿನ್ನಲಿಕ್ಕೆ ಸಾಧ್ಯವಾಗಲಿಲ್ಲವೆಂದೂ, ಅನ್ನ ಮಾಡಬೇಕಾಗಿಲ್ಲವೆಂದೂ, ಸ್ವಲ್ಪ ಕಾಫಿಕಾಯಿಸಿದರೆ ಸಾಕೆಂದೂ ರಾಮರಾಯರು ಪತ್ನಿಯ ಕೂಡ ನುಡಿದರು. ಆಗಲೇ ಬಹಳ ಹೊತ್ತಾಗಿದ್ದುದರಿಂದ ಜಾನಕಮ್ಮನವರು ಹಾಲಿಗೆಲ್ಲ ಹೆಪ್ಪು ಹಾಕಿದ್ದರು. "ತಾಳಮ್ಮ ನೋಡಿ ಬರ್ತೀನಿ" ಎಂದು ಲಕ್ಷ್ಮಿ ಲ್ಯಾಂಟ್ರನ್ ತೆಗೆದು ಹೊರಟಾಗ, "ಈಗೆಲ್ಲಿ ಸಿಗುವುದು" ಎಂದು ತಾಯಿ ಆಕ್ಷೇಪಿಸಿದರು. ಲಕ್ಷ್ಮಿ ತಾಯಿಯ ಮಾತನ್ನು ಕಿವಿಗೇ ಹಾಕಿಕೊಳ್ಳದೆ ಭರಭರ ನಡೆದಳು. ಪುಣ್ಯಕ್ಕೇನೊ ಸರಸಳ ಮನೆಯಲ್ಲಿ ಹೆಪ್ಪು ಹಾಕಿರಲಿಲ್ಲ. ಏನೋ ಕಾರ್‍ಯ ನಿಮಿತ್ತ ಅವರ ಮನೆಯವರು ಇನ್ನೂ ಮಾತನಾಡುತ್ತ ಕುಳಿತಿದ್ದುದರಿಂದ ಬಹುಶಃ ಮರೆತಿರಬೇಕು. ಲಕ್ಷ್ಮಿ ಒಂದು ಪಾವು ಹಾಲನ್ನು ಸಾಲ ತೆಗೆದುಕೊಂಡು ಬಂದಳು. "ಲಕ್ಷ್ಮಿಯ ಸಾಮರ್ಥ್ಯ ನೋಡಿದೆಯಮ್ಮಾ" ಎಂದು ರಾಮು ಅಂದಾಗ, ಎಲ್ಲರೂ ನಗು ನಗುತ್ತ ಕೋಣೆಯೊಳಗೆ ನಡೆದರು. ಉಪ್ಪಿಟ್ಟು ಕಟ್ಟಿದ್ದ ಪೊಟ್ಟಳವನ್ನು ಜಾನಕಮ್ಮನವರೇ ಬಿಚ್ಚಿ, ಇಬ್ಬರಿಗೂ ಸಮ ಭಾಗಮಾಡಿದರು. "ಲಕ್ಷ್ಮಿಗೂ ಸ್ವಲ್ಪ ಕೊಡಮ್ಮ" ಎಂದು ರಾಮು ಅಂದಾಗ, ನನಗೆ ಬೇಡವೆಂದಳು. "ಹೋಟೆಲು ಉಪ್ಪಿಟ್ಟು ಕಣೇ, ಬಹಳ ರುಚಿ" ಎಂದು ಅವನು ಆಸೆ ತೋರಿಸಿದುದಕ್ಕೆ, "ನೀನೇ ತಿನ್ನು" ಎಂದವಳು ಪ್ರತ್ಯುತ್ತರ ಕೊಟ್ಟಳು. ಫಲಾಹಾರ ಸೇವಿಸುತ್ತಿರುವಾಗಲೇ ಜಾನಕಮ್ಮನವರು "ಹಣ್ಣೋ ಕಾಯೋ" ಎಂದು ಕೇಳಿದುದಕ್ಕೆ "ಹಣ್ಣು" ಎಂದು ರಾಮು

ಉತ್ತರವಿತ್ತನು. ಜಾನಕಮ್ಮನವರಿಗೆ ಬಹಳ ಹರ್ಷವಾಯಿತೆಂಬುದನ್ನು, ಅವರ ಮುಖವೇ ತೋರಿಸಿಕೊಡುತಿತ್ತು. ಲಕ್ಷ್ಮಿ ಒಂದು ತಡವೆ ತಂದೆಯ ಮುಖವನ್ನೂ ಮತ್ತೊಂದು ತಡವೆ ಅಣ್ಣನ ಮುಖವನ್ನೂ ನೋಡುತ್ತ ಕುಳಿತಿದ್ದಳು. ಶಾಮರಾಯರು ಮೈಸೂರಿನಲ್ಲಿ ನಡೆದ ವಿದ್ಯಮಾನಗಳನ್ನೆಲ್ಲ, ಪತ್ನಿಗೆ ಚಾಚೂ ತಪ್ಪದೆ ಹೇಳಿದರು. "ಹಾಗಾದರೆ ನಿಬಂಧನೆಯಾದ ಹಾಗೆ ಅನ್ನಿ" ಎಂದು ಜಾನಕಮ್ಮನವರು ನುಡಿಯಲು, ಶಾಮರಾಯರು ಹುಂ ಗುಟ್ಟಿದರು. ಇಷ್ಟರೊಳಗೆ ಕಾಫಿಯನ್ನೂ ಕುಡಿದುದಾಯಿತ.. ಲಕ್ಷ್ಮಿ ಎದ್ದು ಬಂದು ಇಬ್ಬರ ಹಾಸಿಗೆಯನ್ನೂ ಹಾಸಿದಳು. ಪ್ರಯಾಣದ ದಣಿವಿನಿಂದ ಮಲಗಿದ ಒಡನೆಯೇ ನಿದ್ದೆಹತ್ತಿ, ತಂದೆಯೂ ಮಗನೂ ಗೊರಕೆ ಹೊಡೆಯಲಾರಂಭಿಸಿದರು.

ಬೆಳಗಿನ ಜಾವದ ಮೊದಲನೇ ಕೋಳಿ ಕೂಗಿತು. ಕತ್ತಲು ನಿಬಿಡವಾಗಿಲ್ಲದಿತ್ತು. ಆಕಾಶದಲ್ಲಿ ಇನ್ನೂ ಅಸಂಖ್ಯಾತ ತಾರೆಗಳು ಮಿನುಗುತಿದ್ದುವು. ಗು, ಗೂ, ಗುಗೂಯೆಂದು ಗೂಗೆಗಳು ಕೂಗಿಕೊಂಡುವು. ಯಾವುದೋ ಒಂದೆರಡು ಪಕ್ಷಿಗಳು ಚೀಂಯ್, ಚೀಂಯ್, ಎಂದು ಹಾರಾಡತೊಡಗಿದುವು. ಜಾನಕಮ್ಮನವರು ಎಲ್ಲರಿಗಿಂತ ಮೊದಲು ಎದ್ದು ನೀರು ಮನೆ ಒಲೆಹಚ್ಚಿ, ಬಾಗಿಲ ಅಂಗಳಕ್ಕೆಲ್ಲ ನೀರು ತಳಿಯಲಾರಂಭಿಸಿದರು. ಸ್ವಲ್ಪ ಹೊತ್ತಿಗೆ ಆ ಕತ್ತಲೂ ಇಲ್ಲ; ಆಕಾಶದಲ್ಲಿನ ನಕ್ಷತ್ರಗಳೂ ಇಲ್ಲ. ಲಕ್ಷ್ಮಿಯೂ ಎದ್ದಳು. "ಇಷ್ಟು ಛಳಿಯಲ್ಲೇಕಮ್ಮಾ ಎದ್ದೆ. ಇನ್ನೂ ಸ್ವಲ್ಪ ಹೊತ್ತು ಮಲಗಿರಬಾರದಾಗಿತ್ತೆ" ಎಂದು ತಾಯಿ ಅನ್ನುತ್ತಿರುವಾಗಲೇ, ಅವಳು ರಂಗೋಲೆ ಬಟ್ಟಲು ಹಿಡಿದು ಹೊರಬಂದಳು. ಚುಕ್ಕಿ ಚುಕ್ಕಿ ಹಾಕಿ ಚಿತ್ರಗಾತಿಯಂತೆ, ಏನೇನೆಲ್ಲ ಹಾವಿನಹಾಗೆ, ಹೂವಿನ ಹಾಗೆ ಅವಳು ರಂಗೋಲೆ ಇಟ್ಟಳು. ಮೂಡಣ ಬಾನಿನ ಬೆಟ್ಟದ ಹಿಂಬದಿಯಲ್ಲಿ

ಅಡಗಿಕೊಂಡಿದ್ದು ಸೂರ್ಯ ದೇವನು ಆಗತಾನೇ ಮೆಲ್ಲಮೆಲ್ಲಗೆ ಬರಲಾರಂಭಿಸಿದನು. ಶಾಮರಾಯರು ಆಗೆದ್ದು ಹೊರಗೆ ಹೋಗಿದ್ದು ಬಂದು, ಸ್ನಾನ ಮಾಡುತಿದ್ದರು. ಸೂರ್ಯೋದಯ ವಾಗಿ ಅರ್ಧತಾಸು ಕಳೆದರೂ, ಛಳಿ ಗಡಗಡನೆ ನಡುಗಿಸುತಿತ್ತು. ಹಸುರು ಹುಲ್ಲಿನ ಮೇಲೆ ಇಬ್ಬನಿ ಉದುರಿತ್ತು. ಸೂರ್ಯ ರಶ್ಮಿ ಮಣಿ ಮಣಿಯಾದ ಆ ಹನಿಗಳ ಮೇಲೆ ಬಿದ್ದು, ನೀಲಿಕೆಂಪು ಬೆರಸಿದ ಒಂದು ಮಿಶ್ರವರ್ಣವಾಗಿ, ನೋಡುವುದಕ್ಕೆ ಬಹಳ ರಮಣೀಯವಾಗಿ ಕಾಣುತಿತ್ತು. ಪ್ರಕೃತಿ ಮಾತೆಯ ಸೊಬಗೇ ಸೊಬಗು. ಆಕಾಶದಲ್ಲಿ ಒಂದೆರಡು ಕಪ್ಪು ಮುಗಿಲುಗಳು ತೇಲು ತಿದ್ದುವು. ಕೆಲಮಂದಿ ಮುದುಕುರುಗಳು ಬಿಸಿಲು ಕಾಯುತ್ತ ಕುಳಿತಿದ್ದರು. ತಲೆಗೆ ವಸ್ತ್ರ ಬಿಗಿದು, ಆಗಲೇ ರೈತ ಹೊಹ್ಹೊ ಎಂದು ಶಬ್ದಮಾಡುತ್ತ ಹೊಲ ಉಳುತಿದ್ದನು. ಅವನು ರಾಗ ವಾಗಿ ಪದ ಎಳೆದಾಗ ಉದಯರಾಗ ಹಾಡಿದಂತೆ, ನಮಗೆ ಭಾಸ ವಾಗುತಿತ್ತು. ಕಾಗೆಗಳು ಮಾತ್ರ ಮನೆಯಿಂದ ಮನೆಗೆ, ಮರದಿಂದ ಮರಕ್ಕೆ ಹಾರಾಡುತ್ತ ಕಾಕಾಯೆಂದು ಕೂಗಿಕೊಳ್ಳು ತಲಿದ್ದುವು. ಕೋಳಿಗಳು ಕೊಕ್ಕೋ ಕೊಕ್ಕೋಯೆಂದು ಕೂಗಿ ಕೊಂಡುವು. ಊರ ಸ್ತ್ರೀಯರು ಕಸಗುಡಿಸಿ, ಗೊಬ್ಬರವನ್ನು ತಿಪ್ಪೆಗೆ ತಂದು ಸುರಿಯುತಿದ್ದರು. ಕೆರೆಯಿಂದ ನೀರು ಹೊತ್ತು ತರಲು ಹತ್ತಾರು ಮಂದಿ ಹೆಂಗಸರು ಒಟ್ಟಿಗೆ ಹೋಗುವಾಗ, ಅವರ ಮಾತುಕತೆ, ಕೈಬಾಯಿ ಕುಣಿಸುವುದು, ಇವೆಲ್ಲವನ್ನೂ ನೋಡಲು ಬಹಳ ಆನಂದವಾಗಿದ್ದಿತು. ಶಾಮರಾಯರು ಆಗಲೇ ಸ್ನಾನ ಮುಗಿಸಿ, ಸಂಧ್ಯಾವಂದನೆಗೆಂದು ಕುಳಿತಿದ್ದರು. ರಾಮು ಇನ್ನೂ ಎದ್ದೇ ಇರಲಿಲ್ಲ. "ಸೋಮಾರಿ ಅಣ್ಣ ಏಳು" ಎಂದು ಅವನ ಹೊದಿಕೆಯನ್ನು ಕಿತ್ತು, ಲಕ್ಷ್ಮಿ ಅವನನ್ನು ಎಬ್ಬಿಸಿದಳು. "ಸೋಮಾರಿ ಅಲ್ಲ, ಎರಡು ಮೈಲಿ ನಡೆದು ನೋಡು ಗೊತ್ತಾ ಗುತ್ತೆ. ಹಾಹ್ಹಾ ಇನ್ನೂ ಛಳಿ ಜಾಸ್ತಿ ಕಣೇ" ಎಂದು ಅವನು

ಮೇಲಕ್ಕೆದ್ದನು. "ನಿನಗೆ ಮಾತ್ರ ಛಳಿ, ಅಪ್ಪನ್ನ ನೋಡು; ಮುದುಕರು, ಆಗಲೇ ಸ್ನಾನ ಮಾಡಿ ಸಂಧ್ಯಾವಂದನೆಗೆಂದು ಕುಳಿತುಬಿಟ್ಟಿದ್ದಾರೆ, ಋಷಿಹಾಗೆ" ಎಂದವಳಂದಳು. "ಮುದಿ ಶರೀರ ಕಣೇ, ಚರ್ಮವೆಲ್ಲ ಬಲಿತುಬಿಟ್ಟಿದೆ. ಛಳಿ ಈಗವರಿಗೆ ತಗಲುವುದಿಲ್ಲ" ಎಂದು ಹೇಳಿ ರಾಮು ನಗುತ್ತ ಹೊರನಡೆದನು. ಲಕ್ಷ್ಮಿಗೂ ನಗು ಬಂದು ಅಣ್ಣನ ನಗುವಿನ ಕೂಡ ಸೇರಿ ಕೊಂಡಳು. ಬೆಳಗಿನ ಕಾಫಿಯೂ ಆಯಿತು. ರಾಮು ಮೈಸೂರಿ ನಿಂದ ತಂದಿದ್ದ ಸಾಮಾನುಗಳೆಲ್ಲವನ್ನೂ ಒಂದೊಂದಾಗಿ ಕೈಚೀಲ ದಿಂದ ಹೊರತೆಗೆದನು. ಲಕ್ಷ್ಮಿಗೆ ಹಿಡಿಸಲಾರದಷ್ಟು ಆನಂದ. ಮದುವೆಯಾಗುವ ವಯಸ್ಸಾಗಿದ್ದರೂ, ಮನೆಯಲ್ಲಿ ಅವಳೀಗ ಮಗು. ಹಣ್ಣುಗಳನ್ನೆಲ್ಲ ಕುಟ್ಟಪ್ಪ ಕೊಟ್ಟನು ಎಂದ ಮೇಲೆ ಮತ್ತೊಂದು ತಡವೆ ಅವನನ್ನು ನೋಡಬೇಕೆಂದು ಅವಳಿಗನ್ನಿ ಸಿತು. ಎಂಥ ಒಳ್ಳೆಯವನೆಂದು ಮನಸ್ಸಿನಲ್ಲಂದು ಕೊಂಡಳು. ಜಾನಕಮ್ಮನವರು ಸೇಬಿನ ಹಣ್ಣುಗಳನ್ನು ಹೆಚ್ಚಿ ಪತಿಯ ಮುಂದೆಯೂ, ಮಗನ ಮುಂದೆಯೂ, ಹತ್ತಾರು ಹೋಳುಗಳನ್ನು ಇಟ್ಟರು. ಒಂದೆರಡು ಹೋಳುಗಳನ್ನು ತಾವೂ ಬಾಯಿಗೆ ಹಾಕಿಕೊಂಡರು. ಮಿಕ್ಕಿದ್ದೆಲ್ಲ ಲಕ್ಷ್ಮಿಗೆ. ಅವಳು ಉಳಿದದ್ದನ್ನೆಲ್ಲ ಬುಟ್ಟಿಗೆ ಹಾಕಿ, ಮೊಳೆಗೆ ತಗಲುಹಾಕಿದಳು ತನ್ನ ಸ್ನೇಹಿತೆ ಯರಿಗೆಲ್ಲ ಕೊಟ್ಟರೆ ಒಬ್ಬೊಬ್ಬರಿಗೆ ಎಷ್ಟೆಷ್ಟು ಬರುತ್ತದೆ ಎಂದು ಗುಣಾಕಾರ ಹಾಕಿದಳು. ಅವಳು ಯಾವಾಗಲೂ ಹಾಗೆಯೇ. ತಾನೊಬ್ಬಳೇ ತಿಂದು ತೇಗುವವಳಲ್ಲ. ನಾಲ್ಕಾರು ಜನಗಳಿಗೆ ಕೊಟ್ಟು, ನಕ್ಕುನಲಿದು, ಸಂತಸಪಡುವವಳವಳು.

## ೪೦

ವಿಶೇಷ ಸುದ್ದಿಗಾರರಿಂದ ಸರೋಜಳಿಗೆ ಸಮಾಚಾರ ಹೋಯಿತು. ಪಾಳ್ಯದಿಂದ ಶಾಮರಾಯರು ಬಂದುದು, ರಾಘು ವಿವಾಹಕ್ಕೆ ಒಪ್ಪಿದುದು, ಎಲ್ಲ ಅವಳಿಗೆ ತಿಳಿಯಿತು. ರಾಘು ತನ್ನ ಮನೆಗೆ ಕಾಲಿಟ್ಟೊಡನೆಯೇ "ಏನ್ರಿ ಆಹ್ವಾನ ಪತ್ರಿಕೆ ನನಗೂ ಕಳುಹಿಸುತ್ತೀರಲ್ಲಾ? ನಿಮ್ಮ ಲಗ್ನಕ್ಕೆ ನನ್ನನ್ನೂ ಕರೆದು ಕೊಂಡು ಹೋಗಲು ಮರೆಯಬೇಡಿ" ಎಂದಳು. ರಾಘು ಕ್ಷಣ ಕಾಲ ಸ್ತಂಭಿತನಾದನು. ಇಷ್ಟು ಬೇಗ ಸುದ್ದಿ ಇವಳಿಗೆ ಹೇಗೆ ದೊರಕಿತೆಂದು ಆಶ್ಚರ್ಯಪಟ್ಟನು. ತಾನು ಖಂಡಿತ ವಿವಾಹಕ್ಕೆ ಒಪ್ಪಲಿಲ್ಲವೆಂದೂ, ಶೆಟ್ಟರ ನಿರ್ಬಂಧದ ಮೇಲೆ ಒಪ್ಪಬೇಕಾಯಿತೆಂದೂ ಅವಳೊಂದಿಗೆ ನುಡಿದನು. ಬೇರೆ ವಿಧಿಯಿಲ್ಲದೆ ಹೀಗಾಯಿತೆಂದೂ, ತಪ್ಪು ಅವಳದೇ ಎಂದೂ, ಈಗಲೂ ಅವಳು ಒಪ್ಪಿದಲ್ಲಿ ತಾನು ತಂದೆತಾಯಿಗಳನ್ನು ತೊರೆದು ಬೊಂಬಾಯಿಗೆ ಹೊರಡಲು ಸಿದ್ಧವಿರುವುದಾಗಿಯೂ, ಅವಳ ಮೇಲೆಯೇ ಭಾರ ಹಾಕಿದನು. ಸರೋಜ ಮನಸ್ಸಿನಲ್ಲೆ ನಕ್ಕಳು. ಆ ನಗುವಿನ ಭಾವನೆ ನಡೆದಷ್ಟು ದಿನ ನಡೆಯಲಿ ತನಗೇನು ನಷ್ಟವಿಲ್ಲವಲ್ಲಾ ಎಂದರ್ಥ. ರಾಘು ಅವಳಿಗೆ ಅಭಯವಿತ್ತನು: ತಾನು ಒಂದು ಸಮಯ ವಿವಾಹವಾದರೂ ಅವಳನ್ನು ಮರೆಯುವುದಿಲ್ಲವೆಂದೂ, ತಮ್ಮಿರ್ವರ ಪ್ರೇಮ ಅನಂತವಾದುದೆಂದೂ, ಇನ್ನೂ ಏನೇನೋ ಹೇಳಿ ಅವಳಿಗೆ ವಾಗ್ದಾನ ಕೊಟ್ಟನು. ಪ್ರೇಮ ಎಂಬ ವಾರ್ತೆಯನ್ನು, ಆ ಎರಡಕ್ಷರವನ್ನು ಸಹ ಉಚ್ಚರಿಸಲು, ರಾಘುವಿಗೆ ಯಾವ ಹಕ್ಕು ಬಾಧ್ಯತೆಗಳೂ ಇರಲಿಲ್ಲ. ಪ್ರೇಮದ ಗಂಧವನ್ನೆ ಕಂಡರಿಯದವನವನು. ಸಿನಿಮಾ ನೋಡಿ ಹಾಗೆ ಹೇಳುವುದನ್ನು ಅವನು ಕಲಿತಿದ್ದನು. ಸರೋಜ ವ್ಯವಹಾರಗಾತಿ. ರಾಘುವಿನಂಥ ಅನೇಕ ಮಂದಿ ಗಂಡಸರನ್ನು ತೂಕಹಾಕಿದ್ದಳು. ರಾಘು

ಏನ ಗೊಡ್ಡುವಾಗ್ದಾನಕ್ಕೆಲ್ಲಾ ಅವಳು ಬೆಲೆ ಕೊಟ್ಟಾಳೇ? ಮೂಗುದಾರ ಹಿಡಿದು ಎಳೆಯುವವನಿಗೂ ಎಳೆದು ನೋಡುವವಳ ವಳು. ಎಳೆಯಲು ಸಾಧ್ಯವಿಲ್ಲದಿದ್ದಲ್ಲಿ, "ಹೋಗಿದ್ದು ಬಾ ಚಿನ್ನ ಬೇಗ" ಎಂದು ಮೈ ಸವರಿ ಕಳುಹುವವಳವಳು. ಚತುರೆಯಾದ ಅವಳು ಯಾರನ್ನಾದರೂ ಸರಿ, ವಿರೋಧಮಾಡಿಕೊಂಡರೆ ಅವರು ಬಾಳುವ ಬಗೆ ತಾನೆ ಹೇಗೆ? ರಾಘುವಿಗೆ ಮೂಗುದಾರ ಹಾಕಿ ಇಷ್ಟು ದಿನವೂ ಅವನನ್ನು ಹಿಡಿದು ನಿಲ್ಲಿಸಿದ್ದಳು. ಈಗ ಸಡಿಲ ವಾಯಿತೆಂದು ಕಂಡೊಡನೆ, ಇನ್ನು ಬಿಗಿಮಾಡುವುದು ಸಾಧ್ಯವಿಲ್ಲ ವೆಂದು ತಿಳಿಮಕೊಂಡಳು. ಅದಕ್ಕೇ ಅವಳು ಒಳಗಿದ್ದುದನ್ನು ಒಳಗೇ ಇರಿಸಿ, ಮೇಲೆ ಮಾತ್ರ "ಗಿಲ್ಟು" ಹಾಕಿದಂತೆ, "ವಿವಾಹವಾದರೂ ನನ್ನನ್ನು ಖಂಡಿತ ಮರೆಯುವುದಿಲ್ಲ ತಾನೇ" ಎಂದಳು. ರಾಘು ಅವಳ ಎರಡೂ ಕೈಗಳನ್ನು ಹಿಡಿದುಕೊಂಡು "ಹಾಗುಂಟೆ ಚಿನ್ನ, ನೀನೇ ನನ್ನ ಪ್ರಾಣ; ನೀನು ಏನೂ ಮನಸ್ಸಿನಲ್ಲಿ ಚಿಂತೆ ಹತ್ತಿಸಿಕೊಳ್ಳಬೇಡವೆಂದು ಹೇಳಿ, ಅವಳ ತುಟಿಗೆ ತುಟಿಸೇರಿಸಿ ಮುತ್ತು ಕೊಟ್ಟನು; ಬಿಗಿದಪ್ಪಿ ಚುಂಬಿಸಿ ದನು.

## ೪೧

ಪಾಣ್ಯಕ್ಕೆ ಹೊರಡಬೇಂದು ಗುಂಡೂರಾಯರ ಮನೆಯಲ್ಲಿ ಪ್ರಯಾಣಕ್ಕೆ ಸಿದ್ಧವಾಗ ತೊಡಗಿತು. ಶಾರದಮ್ಮನವರು ಯಾವುದೋ ಉತ್ಸವಕ್ಕೆ ಹೋಗುವಂತೆ ಸಡಗರದಿಂದ ಓಡಾಡು ತಲಿದ್ದರು. ಗುಂಡೂರಾಯರು ಜವಳಿ ಅಂಗಡಿಗೆ ಹೋಗಿ ಪತ್ನಿಗೆ ಹೊಸ ರೇಶ್ಮೆ ಸೀರೆ, ಕುಪ್ಪಸ, ಎಲ್ಲ ತಂದರು. ಮಗ ರಾಘುವಿಗೆ ನೇರಿಳೆಬಣ್ಣದ ಹೊಸ ಕೋಟನ್ನು ಹೊಲಿಸಿದರು. ತಮಗೆ ಒಪ್ಪುವಂಥ ಹೊಸಬಟ್ಟೆಗಳನ್ನು ಕೊಂಡರು. ಬರೀ

ಕೈಯಲ್ಲಿ ವಧುವಿನ ಮನೆಯವರಲ್ಲಿಗೆ ಹೋಗಲು, ಗುಂಡೂ ರಾಯರು ಇಷ್ಟಪಡಲಿಲ್ಲ. ಉಡುಪಿ ಸುಂದರಭವನದ ಸುಂದರ ಭಟ್ಟರಿಗೆ, ನೂರು ಲಾಡಿಗೆ ಆಗಲೇ ಆರ್ಡರ್ ಮಾಡಿದ್ದರು. ಹಣ್ಣು ಹಂಪಲಗಳನ್ನು ಕುಕ್ಕೆಯಲ್ಲಿ ತುಂಬಿಸಿದರು. ಎರಡು ಮೂರು ಮಾರು ಹೂವನ್ನು ಬಾಳೆಎಲೆಯಲ್ಲಿ ಸುತ್ತಿ, ಒಣಗದೆ ಯಿರುವಂತೆ ಸ್ವಲ್ಪ ನೀರನ್ನು ಚಿಮುಕಿಸಿ, ಹಣ್ಣಿನ ಮೇಲ್ಗಡೆ ಸ್ಥಳಮಾಡಿಟ್ಟರು. ಪೆಟ್ಟಿಗೆಯೊಂದರಲ್ಲಿ ಬಟ್ಟೆಬರೆಗಳನ್ನು ಹಾಕಿಮುದಾಯಿತು. ಹಾಸಿಗೆಯು ಕೂಡ ಎರಡು ಕಾಶ್ಮೀರ ಶಾಲುಗಳನ್ನೂ ಸೇರಿಸಿ ಸುತ್ತಿ ನೂಲು ಬಿಗಿದರು. ಕುಟ್ಟಪ್ಪ ನನ್ನೂ ಅವರು ಪಾಳ್ಯಕ್ಕೆ ಕರೆದಿದ್ದರು. ಆದರೆ ಆತ 'ಈಗ ಬರಲು ಸಾಧ್ಯವಿಲ್ಲ'ವೆಂದನು. ಧನಪಾಲಶೆಟ್ಟರ ಮನೆಗೆ ಹೋಗಿ ಅವರನ್ನು ಕಂಡು ತಾವು ಹೊರಟಿರುವುದಾಗಿ ತಿಳಿಸಿದರು. "ಕಾರ್ಯ ಬೇಗ ಮುಗಿಸಿಬಿಡಿ, ನನಗೂ ಬಹಳ ಸಂತೋಷ" ಎಂದವರಂದರು. "ಹಣಕಾಸಿನ ಅಗತ್ಯವೇನಾದರೂ ಇದ್ದಲ್ಲಿ, ನನ್ನನ್ನು ಕೇಳಬಹುದು" ಎಂದೆನ್ನಲು ಅವರ ಬಾಯಿ ಬಂದಿತು. ಆದರೆ ಅದನ್ನವರು ತಡೆದುಕೊಂಡರು. ಗುಂಡೂರಾಯರು ರಾಘುವನ್ನು ಕಂಪನಿಗೆ ಸೇರಿಸಿದಾಗ, ಅವರು ಒಬ್ಬ ಸಾಮಾನ್ಯ ವ್ಯಕ್ತಿಯೆಂದು ಶೆಟ್ಟರು ತಿಳಿದಿದ್ದರು. ಆದರೆ ಈಗವರು ಗುಂಡೂ ರಾಯರು ತಿರುಳುಳ್ಳವನೆಂದೂ, ರಾಘು ಕೆಲಸಮಾಡುತ್ತಿರುವು ದೇನೂ ಅತ್ಯಗತ್ಯವಿಲ್ಲವೆಂದೂ, ತಿಳಿದುಕೊಂಡಿದ್ದರು. ಮಗ ನೊಂದಿಗೆ ಪತಿಪತ್ನಿಯರು ಬೆಳಗಿನ ಏಳು ಘಂಟೆಗೆ ರೈಲೇರಿ, ಚಾಮರಾಜನಗರದಲ್ಲಿ ಬಂದಿಳಿದಾಗ, ಘಂಟೆ ಒಂಭತ್ತೂವರೆ ಆಗಿತ್ತು. ಪಾಳ್ಯದಿಂದ ಗಾಡಿ ಹೊಡೆದುಕೊಂಡು ಊರಗೌಡ ಬಸಪ್ಪನ ಮಗ ಶಿವಯ್ಯನೇ ಬಂದಿದ್ದನು. ಅವನು ಗಾಡಿ ಹೊಡೆಯುವುದರಲ್ಲಿ ಪ್ರವೀಣ. ರಸ್ತೆಗಳಲ್ಲಿ ಗಾಡಿ ಬಿಡುವು ದೇನೂ ಅತಿಶಯದ ಮಾತಲ್ಲ. ಆದರೆ ರಸ್ತೆಯಿಲ್ಲದ ಕಾಡಿನಲ್ಲಿ

ಹಳ್ಳತಿಟ್ಟು, ಕೊರಕಲು, ತುಂಬಿರುವ ಸ್ಥಳಗಳಲ್ಲಿ ಗಾಡಿಬಿಡಲು ಬಹಳ ಬುದ್ಧಿವಂತಿಕೆಯೇ ಬೇಕು. ಶಿವಯ್ಯನ ಕೂಡ ಶಾಮ ರಾಯರು, ಮೂರಾಳುಗಳನ್ನು ಕಳುಹಿಸಿದ್ದರು. ಗುಂಡೂ ರಾಯರು ಪತ್ನಿ ಮತ್ತು ಮಗನ ಸಹಿತ ಚಾಮರಾಜನಗರದಲ್ಲಿ ಊಟ ತೀರಿಸಿ, ಶಿವಯ್ಯನಿಗೂ, ಆಳುಗಳಿಗೂ, ತಿಂಡಿಕೊಡಿಸಿ ದರು ; ಕಾಫಿ ಕುಡಿಸಿದರು. ಅನಂತರ ಎಲ್ಲರೂ ಗಾಡಿ ಏರಿದರು. ಏಯ್, ಏಯ್, ಎನುತ್ತ ಶಿವಯ್ಯ ಗಾಡಿ ಬಿಡತೊಡಗಿದನು. ಗಾಡಿಯ ಹಿಂದೆ ಮೂರಾಳುಗಳು ನಡೆದು ಬರುತಲಿದ್ದರು. ಇತರ ಜಾತಿಯವರುಗಳಾಗಿದ್ದ ಪಕ್ಷದಲ್ಲಿ, ಹೇಗೋ ಒಂದಿಷ್ಟು ಸ್ಥಳಮಾಡಿ, ಅವರುಗಳೂ ಗಾಡಿಯಲ್ಲಿ ಕುಳಿತುಕೊಳ್ಳಬಹು ದಾಗಿದ್ದಿತು. ಆದರೆ ಈ ಮೂವರೂ ಹರಿಜನರು. ಹರಿಜನರನ್ನು ಬ್ರಾಹ್ಮಣ ಪಕ್ಕದಲ್ಲಿ ಕುಳ್ಳಿರಿಸಿಕೊಂಡಾನೇ ? ಮೈಲಿಗೆ ತಗಲಿ, ಪಾಪ, ಅವನಾಮೇಲೆ ಎಂಥ ನರಕಕ್ಕೆ ಹೋಗಬೇಕಾಗುತ್ತೋ ; ನಮ್ಮ ಗೋಷ್ಠಿ ಪಾಳ್ಯ ಬಂದು ಸೇರುವಾಗ, ಕತ್ತಲು ಆಗತಾನೆ ಮಸಕು ಮಸಕಾಗಿ ಕವಿಯಲು ಪ್ರಾರಂಭಿಸಿತ್ತು.

## ೪೨

ಇಂದು ಶಾಮರಾಯರ ಮನೆಯಲ್ಲಿ ಉತ್ಸಾಹವೋ ಉತ್ಸಾಹ. ಜಾನಕಮ್ಮನವರೂ, ಶಾರದಮ್ಮನವರೂ, ಬಹಳ ದಿನಗಳಿಂದ ಪರಿಚಯವಿದ್ದವರಂತೆ, ಮಾತನಾಡಿಕೊಳ್ಳುತಲಿ ದ್ದಾರೆ. ಲಕ್ಷ್ಮಿ ತಾಯಿಗೆ ಸಹಾಯಕಳಾಗಿ, ಅತ್ತಿತ್ತ ಓಡಾಡು ತಲಿದ್ದಾಳೆ. ಲಕ್ಷ್ಮಿಯ ರೂಪುಲಾವಣ್ಯಗಳನ್ನು ಕಂಡು ಶಾರದಮ್ಮನವರು ಬಹಳ ಹಿಗ್ಗಿದರು. ಸರಸಳಿಗಿಂತ ಲಕ್ಷ್ಮಿಯೇ ಚೆಲುವೆ ಎಂದು ಮನಸ್ಸಿನಲ್ಲಂದುಕೊಂಡರು. ಮೂಲಾನಕ್ಷತ್ರ ಈಗ ಜ್ಞಾಪಕಕ್ಕೆ ಬರಲೇಯಿಲ್ಲ. ಮೈಸೂರಿನವರು, ಹುಲಿ

ಬೇಟೆ ಆಡಿದವರು ಬಂದಿದ್ದಾರೆಂದು ಊರ ಪ್ರಮುಖರಲ್ಲಿ ನಾಲ್ಕಾರು ಮಂದಿ ಅವರನ್ನು ನೋಡಲು ಶಾಮರಾಯರ ಮನೆಗೆ ಬಂದರು. " ಬಂದ್ರ್ಯಾ ಸ್ವಾಮಿ " ಎಂದು ಅವರೆಲ್ಲರೂ ಗುಂಡೂರಾಯರಿಗೆ ಕೈಮುಗಿದು ಕುಳಿತುಕೊಂಡರು. ವಿಶೇಷ ಮಾತುಕತೆಗಳನೆಲ್ಲವನ್ನೂ ಅವರು ಆಡುತ್ತಿದ್ದರು. ಆಗ ಗುಂಡೂ ರಾಯರು " ನೋಡಿ, ನಿಮ್ಮ ದೇಶಕ್ಕೆ ಮತ್ತೊಂದಡವೆ ಬರುವ ಸುಯೋಗ ನಮಗೆ ದೊರಕಿತು " ಎಂದಾಗ, ಜನ " ಕೊಂಗಳ್ಳಿ ಮಲ್ಲಪ್ಪ ಒಂದು ಸರ್ತಿ ಕರಸ್ಕೊಂಡ್ರೆ,ಮತ್ತೊಂದ್ಸರ್ತಿ ಕರಸ್ಕೊಳ್ದೆ ಬುಟ್ಬುಟ್ಟನಾ ಸ್ವಾಮಿ "ಎಂದರು. ಆ ಬಳಿಕ ಅವರೆಲ್ಲರೂ ಎದ್ದು ಹೊರಟುಹೋದರು. ಹಿರಿಯರುಗಳು ಮನೆಯಲ್ಲಿ ಮಾತನಾಡು ತ್ತಿದ್ದಾಗ ರಾಘುವಿಗೆ ಅದರಲ್ಲೇನೂ ಭಾಗವಹಿಸಲು ಹಕ್ಕು ಬಾಧ್ಯತೆಗಳಿರಲಿಲ್ಲ. ಆದರೆ ತಾನೊಬ್ಬ ಗೌರವಸ್ಥನ ಹಾಗೆ ಡಂಭದಿಂದ ನಡೆದುಕೊಂಡನು. ಸುಮ್ಮನೆ ಕುಳಿತಿರಲು ಅವನಿಗೆ ಬೇಜಾರಾಗಿತ್ತು. ಮನೆಯಿಂದ ಈಚೆಗೆ ಅವನು ಎದ್ದು ಬಂದಾಗ ಹಿತ್ತಿಲಿನಿಂದ ಬರುತಿದ್ದ ಲಕ್ಷ್ಮಿಯನ್ನು ಕಂಡನು. ಪತಿರಾಯ ನಾಗುವವನು ಅಕಸ್ಮಾತ್ ಎದುರಿಗೆ ಸಿಕ್ಕಿದುದರಿಂದ ಲಕ್ಷ್ಮಿಗೆ ಬಹಳ ನಾಚಿಕೆಯಾಗಿ ತಲೆತಗ್ಗಿಸಿಕೊಂಡಳು. ಸಾಣೆಗೆ ಹಿಡಿದ ವಜ್ರದ ಖನಿಯೊ ಎಂಬಂತೆ ಅವಳಿದ್ದಳು. ಈ ಹಳ್ಳಿಯಲ್ಲಿ ಇಂಥಾರೂಪು ಹೇಗೆ ಬಂದಿತೆಂದು ಅವನು ಮನಸ್ಸಿನಲ್ಲೆ ಅಂದು ಕೊಂಡನು. ಇದುವರೆಗೆ ಅವನು ಹಳ್ಳಿಯನ್ನೇ ನೋಡಿದವನಲ್ಲ. ಪಟ್ಟಣದಲ್ಲೇ ಹುಟ್ಟಿ ಬೆಳೆದು, ಅವನು ದೊಡ್ಡವನಾದನು. ಸರೋಜಳ ಚಿತ್ರ ಆಗಲೂ ಅವನ ಕಣ್ಣು ಮುಂದೆ ಬಂದು ನಿಂತಿತು. ಲಕ್ಷ್ಮಿಗೂ, ಸರೋಜಳಿಗೂ, ಎಲ್ಲಿಗೆಲ್ಲಿ? ಲಕ್ಷ್ಮಿಯ ಕಾಲಿನ ಒಂದು ಕಿರು ಬೆರಳಿಗೂ ಸರೋಜ ಸಮನಾಗಿರಲಿಲ್ಲ.

ರಾಘು ಸ್ವಲ್ಪ ದೂರ ನಡೆದು ಊರಮಧ್ಯದಲ್ಲಿರುವ ಅಶ್ವತ್ಥವೃಕ್ಷದ ಬಳಿಗೆ ಬಂದನು. ಹಳ್ಳಿಯಾದರೂ ಊರನ್ನು

ನೋಡಲು ಬಹಳ ಚೆನ್ನಾಗಿದೆಯೆಂದು ಮನಸ್ಸಿನಲ್ಲಂದು ಕೊಂಡನು. ಜಗಲಿಯ ಮೇಲೆ ಕುಳಿತಿದ್ದ ನಾಲ್ಕಾರು ವ್ಯಕ್ತಿಗಳು ಎದ್ದು ಬಂದು "ಬನ್ನಿ ಸ್ವಾಮಿ ಕುಳಿತುಕೊಳ್ಳಿ" ಎಂದರು. ರಾಘುವಿಗೆ ಬಹಳ ಪೇಚಾಟಕ್ಕಿಟ್ಟುಕೊಂಡಿತು. ಹುಲಿಬೇಟೆ ಆಡಿದವರ ಮಗನಿಗೆ ಊರ ಸ್ಥಿತಿವಂತರು ಹೆಣ್ಣುಕೊಡುತ್ತಾರೆಂಬ ವದಂತಿ ಊರೆಲ್ಲಾ ಹಬ್ಬಿತ್ತು. ರಾಘು ಜಗಲಿಯ ಮೇಲೆ ಹೋಗಿ ಕುಳಿತುಕೊಂಡನು. ಬಾಲಕರ ತಂಡವೊಂದು ಅವನನ್ನೇ ದೃಷ್ಟಿಸಿ ನೋಡುತ್ತ ನಿಂತಿದ್ದಿತು. ಬಹುಶಃ ಅವನು ಸುರುಳು ಸುರುಳಿಯಾಗಿ ಬಾಚಿದ್ದ ಕ್ರಾಪ್‌ತಲೆ, ಅವನ ಕೆಂಪಗಿನದೇಹ, ಅಗಲವಾದ ಕಣ್ಣುಗಳು, ಅವರಿಗೆ ನೋಡಲು ಬಹಳ ಹಿಡಿಸಿದ್ದಿರಬೇಕು. ಕೆರೆಯಿಂದ ಮನೆಗೆ ನೀರು ಹೊತ್ತು ತರುತಿದ್ದ ಹೆಂಗಸರೇನಕರು ರಾಘುವಿನ ಮೇಲೆ ದೃಷ್ಟಿ ಹಾಯಿಸಿ ಹೋಗುತಿದ್ದರು. ಅವರಲ್ಲೇ ಕೆಲವರು "ನಮ್ಮ ಲಕ್ಷ್ಮಮ್ಮ ಗಂಡ ಕಣಮ್ಮೇ ಇವ್ರು" ಎಂದು ಗುಜುಗುಜು ಮಾತನಾಡಿಕೊಂಡುದು ರಾಘುವಿನ ಕಿವಿಗೂ ಸ್ವಲ್ಪ ಬಿದ್ದಿತು. ಜಗಲಿಯ ಕೆಳಗಡೆ ಕುಳಿತಿದ್ದ ಜನ ಏನೇನೆಲ್ಲ ಅವನಿಗೆ ಪ್ರಶ್ನೆಹಾಕುತಿದ್ದರು. "ಈ ನಮ್ಸೀಮೆ ಕುಂಪ್ಣಿಯಿಂದ ರಾಜನಿಗೆ ಸೇರಿತಂತಲ್ಲ ನಿಜ್ವ ಬುದ್ಧಿ" ಎಂದೊಬ್ಬನು ಕೇಳಿದನು. "ಮೈಸೂರು ಭಾರಿ ಪಟ್ಣ ಅಲ್ವ ಬುದ್ಧಿ", "ಅಯ್, ನೋಡ್ಬೇಕು ಕಣಾ, ಸಟಗಾದ್ರೂ ದೇಶ ಸುತ್ತದ್ಮಾಲೆ ಅದ್ಯಾತಕ್ಯ ಬಡ್ಡಿಮಗ್ನಜೀವ ಇರದು" ಎಂದು ಅವರಲ್ಲೇ ಒಬ್ಬರಿಗೊಬ್ಬರು ಮಾತನಾಡಿಕೊಂಡರು. ಆದರವನು ಏನೇನೋ ಹೇಳಿ ಸಾಮರ್ಥ್ಯದಿಂದ ತಪ್ಪಿಸಿಕೊಳ್ಳುತಿದ್ದನು. ಹುಲಿಬೇಟೆ ಆಡಲು ಬರುತ್ತದೆಯೇ ಎಂದು ಅವರು ಕೇಳದಿರಲಿಲ್ಲ. ಅವರಿಗೆ ಮುಖ್ಯವಾಗಿ ಬೇಕಾಗಿರುವುದು ಅದು ತಾನೆ. ಸಮಯಕ್ಕೆ ತಕ್ಕಂತೆ ವೇಷ ಕಟ್ಟಲು ಅವನಿಗೇನು ತಿಳಿಯದೇ ? ರಾಘು ಧೈರ್ಯವಾಗಿ ಬರುತ್ತದೆಂದೇ ನುಡಿದು ಬಿಟ್ಟನು. ಜನ

"ಷಾಬಾಸ್" ಎಂದರು. "ಮತ್ತಿನ್ಯಾಸುಕೋ ಹುಲ್ಗೆ ಹುಟ್ಟಿದ್ದು ನಾಯದ್ದಾ" ಎಂದು ಅವರಲ್ಲಿ ನಗುನಗುತ್ತ ಮಾತನಾಡಿಕೊಂಡರು. ಇಷ್ಟರಲ್ಲಿ ರಾಮುವೂ ಅಲ್ಲಿಗೆ ಬಂದು ಸೇರಿಕೊಂಡನು. ಅವನು ಬೆಳಗಿನಿಂದ ಮನೆಯಲ್ಲಿರಲಿಲ್ಲ. ತಂದೆಯ ಆಜ್ಞೆಮೇರೆಗೆ, ಯಾವುದೋ ಕೆಲಸದ ನಿಮಿತ್ತವಾಗಿ, ಪಕ್ಕದ ಹಳ್ಳಿಗೆ ಹೋಗಿದ್ದು, ಈಗತಾನೆ ಅವನು ಬಂದನು. "ಊರನ್ನೆಲ್ಲಾ ನೋಡಿದಿರಾ" ಎಂದು ರಾಮು ನಗುತ್ತ ಕೇಳಿದುದಕ್ಕೆ, ರಾಘು ಮುಗಳ್ನಗೆಯಿಂದಲೇ ತಲೆಯಲ್ಲಾಡಿಸಿದನು. "ಊಗ್ನೀನ ಬುದ್ದಿ ನೋಡಾದು, ಅಪ್ರವ್ರೂರು ಅಪ್ರವ್ರ್ಗೆ ಚೆಂದ; ನಮ್ಮೂರು ನಮ್ಗೆ ಚೆಂದ" ಎಂದು ಮುದುಕನೊಬ್ಬನು ನುಡಿದನು. ಸ್ವಲ್ಪ ಹೊತ್ತು ಕುಳಿತಿದ್ದನಂತರ ರಾಘು ಮೇಲಕ್ಕೆದ್ದು, ಮರ್ಯಾದೆಗಾಗಿ ಅಲ್ಲಿ ಕುಳಿತಿದ್ದ ಜನಕ್ಕೆ ಬರುತ್ತೇನೆ ಎಂದನು. ರಾಘುವಿನ ಹಿಂದೆ ರಾಮುವೂ ಹೊರಟನು. ಒಂದೊಂದೇ ಹೆಜ್ಜೆ ಹಾಕುತ್ತ ಅವರುಗಳು ನಡೆದು ಬರುತಿದ್ದಾಗ, ಊರಕೆರೆಯ ಕಡೆಗೆ ರಾಘುವಿನ ದೃಷ್ಟಿ ಹಾರಿತು. ಕೆರೆಯನ್ನು ನೋಡಿಕೊಂಡು ಬರಬಹುದಲ್ಲವೇ? ಎಂದವನು ಪ್ರಶ್ನಿಸಿದಾಗ, ರಾಮು ಆಗಲೆಂದು ನುಡಿದು, ರಾಘುವಿನ ಪಕ್ಕದಲ್ಲಿ ನಡೆಯಲಾರಂಭಿಸಿದನು. ತುಂಬಿ ತುಳುಕುತಿದ್ದ ಸ್ಫಟಿಕದಂಥ ತಿಳಿನೀರು, ಗಾಳಿ ಬೀಸಿದಾಗ ಅಲೆ ಎದ್ದು ದಡಕ್ಕೆ ಅಪ್ಪಳಿಸುವಾಗಿನ ಶಬ್ದ ಆನಂದದಾಯಕವಾಗಿತ್ತು; ಕೋಡಿ ಬಿದ್ದು ನೀರು ಗುಳುಗುಳು ಎಂದು ಶಬ್ದಗೈಯುತ್ತ ಹೊರಗೆ ಹರಿದೋಡುವ ದೃಶ್ಯ ನೋಡಲು ನೇತ್ರಾನಂದಕರವಾಗಿದ್ದಿತು. ಕೆರೆಗೆ ಪಶ್ಚಿಮ ಭಾಗದಲ್ಲಿ ಎರಡು ಅಶ್ವತ್ಥಮರ. ಅದಕ್ಕೆ ಜಗಲಿಕಟ್ಟೆ ಗಾಗೆ ಹಾಕಿದ್ದರು. ಒಂದು ಜಗಲಿಯಲ್ಲಿ ನಾಗಪ್ರತಿಷ್ಠೆಮಾಡಿದ್ದರು; ವೃಂದಾವನವೊಂದನ್ನು ಕಟ್ಟಿದ್ದರು. ಕೆರೆಯ ಉತ್ತರ ಭಾಗದಲ್ಲಿ ಏರಿಯ ಕೆಳಗೆ, ನಾಲ್ಕಾರು ಹುಣಿಸೆಮರ, ಎರಡು ನೇರಿಳೆ, ಒಂದು ಮತ್ತಿಮರ

ಇದ್ದವು. ಕೊಂಬೆಯಿಂದ ಕೊಂಬೆಗೆ ಕೀಚ್ ಶಬ್ದಮಾಡುತ್ತ, ಕಪಿಗಳು ನೆಗೆದಾಡುತಿದ್ದುವು. ರಾಘು ಈ ದೃಶ್ಯವನ್ನೆಲ್ಲ ಸ್ವಲ್ಪ ಹೊತ್ತು ನೋಡುತಲಿದ್ದು, ಕೋಡಿಯ ನೀರಿಗೆ ಕಾಲುಕೊಟ್ಟು, ರಾಮುವಿನೊಂದಿಗೆ ಮನೆಗೆ ಹಿಂದಿರುಗಿದನು. ದಾರಿಯಲ್ಲಿ ಬರುವಾಗ ಕೆರೆಗೆ ನೀರಿಗೆ ಹೋಗುತಿದ್ದ ಅಗ್ರಹಾರದ ಮೂವರು ಹೆಣ್ಣು ಹುಡುಗಿಯರನ್ನು ಓರೆಗಣ್ಣಿನಿಂದ ನೋಡಿಕೊಂಡೇ ಅವನು ಮನೆಗೆ ನಡೆದನು.

## ೪೩

ಚೈತ್ರಮಾಸದಲ್ಲೇ ವಿವಾಹ ನಡೆಸುವುದೆಂದು, ಮನೆಯಲ್ಲಿ ಹಿರಿಯರು ನಿಶ್ಚಯಮಾಡಿದರು. ತಿಪ್ಪಾಶಾಸ್ತ್ರಿಗಳಲ್ಲಿ ಲಗ್ನಕಟ್ಟಿಸಿ, ಬೀಗರಿಬ್ಬರೂ ಸೇರಿ ಲಗ್ನಪತ್ರಿಕೆಯನ್ನು ಮೈಸೂರಿನಲ್ಲಿಯೇ ಅಚ್ಚುಮಾಡಿಸುವುದೆಂದು ತೀರ್ಮಾನವಾಯಿತು. ಮತ್ತೊಂದು ತಡವೆ ಶಾಮರಾಯರು ಮೈಸೂರಿಗೆ ಪ್ರಯಾಣಮಾಡಬೇಕೆಂದು ನಿರ್ಧಾರಮಾಡಿದರು. ಇನ್ನು ವರದಕ್ಷಿಣೆ, ನಗನಟ್ಟು ಮತ್ತಿತರ ಪ್ರಮುಖವಾದ ವಿಷಯಗಳು : ಹೆಂಗಸರು ಮಾತನಾಡುತಿದ್ದಾಗ, ಗುಂಡೂರಾಯರು ಒಂದು ಆಟಂ ಬಾಂಬ್ ಹಾಕಿದರು. ವರ ದಕ್ಷಿಣೆ ಬೇಡಿ, ಬೇರೆ ಮಾತುಕತೆಗಳನ್ನಾಡಿ ಎಂದವರಂದರು. ಪತಿಯ ಮೇಲೆ ಶಾರದಮ್ಮನವರಿಗ ಸ್ವಲ್ಪ ಕೋಪವೇ. ಅವರು ಅದನ್ನು ಹೊರಗೆ ತೋರ್ಪಡಿಸಿಕೊಳ್ಳದೆ, ಮೇಲೆ ನಗುನಗುತ್ತಲೇ ಮಾತನಾಡುತಿದ್ದರು. ಮೈಸೂರಿನಲ್ಲಾಗಲೀ, ಮೈಸೂರು ಬಿಟ್ಟಮೇಲಾಗಲೀ, ಇಲ್ಲವೆ ದಾರಿಯಲ್ಲಾಗಲೀ, ಇವರಲ್ಲಾರೂ ವರದಕ್ಷಿಣೆಯ ಯೋಚನೆಯನ್ನೇ ಮಾಡಿರಲಿಲ್ಲ. ರಾಘುವಿಗೆ ಹುಡುಗಿಯನ್ನೇ ಕೊಡಲು ಎಲ್ಲರೂ ಹಿಂಜರಿಯುತಿದ್ದಾಗ, ಇನ್ನು ದಕ್ಷಿಣೆ ಎಲ್ಲಿಂದ ಬಂದಿತು. ಈಗ ಆ ಪ್ರಸ್ತಾಪವೇಳು

ತ್ತಲೇ ಗುಂಡೂರಾಯರು ಅದನ್ನು ಮುರಿದು ಹಾಕಿದರು. ಅವ ರೇನೂ ಅತಿ ಆಸೆಪಡುವವರಲ್ಲ. ದೇವರು ನಮಗೆ ಕೊಟ್ಟಿರು ವುದೇ ಸಾಕು ಎನ್ನುತ್ತಿದ್ದರು. ಅಳಿಯನಿಗೆ ಒಂದು ಜೊತೆ ರಂಗೂನ್‌ಕಲ್ಲಿನ ಕಡುಕು, ಧೋತ್ರ, ರಿಸ್ಟ್‌ವಾಚ್, ತೆಗೆದು ಕೊಡುವುದಾಗಿ ಶಾಮರಾಯರು ಒಪ್ಪಿದರು. ಕೋಟು, ಸೂಟು, ಬಾಕಿಯೆಲ್ಲ ಚಿಲ್ಲರೆ ಅನ್ನಿ. ಎಲ್ಲರೂ ನಕ್ಕು ನಲಿದು ಮಾತ ನಾಡುತ್ತಿದ್ದಾಗ, ಶಾರದಮ್ಮನವರು "ಮಗಳಿಗೆ ಹಾಡು ಸಹ ಕಲಿಸಿದ್ದೀರಾ?" ಎಂದು ಕೇಳಿದರು. "ಬಹಳ ಚೆನ್ನಾಗಿ ಹಾಡುತ್ತಾಳೆ. ಏನು ಮಾಡುವುದು ನೋಡಿ, ಇಲ್ಲಿಯ ಸ್ಥಳ ಸನ್ನಿವೇಶ ಹೀಗಿದೆ: ನಾನು ಲಕ್ಷ್ಮಿ ಚಿಕ್ಕವಳಾಗಿದ್ದಾಗಿನಿಂದಲೂ ಸಂಗೀತ ಹೇಳಿಸಿಕೊಡಬೇಕೆಂದು ಪ್ರಯತ್ನಪಟ್ಟೆ. ಆದರದು ಸಾಧ್ಯವಾಗಲೇಯಿಲ್ಲ." "ಆದರೆ ಕಂಠ ಎಷ್ಟು ಮಧುರವಾಗಿದೆ ಅಂತೀರಿ! ಸಂಗೀತ ಶಿಕ್ಷೆ ನಡೆದದ್ದಕ್ಕಿಂತಲೂ ಚೆನ್ನಾಗಿಯೇ ಹಾಡುತ್ತಾಳೆ" ಎಂದು ಜಾನಕಮ್ಮನವರು ಮಗಳನ್ನು ಹೊಗಳಿ ದರು. "ಲಕ್ಷ್ಮೀ, ಬಾರಮ್ಮ. ಒಂದು ಹಾಡಂತೆ ಹಾಡು" ಎಂದು ಕೂಗಿದರು. ನಡುಮನೆಯ ಕಿಟಕಿಯ ಬಳಿಯಲ್ಲಿ, ಇವ ರಾಡುವ ಮಾತುಗಳೆಲ್ಲವನ್ನೂ ಲಕ್ಷ್ಮಿ ಕೇಳುತ್ತಲೇ ನಿಂತಿದ್ದಳು. ಹಬ್ಬ ಹರಿದಿನಗಳಲ್ಲಿ, ಗೌರೀಪೂಜೆಯಲ್ಲಿ, ಹೆಚ್ಚಿನ ವಿಶೇಷಗಳಲ್ಲಿ, ಪಾಳ್ಯಕ್ಕೆ, ಅಗ್ರಹಾರಕ್ಕೆ, ಅವಳೇ ಎಲ್ಲರಿಗಿಂತ ಮುಂದು ಹಾಡು ವುದರಲ್ಲಿ. ತನ್ನ ಬಂಧುಗಳು ಹೇಳಿಕೊಟ್ಟ, ಅವರಿವರಿಂದ ತಿಳಿದು ಕೊಂಡ, ಅಣ್ಣನಿಂದ ಸಂಗ್ರಹಿಸಿದ, ಹಾಡನ್ನೆಲ್ಲ ಆಗವಳು ಸೇರಿಸಿ ಜಮಾಯಿಸುತ್ತಿದ್ದಳು. ಆದರೆ ಆ ಸಂದರ್ಭ-ಸನ್ನಿವೇಶವೇ ಬೇರೆ. ಆಟವಾಡಿ, ನಕ್ಕುನಲಿದು, ಮನೆಯವರೊಂದಿಗೆ ಮನೆಯವಳಾಗಿ, ಮೆರೆಯುತ್ತಿದ್ದ ದಿನಗಳದು. ಈಗ ತಾಯಿಯ ಕರೆ ಕೇಳಿ ದೊಡನೆಯೇ ನಾಚಿಕೆ, ಸಂಕೋಚದೊಂದಿಗೆ, ಅವಳಿಗೆ ಗಂಟಲು ಸಹ ಕಟ್ಟಿಕೊಂಡಿತು. "ಬಾ ಲಕ್ಷ್ಮಿ" ಎಂದು ಮತ್ತೊಂದು

ತಡವೆ ತಾಯಿ ಕೂಗಿದ ಮೇಲೆ, ಇನ್ನು ನಿಂತಿರುವುದು ಸರಿಯಲ್ಲ ವೆಂದು ಅವಳು ಹೊರಬಂದಳು. ಹೆಜ್ಜೆ ಮೇಲೆ ಹೆಜ್ಜೆ ಹಾಕಿ ಅವಳು ಮೆಲ್ಲಗೆ ನಡೆದು ಬರುತಿದ್ದರೂ, ಹೊಸ ನೇರಿಳೆ ಬಣ್ಣದ ರೇಶ್ಮೆ ಸೀರೆ ಜರಜರ ಎಂದು ಶಬ್ದಗೈಯುತಿತ್ತು. ತುಸು ಹಸುರು ಮಿಶ್ರವಾದ ನೀಲಿಬಣ್ಣದ ಕುಪ್ಪಸ, ಶಾಮರಾಯರು ಕೊಯಮುತ್ತೂರಿಗೆ ಜಿಲ್ಲಾ ಕಲೆಕ್ಟರ್ ಆಫೀಸಿಗೆ ಹೋಗಿದ್ದಾಗ ಹೊಲಿಸಿ ತಂದಿದ್ದರು. ಪಟ್ಟಣದ ಫ್ಯಾಶನಂತೆ, ಎರಡೂ ತೋಳುಗಳ ಮೇಲೆ ಆ ದರ್ಜಿ ಎರಡು ಹೂಗಳನ್ನು ಇಟ್ಟಂತೆ, ಮೊಗ್ಗು ಇರಿಸಿ ಹೊಲಿದಿದ್ದುದು, ಅವಳಿಗೆ ಚೆನ್ನಾಗಿಯೇ ಒಪ್ಪು ತಿತ್ತು. ಸೇವಂತಿಗೆ ಹೂವನ್ನು ಅವಳು ಮುಡಿದಿದ್ದುದರಿಂದ, ಸುವಾಸನೆ ಮನೆಯೆಲ್ಲ ಹರಡಿ ವ್ಯಾಪಿಸಿತ್ತು. ಅವಳ ಹಣೆ ಯಲ್ಲಿದ್ದ ಕುಂಕುಮ ನಕ್ಷತ್ರದಂತೆ ಮಿಂಚುತಿದ್ದಿತು. ಕತ್ತಿಗೆ ಎರಡೆಳೆ ಚಿನ್ನದ ಸರ ಹಾಕಿಕೊಂಡಿದ್ದಳು. ಕಿವಿಗಳ ಓಲೆ, ಮೂಗಿಗಿಟ್ಟಿದ್ದ ಬೇಸರಿ, ಫಳಕ್, ಫಳಕ್, ಎಂದು ಹೊಳೆಯು ತಿದ್ದುವು. ಸಂಕೋಚದಿಂದ ಲಕ್ಷ್ಮಿ ತಾಯಿಯ ಬಳಿ ಬಂದು ಕುಳಿತುಕೊಂಡಾಗ, ಕೈ ಬಳೆಗಳು ಒಂದಕ್ಕೊಂದಕ್ಕೆ ಘರ್ಷಣೆ ಮಾಡಿ, ಝುಣಕ್, ಝುಣಕ್ ಎಂದುವು. ಈಗ ಲಕ್ಷ್ಮಿಗೆ ಗಂಟಲು ಪೂರಾ ಕಟ್ಟಿಕೊಂಡಿತು. ತಾಯಿ ಮತ್ತೆ ಹಾಡಮ್ಮ ಎಂದು ತಲೆ ಸವರಿ ನುಡಿಯಲು ಲಕ್ಷ್ಮಿ ಈಗ ತುಸು ಧೈರ್ಯ ಮಾಡಿದಳು. ತಿಳಿಯದ ಭಾಷೆಯಲ್ಲಿ ತಪ್ಪು ತಪ್ಪು ಶಬ್ದ ಗಳನ್ನು ಉಚ್ಚರಿಸುತ್ತ ತಮಿಳು, ತೆಲುಗು ಹಿಂದಿ ಎಂದು ಹೋಗದೆ, ಕನ್ನಡದಲ್ಲೆ ಅವಳು ಎರಡು ಹಾಡು ಹಾಡಿದಳು. ಅದು ಯಾವುದು ಎಂದು ತಿಳಿದುಕೊಂಡಿದ್ದೀರಿ? ಪುರಂದರರ "ಯಾಗೆ ರಂಗನ", "ಪಿಳ್ಳಂಗೋವಿಯ ಚೆಲ್ವಕೃಷ್ಣನ"— ಸೊಗಸಾದ ಈ ಎರಡು ಕೃತಿಗಳನ್ನು ಹಾಡುವಾಗ ಬಹಳ ನಾಚಿಕೆ ಯಿಂದಿದ್ದ ಲಕ್ಷ್ಮಿ ಹೋಗಹೋಗುತ್ತ ಸೊಗಸಾಗಿಯೇ ಹಾಡಿ

ಮುಗಿಸಿದಳು. ಬಗ್ಗಿದ ತಲೆಯನ್ನು ಮೇಲಕ್ಕೆತ್ತದೆಯೇ ಅವಳು ಹಾಡಿ ಮುಗಿಸಿದಳು. ಬಹುಶಃ ಪುರಂದರರ ಆತ್ಮ ಅವಳನ್ನು ಹರಸಿದ್ದಿರಬೇಕು ಅಲ್ಲವೆ? "ಚೆನ್ನಾಗಿ ಹಾಡುತ್ತಾಳೆ" ಎಂದು ಶಾರದಮ್ಮನವರಂದಾಗ ಜಾನಕಮ್ಮನವರ ಪ್ರತ್ಯುತ್ತರ ಮುಗುಳ್ನಗೆ ಮಾತ್ರ. ಲಕ್ಷ್ಮಿ ಹಾಡಿ ಮುಗಿಸುವವರೆಗೆ, ಗಂಡಸರೆಲ್ಲ ಮೆತ್ತೆ ಒರಗಿ ಕುಳಿತುಕೊಂಡಿದ್ದರು. ರಾಘು ಮಾತ್ರ ಆಫೀಸ್ ರೂಂನಲ್ಲಿ ಕಾರಂತರ "ಹೆತ್ತಳಾ ತಾಯಿ" ಓದುತಿದ್ದನು. ಸುಶ್ರಾವ್ಯವಾದ ಗಾನದ ನಡುವೆ, ಓದು ಮುಂದೆ ಸಾಗದೆ ಅವನು ಪುಸ್ತಕವನ್ನು ಮುಚ್ಚಿರಿಸಿದ್ದನು. ಮೈಸೂರಿಗೆ ಹಿಂದಿರುಗಿ ಪ್ರಯಾಣ ಮಾಡಲು ವರನ ಮನೆಯವರೆಲ್ಲ ಈಗ ಸಿದ್ಧರಾದರು. ವಿಶೇಷ ಔತಣ, ಉಪಚಾರಗಳೆಲ್ಲ ನಡೆಯಿತೆಂದು, ನಾನೇನೂ ಹೆಚ್ಚಿಗೆ ಬರೆಯಬೇಕಾದ್ದಿಲ್ಲ. ಐನೂರು ರೂಪಾಯಿಗಳನ್ನು ಕೊಟ್ಟು ಹೊಸದಾಗಿ ತೆಗೆದಿದ್ದ ದೊಡ್ಡ ಬಿಳೀ ಎತ್ತುಗಳನ್ನು ಕಟ್ಟಿದ ಗಾಡಿಯಲ್ಲಿ ಎಲ್ಲರೂ ಏರಿ ಕುಳಿತು ಪ್ರಯಾಣ ಮಾಡಿದರು.

## ೪೪

ಕರೆದು ಹೆಣ್ಣು ಕೊಟ್ಟರೆ ಮೊಲ್ಲೋಗರ ಹಿಡಿದುಕೊಂಡಿತೆಂದು ಒಂದು ಗಾದೆ ಹೇಳುವುದಿಲ್ಲವೆ? ರಾಘುವಿನ ಪರಿಸ್ಥಿತಿ ಹೀಗೆಯೇ ಆಯಿತು. ಗುಂಡೂರಾಯರು ನೆನಸಿದಂತೆ ಹೆಚ್ಚಿಗೆ ಈಗೇನೂ ನಡೆಯಲಿಲ್ಲ. ಹೂವಾಡಿಗನ ಮನೆಯ ಮುಂದೆ ಮಲಗಿ ನಿದ್ರೆ ಬಾರದೆ, ಮೀನಿನ ಬುಟ್ಟಿಯ ಸುವಾಸನೆಯನ್ನು ಸೇವಿಸಿದ ಮೇಲೆಯೇ ನಿದ್ದೆ ಬಂದವರ ಕಥೆಯನ್ನು ನೀವು ಕೇಳಿದ್ದೀರಲ್ಲವೆ? ರಾಘುವಿನ ಮನಃಸ್ಥಿತಿಯೂ ಹಾಗೇ ಆಗಿತ್ತು. ಪಾಳ್ಯಕ್ಕೆ ಹೋಗಿದ್ದು ಬಂದುದರಿಂದ ಬದಲಾವಣೆಯೇನೂ ಆಗ

ಲಿಲ್ಲ. ಲಕ್ಷ್ಮಿಯ ಚೆಲುವಾದ ಮುಖ ಕಂಡರೆ ಸಾಕು, ಮಗ ಒಳ್ಳೆಯ ಹಾದಿಗೆ ಬರುತ್ತಾನೆಂದು, ಗುಂಡೂರಾಯರು ನಂಬಿಕೊಂಡಿದ್ದರು. ಆದಿನ ಪಾಳ್ಯದಿಂದ ಬಂದು ಮನೆಯಲ್ಲಿಳಿದು ಕಂಪೆನಿಗೆ ಹೋದವನು ಯಥಾಪ್ರಕಾರ ಅವನು ಮನೆಗೆ ಬರಲೇಯಿಲ್ಲ. ಒಂದು ಸಮಯ ವಿವಾಹವಾದಮೇಲೂ ಇವನು ಹೀಗೇ ಇದ್ದುಬಿಟ್ಟರೆ ಏನು ಗತಿ? ಲಕ್ಷ್ಮಿಯ ಚಿತ್ರ ಗುಂಡೂರಾಯರ ಕಣ್ಮುಂದೆ ನಿಂತು, ಕ್ಷಣಕಾಲ ಅವರ ಹೃದಯ ಥಬಥಬ ಎನ್ನತೊಡಗಿತು. ದೇವರೇ ನಮ್ಮನ್ನು ಕಾಪಾಡಬೇಕೆಂದು ಅವನ ಮೇಲೆ ಭಾರಹಾಕಿದರು. ಸರೋಜಳ ಮನೆಗೆ ರಾಘು ಕಾಲಿಟ್ಟು ಐದು ದಿನಗಳಾಗಿದ್ದುವು. ಈ ಐದು ದಿನಗಳೂ ಐದು ಸಂವತ್ಸರದಂತೆ ಅವನಿಗೆ ಕಳೆದು ಹೋಗಿದ್ದುವು. ರಾಘು ಮನೆಗೆ ಕಾಲಿಟ್ಟೊಡನೆ ಸರೋಜಳ ಮೊದಲನೆ ಪ್ರಶ್ನೆ "ಹುಡುಗಿ ಚೆನ್ನಾಗಿದೆಯೇನ್ರೀ" ಎಂದು. ನಿನಗಿಂತಲೂ ಚೆಲುವೆ ಇನ್ನು ಮೇಲೆ ತಾನೆ ಹುಟ್ಟಬೇಕು ಚಿನ್ನ" ಎಂದು ನಗುತ್ತ ರಾಘು ಅವಳ ಪಕ್ಕದಲ್ಲಿ ಕುಳಿತುಕೊಂಡನು.

## ೪೫

ಮಿಗೆಯಾದ ಪ್ರೀತಿ ವಾತ್ಸಲ್ಯಗಳಿಂದ ಲಾಲಿಸಿ ಪಾಲಿಸಿದ ತಮ್ಮ ಏಕಮಾತ್ರ ಪುತ್ರಿ ಲಕ್ಷ್ಮಿಯ ವಿವಾಹಕ್ಕೆ ಅನುಕೂಲಸ್ಥರಾದ ಶಾಮರಾಯರು ಆಸಕ್ತಿವಹಿಸಿದುದು ಅಷ್ಟೇನೂ ಸೋಜಿಗದ ಸಂಗತಿಯಲ್ಲ. ಮನೆಯನ್ನು ಶುದ್ಧಪಡಿಸುವ ಕೆಲಸ ಮೊದಲು ಪ್ರಾರಂಭವಾಯಿತು. ಹೊಸದಾಗಿ ಹಂಚನ್ನು ಕೈಯಾಡಿಸಿದರು. ಮೇಲಿದ್ದ ಧೂಳು ದುಂಬೆಗಳನ್ನೆಲ್ಲ ಪೊರಕೆಯಿಂದ ಬಡಿದು ಹೋಗಲಾಡಿಸಿದರು. ರಾಮು ಕೈಯಿನಲ್ಲಿ ಹಂಬು ಹಿಡಿದು ಓಡಾಡುತಿದ್ದನು. ಆಳುಗಳಿಂದ ಕೆಲಸ ತೆಗೆಯುವುದಕ್ಕೆ ಅವನನ್ನು ಬಿಟ್ಟರೆ ಬೇರೆ ಯಾರೂ ಸಮರ್ಥರಲ್ಲ.

ನಗುನಗುತ್ತ ಅವರೊಂದಿಗೆ ಇವನೂ ಒಬ್ಬನಾಗಿ ಕೆಲಸ ಮಾಡು ತಿದ್ದನು. ಅಡಿಗೆಗೆ ಪ್ರತ್ಯೇಕವಾಗಿ ಒಂದು ಸಾಲನ್ನೇ ನಿರ್ಮಿಸ ಲಾಯಿತು. ಉದ್ದುದ್ದ ಕೊಂಬೆಗಳನ್ನು ಕಡಿದು ನಿಲ್ಲಿಸಿ ಗಳು ಗಳನ್ನು ಸೇರಿಸಿ, ತೆಂಗಿನ ಗರಿಗಳನ್ನು ಮೇಲೆ ಹೊದಿಸಿದರು. ಆರು ಒಲೆಗಳಿಗೆ ಇಡಲೆಂದು ಹದಿನೆಂಟು ಗುಪ್ಪುಗಳನ್ನು ಅಂದರೆ ಪಾತ್ರೆ ಇರಿಸಲು ಚೌಕವಾಗಿ ತಯಾರು ಮಾಡಿದ ಮಣ್ಣಿನ ಗಟ್ಟಿ ಗಳನ್ನು ತಯಾರು ಮಾಡಿದರು. ಅದಕ್ಕೆ ನೀರಾಗಿ ಕಲಸಿ ಸಗಣಿ ಸಾರಿಸಿ, ಒಣಗಲೆಂದು ಬಿಸಿಲಿನಲ್ಲಿ ಇಟ್ಟರು. ನಾಲ್ಕಾರು ಹೆಂಗಸರುಗಳು ಗೋಡೆಗೆ ಸುಣ್ಣ ಹಚ್ಚಲು ಪ್ರಾರಂಭಿಸಿದ್ದರು. ತಾಯಿಯ ಕೂಡ ಲಕ್ಷ್ಮಿಯೂ ಸೇರಿಕೊಂಡು ಕೋಣೆಗಳಲ್ಲಿದ್ದ ಸಾಮಾನುಗಳನ್ನು ಈಚೆಗೆ ಹೊತ್ತು ತರುತಿದ್ದಳು. ಇವರುಗಳಿಗೆ ಸಹಾಯಕರಾಗಿ ಅಗ್ರಹಾರದ ಕೆಲವು ಹುಡುಗಿಯರೂ ಸೇರಿ ಕೊಂಡಿದ್ದರು. ಅಟ್ಟದಲ್ಲಿದ್ದ ಸಾಮಾನುಗಳೆಲ್ಲವನ್ನೂ ಕೆಳಗಿಳಿಸ ಲಾಯಿತು. " ಲಕ್ಷ್ಮಿ ಬೇರೆ ಸೀರೆ ಉಟ್ಟುಕೊಳ್ಳೇ ಧೂಳು ತುಂಬುತ್ತೆ"ಎಂದು ತಾಯಿಯಂದಮೇಲೆ ಅವಳು ಒಂದು ಹಳೆಯ ಸೀರೆಯನ್ನುಟ್ಟು ಬಂದಳು. ಸುಣ್ಣ ಹಚ್ಚಿ ಮುಗಿದ ನಂತರ " ಕಾರಳಿ " ಎಳೆದುದಾಯಿತು. ಹಜಾರದ ಗೋಡೆಯಲ್ಲಿ ವೃಂದಾವನ ಬರೆಯಲು ರಾಮು ಕುಳಿತನು. ನಾಲ್ಕು ನಾಲ್ಕು ತಡವೆ ಉಜ್ಜಿ ಉಜ್ಜಿ ಬರೆದರೂ ಅವನಿಂದ ಸಾಧ್ಯವಾಗಲಿಲ್ಲ. ಜಾನಕಮ್ಮನವರು " ನಿನಗೆ ಬರೋಲ್ಲ ರಾಮು. ಸುಮ್ಮನೆ ಗೋಡೇನೆಲ್ಲಾ ಹಾಳ್ಮಾಡ್ತೀಯೆ " ಎಂದು ಮತ್ತೆ ಅದಕ್ಕೆ ಸುಣ್ಣ ಬಳಿಸಿದರು. ಅದು ಒಣಗಿದ ಮೇಲೆ ಜಾನಕಮ್ಮನವರ ಆಜ್ಞೆ ಯಂತೆ, ವಿಮಲ ಸುಬ್ಬುವನ್ನು ಕರೆತಂದಳು. ಅವನು ಸೊಗ ಸಾಗಿ ವೃಂದಾವನವನ್ನು ಬರೆದನು. ಚಂದ್ರ ಸೂರ್ಯರನ್ನು ಆಕಡೆ ಈಕಡೆ ಇರಿಸಿ, ಮಧ್ಯೆ ಗುಲಾಬಿ ಗಿಡವೊಂದನ್ನು ಚಿತ್ರಿಸಿ ದನು. ನಾಲ್ಕಾರು ವರ್ಣಗಳನ್ನು ಆಚೆ ಈಚೆ ಎಳೆದು, ಅದನ್ನು

ಇನ್ನೂ ಹೆಚ್ಚು ಆಕರ್ಷಕವಾಗಿ ಮಾಡಿದನು. ರಾಮಣ್ಣನವರ ಮನೆಯನ್ನೇ ಬಿಡದಿಗೆ ಬಿಡುವುದೆಂದು ನಿಷ್ಕರ್ಷೆಮಾಡಿದರು. ಅದು ಹನ್ನೆರಡು ಕಂಭದ ತೊಟ್ಟಿಮನೆ. ಅದಕ್ಕೂ ಸುಣ್ಣಗಿಣ್ಣ ಹಚ್ಚಿಸಿ ರಿಪೇರು ಮಾಡಿದರು. ಹತ್ತಾರು ಗಾಡಿ ಸೌದೆಯನ್ನು ಕಾಡಿನಿಂದ ಕಡಿಸಿ ತರಲಾಗಿತ್ತು. ಇಪ್ಪತ್ತಕ್ಕೆ ಮೇಲ್ಪಟ್ಟ ಜನ ಅದನ್ನು ಸೀಳಿ ರಾಶಿ ರ್‍ಆಶಿ ಮಾಡುತ್ತಿದ್ದರು. ಲಕ್ಷ್ಮಿ ನಗು ನಗುತ್ತ ಅವರೆಲ್ಲರಿಗೂ ಎಲೆ ಅಡಕೆಯನ್ನು ತಂದು ಕೊಡುತಿದ್ದಳು. ಅವರಲ್ಲೊಬ್ಬನು "ಲಕ್ಷ್ಮವ್ವ ಮದ್ವೆ ತಿಂಡಿ ಜಾಸ್ತಿಯಾಗಿರ್ಸಿದ್ದು ನಂಗೆ ಕೊಡಿ"ಎಂದನು. ಮತ್ತೊಬ್ಬನು "ಇನ್ಯಾನಮ್ಮ ನಮ್ನೆಲ್ಲ ಬುಟ್ಟು ಹೊಂಟೇ ಹೋಯ್ತಿದ್ದರಿ" ಎಂದನು. ಅದಕ್ಕೆ ಅವರಲ್ಲೆ ಒಬ್ಬನು "ಹೋಗ್ಲಿಬುಡಾ, ನಾವು ಮೈಸೂರ್ಗೆ ಹೋಗಿ ಫ್ರೋಜು ಗೀಜು ನೋಡ್ಕೊಂಡು ಮಾರ್ನವಿ ಹಬ್ಬೆ ಇದ್ದು ಬರ್ಬ್ಯೇದು. ಮತ್ತೆ ನಮ್ಗೊಳ್ಳಿ ಸರಾಗ್ವಾಯ್ತು"ಎಂದು ಪ್ರತ್ಯುತರಕೊಟ್ಟನು. ಇವರ ಮಾತು ಕತೆಗಳನ್ನೆಲ್ಲ ಕೇಳುತ್ತ ಲಕ್ಷ್ಮಿ ನಗುನಗುತ್ತಲೇ ಹಿಂದಿರುಗುತಿದ್ದಳು. ವಿವಾಹದ ಸಾಮಾನುಗಳನ್ನೆಲ್ಲ ಆಗಲೇ ತರಲಾಗಿತ್ತು. ಹತ್ತಾರು ಹೆಂಗಸರುಗಳು ಕುಳಿತುಕೊಂಡು ಅಕ್ಕಿ ಒನೆಯುವುದು, ಕೇರುವುದು, ಕಲ್ಲು ತೆಗೆಯುವುದು, ಇವನ್ನೆಲ್ಲ ಮಾಡುತಿದ್ದರೆ, ಮತ್ತೊಂದು ಪಕ್ಕದಲ್ಲಿ ಇನ್ನೂ ನಾಲ್ಕಾರು ಮಂದಿ ಬೀಸುವುದು, ಕುಟ್ಟುವುದು, ಮಾಡುತಿದ್ದರು. ಈಗ ಇದನ್ನು ಮನೆಯೆನ್ನದೆ "ಮಿಲ್" ಎಂದೇ ಕರೆಯಬಹುದಾಗಿದ್ದಿತು. ಪೊಟ್ಟಣಗಳನ್ನೆಲ್ಲ ಬಿಚ್ಚಿ ಡಬ್ಬಗಳಿಗೆ ಹಾಕಿ ಸಾಮುಗ್ರಿಗಳನ್ನಿಡುವ ಕೋಣೆಯಲ್ಲಿ ಇರಿಸಲಾಗುತಿತ್ತು. ಚಿತ್ರಾನ್ನಕ್ಕೆ ಬೆರಸಲು ಕಡಲೇಬೀಜ ಬೇಕಲ್ಲವೆ? ಕಡಲೆಕಾಯಿ ಎಡೆಯಲು ಅಗ್ರಹಾರದ ಹುಡುಗಿಯರೆಲ್ಲ ಕುಳಿತಿದ್ದರು. ಆಗಾಗ್ಗೆ ಅವರ ಬಾಯಿಂದ ಕಚಕ್, ಕಚಕ್ ಶಬ್ದ ಕೇಳುತಿತ್ತು. ಅಂಗಳಕ್ಕೆಲ್ಲ ಪಂಚೆ ಹಾಸಿ ಸಂಡಿಗೆ ಇಟ್ಟಿದ್ದರು. ಹಪ್ಪಳದ ಹಿಟ್ಟನ್ನು

ತಯಾರು ಮಾಡಲಾಯಿತು. ಪ್ರತಿಯೊಬ್ಬರ ಮನೆಗೂ ಹಪ್ಪಳ ಒತ್ತಲಿಕ್ಕೆಂದು ಹಿಟ್ಟಿನ ಉಂಡೆಗಳನ್ನು ಲೆಕ್ಕಮಾಡಿ ಕೊಡಲಾಯಿತು. ಜಾನಕಮ್ಮನವರೂ, ಲಕ್ಷ್ಮಿಯೂ, ಮಣೆ ಹಾಕಿಕೊಂಡು ಕುಳಿತು ಹಪ್ಪಳ ಒತ್ತುತಿದ್ದರು. ರಾಶಿಯಾದ ಮೇಲೆ ಅವಕ್ಕೆ ನೂಲುಸುತ್ತಿ, ದೊಡ್ಡಜಾಯಿಕಾಯಿ ಪೆಟ್ಟಿಗೆಯಲ್ಲಿಡುವುದು ರಾಮುವಿನ ಕೆಲಸ. ಮೈಸೂರು ಸದಾನಂದ ಭವನದ ಮಾಲೀಕ ಉಡುಪಿ ಕೇಶವಭಟ್ಟ ಶಾಮರಾಯರಿಗೆ ಚಿರ ಪರಿಚಿತನಾಗಿದ್ದನು. ಅಡಿಗೆಯನ್ನು ಸೊಗಸಾಗಿ ತಯಾರುಮಾಡುವುದಕ್ಕಾಗಿ ನಿಪುಣರಾದ ನಾಲ್ವರನ್ನು ಕಳುಹಿಸುತ್ತೇನೆಂದು ಅವನು ಒಪ್ಪಿದ್ದನು. ಮುಂಗಡವಾಗಿ ಅವನಿಗೆ ಹಣವನ್ನೂ ಶಾಮರಾಯರು ಕೊಟ್ಟು ಬಂದಿದ್ದರು. ಅವನು ಬರುವವರೆಗೆ ವಿಶೇಷ ಭಕ್ಷ್ಯಭೋಜ್ಯಗಳನ್ನು ತಯಾರಿಸಲು ಜಾನಕಮ್ಮನವರೇ ನಿಂತಿದ್ದರು. ಊರ ಕಲ್ಲಮ್ಮನನ್ನೂ ಪಾತುವನ್ನೂ ಅವರು ಸಹಾಯಕ್ಕೆ ಕರೆದುಕೊಂಡಿದ್ದರು. ರಾತ್ರಿ ಬೆಳಬೆಳಗೂ ನಿದ್ದೆಗೆಟ್ಟು ಏನೇನೋ ತಿಂಡಿಗಳನ್ನವರು ಸುಡುತಿದ್ದರು. ಊರೆಲ್ಲಾ ತಿಂಡಿವಾಸನೆ ಬೀಸಿ ಘಂ ಎನ್ನುತಿತ್ತು. ಊರೆಲ್ಲಾ ಮೌನವಾಗಿ ನಿದ್ದೆಯಲ್ಲಿ ಮುಳುಗಿದ್ದರೆ ಶಾಮರಾಯರ ಮನೆಯಲ್ಲಿ ಮಾತ್ರ ಬಾಣಲೆ ಕುಟ್ಟುವ, ಚೊಂಯ್ ಎನ್ನುವ, ಕೆಮ್ಮುವ, ಮಾತನ್ನಾಡುವ ಶಬ್ದ ಕೇಳುತಿತ್ತು. ರಾತ್ರಿ ವೇಳೆಯ ಕೆಲಸಗಳಲ್ಲಿ ಲಕ್ಷ್ಮಿ ಭಾಗ ವಹಿಸುತ್ತಿರಲಿಲ್ಲ. ಅವಳು ಬೇಗನೆ ಮಲಗಿ ನಿದ್ದೆ ಹೋಗುತಿದ್ದಳು.

## ೪೭

ಪಾಳ್ಯದಲ್ಲಿ ವಿವಾಹಕ್ಕೆಂದು ತ್ವರಿತವಾಗಿ ಕೆಲಸ ಕಾರ್ಯಗಳು ನಡೆಯುತಿದ್ದಾಗಲೇ ಶಾಮರಾಯರು ಮೈಸೂರಿಗೆ ಪ್ರಯಾಣಮಾಡಿದರು. ಪ್ರಥಮದಲ್ಲಿ ಗುಂಡೂರಾಯರ ಸಮೇತ

ತಿಪ್ಪಾಶಾಸ್ತ್ರಿಗಳಲ್ಲಿ ಹೋಗಿ ವಿವಾಹ ತೇದಿ ನಿಶ್ಚಯಮಾಡಿಸಿ ಕೊಂಡರು. ಶಾಸ್ತ್ರಿಗಳಲ್ಲಿ ಕೇಳಿ, ಅವರಿಗೆ ತಕ್ಕಂತೆ ಸಂಭಾವನೆ ಕೊಟ್ಟು, ಶಾಂತಿ ಮಾಡಿಸುವ ವಿಧಾನವನ್ನೂ ತಿಳಿದುಕೊಂಡರು. ವಿವಾಹ ನಡೆಯಿಸುವ ಪುರೋಹಿತರೇ ಶಾಂತಿ ನಡೆಸಲೆಂದು ಅದಕ್ಕೆ ತಕ್ಕ ವಿಧಾನಗಳನ್ನು ಶಾಸ್ತ್ರಿಗಳು ಹೇಳಿಕೊಟ್ಟರು. ಅನಂತರ ಇಬ್ಬರೂ ಶಾರದಾ ಮುದ್ರಣಾಲಯಕ್ಕೆ ನಡೆದರು. ಸಾವಿರದೈನೂರು ಪ್ರತಿ ವಿವಾಹ ಪತ್ರಿಕೆಗಳನ್ನು ಅಚ್ಚುಮಾಡಿಸ ಲಿಕ್ಕೆ ಅನುಮತಿ ಕೊಡಲಾಯಿತು. ಇಷ್ಟೆಲ್ಲ ಮುಗಿಸುವುದಕ್ಕೆ ಎರಡು ದಿನಗಳು ಹಿಡಿದುವು. ಇನ್ನುಳಿದಿರುವುದು ಜವಳಿ ತೆಗೆ ಯುವುದೊಂದೇ. ಈಗವರು ಪಾಳ್ಯದ ದಾರಿದಾರಿ ನೋಡು ತಿದ್ದರು. ತಾವೊಬ್ಬರೇ ದೊಡ್ಡ ವ್ಯಾಪಾರ ಮಾಡುವುದು ಸರಿ ಯಲ್ಲವೆಂದು, ಪಾಳ್ಯದಿಂದ ಬರುವಾಗ ನಂಜುಂಡರಾಯರನ್ನೂ, ಉಮಾಮಹೇಶ್ವರನನ್ನೂ ಬರ ಹೇಳಿ ಬಂದಿದ್ದರು. ಅನಂತರ ಅವರುಗಳು ಬಂದುದಾಯಿತು. ಎಲ್ಲರೂ ಒತ್ತಟ್ಟಿಗೆ “ಕಮಲಾ ಸ್ಟೋರಿಗೆ” ಸಂಜೆ ಆರು ಘಂಟೆಗೆ ಹೋಗಿ ಸೇರಿದರು. ಆ ದೊಡ್ಡದಾದ ಅಂಗಡಿಯಲ್ಲಿ ಆಗಲೇ ವಿದ್ಯುದ್ದೀಪಗಳನ್ನು ಹಾಕ ಲಾಗಿದ್ದಿತು. ನಾಲ್ಕೂ ಗೋಡೆಗಳ ಬದಿಯಲ್ಲಿ ಅಂದವಾಗಿ ಜೋಡಿಸಿದ್ದ ಗಾಜಿನ ಬೀರುಗಳಲ್ಲಿ ವಿಧವಿಧವಾದ ಬಟ್ಟೆಗಳು ಅಡಕವಾಗಿದ್ದುವು. ದೀಪದ ಪ್ರಭೆಯಿಂದ ಅವುಗಳೆಲ್ಲ ಮಿರ ಮಿರನೆ ಮಿಂಚುತಿದ್ದುವು. ಚತುರರಾದ ಕೆಲಸಗಾರರುಗಳು, ಬಂದವರನ್ನು ಸ್ವಾಗತಿಸುತ್ತ ಸಗುನಗುತ್ತಲೇ ಮಾತನಾಡುತ್ತ ಬಟ್ಟೆ ಹರಿಯುತ್ತ ಪ್ಯಾಕ್‌ಮಾಡುತ್ತ ಚಟುವಟಿಕೆಯಿಂದ ವರ್ತಿ ಸುತಿದ್ದರು. ಮಾಲೀಕ ಸೇಠ್ ಮೆತ್ತೆಯ ದಿಂಬನ್ನು ಒರಗಿ ಕೊಂಡು ಕುಳಿತು ಇತರರೊಂದಿಗೆ ಮಾತಾಡುತಿದ್ದಂತೆಯೇ ಹಣ ಎಣಿಸುವುದು, ಚಿಲ್ಲರೆ ಕೊಡುವುದು, ಮುಂತಾದುವುಗಳಲ್ಲಿ ಮಗ್ನನಾಗಿದ್ದನು. ಅದು ಬೇಡ, ಇದು ಬೇಡವೆಂದು ಒಬ್ಬರಿ

ಗೊಬ್ಬರು ಚರ್ಚಿಸುತ್ತ ಒಂದೂಕಾಲು ಘಂಟೆ ಕಳೆದ ಮೇಲೆ ಶಾಮರಾಯರ ವ್ಯಾಪಾರ ಮುಗಿಯಿತು. ವರನ ಮನೆಯವರಿಗೆ ತಮ್ಮ ಸಂಬಂಧಿಗಳಿಗೆ, ಸ್ನೇಹಿತರುಗಳಿಗೆ, ಅವರವರ ಅಂತಸ್ತಿಗೆ ತಕ್ಕಂತೆ ಕೊಡಲು, ಊರಿನಲ್ಲಿ ಪಟ್ಟಿಹಾಕಿ ಬಂದಿದ್ದುದರ ಮೇಲೆಯೇ ಈಗ ಜಾಸ್ತಿ ತೆಗೆದುದಾಯಿತು. ಅಗ್ರಹಾರದ ಸುಮಂಗಲಿ ಸ್ತ್ರೀಯರುಗಳಿಗೆ "ಸೌಲಕ್ಕಿ" ಗಾಗಿ ಕೊಡಲು ಇಪ್ಪತ್ತೈದು ರೇಶ್ಮೆ ಕಣಗಳನ್ನೂ ತೆಗೆಯಲಾಯಿತು. ಅದನ್ನು ಪಟ್ಟಿಯಲ್ಲಿ ಬರೆಯಲು ಮರೆತಿದ್ದರು. ನಂಜುಂಡರಾಯರು ಈಗ ದನ್ನು ಇಲ್ಲಿ ಜ್ಞಾಪಿಸಿದರು. ಅವರು ತಮ್ಮ ನಾಲ್ವರು ಹೆಣ್ಣು ಮಕ್ಕಳಿಗೆ ವಿವಾಹ ಮಾಡಿದ್ದುದರಿಂದ ಅನುಭವ ಅವರಿಗೆ ಜಾಸ್ತಿ ಇದ್ದಿತು. ಅಂಗಡಿಯವನು ಗಂಟುಪೊಟ್ಟಳಗಳನ್ನು ರಖಂವಾರಿಯಾಗಿ ಕಟ್ಟಿಕೊಟ್ಟನಂತರ ಮಾಲೀಕ ಸೇಠ್ ಬಿಲ್ಲನ್ನು ಶಾಮರಾಯರ ಕೈಗಿತ್ತನು. ಶಾಮರಾಯರು ಕಿಸೆಯಲ್ಲಿದ್ದ ನೋಟಿನ ಕಂತೆಯನ್ನು ಹೊರತೆಗೆದು ಒಂಭತ್ತುಸಾವಿರ ರೂಪಾಯಿಗಳನ್ನು ಅವನ ಕೈಗೆ ನೀಡಿ ಮೇಲಕ್ಕೆದ್ದರು. "ತಾವು ಇಲ್ಲಿಗೇ ಬರುತ್ತಲಿರಬೇಕು. ಬೆಲೆಯೆಲ್ಲ ಅಸಲಿಗೆ ಹಾಕಿದ್ದೇನೆ" ಎಂದು ಹೇಳಿ ಸೇಠ್ ನಗುತ್ತ ನಮಸ್ಕಾರಮಾಡಿದನು. ಅಷ್ಟು ವ್ಯಾಪಾರ ಮಾಡಿ ಮುಗಿಸುವುದರೊಳಗಾಗಿ ಇವರಿಗೆಲ್ಲ ಬೆವರು ಹರಿದಿತ್ತು. ಕಾಫಿ ಕುಡಿದರೇನೆ ಆಯಾಸ ತೀರುವುದೆಂದು ಉಮಾಮಹೇಶ್ವರ ಎಂದಮೇಲೆ, ಪಕ್ಕದಲ್ಲಿದ್ದ ವಿಜಯಾ ಕೆಫೆಗೆ ಎಲ್ಲರೂ ನುಗ್ಗಿದರು. ಒಂದೊಂದು ಸಿಹಿ, ಖಾರ, ಕಾಫಿ ಆರ್ಡರ್ ಮಾಡಲಾಯಿತು. ಆ ಸಣ್ಣದಾದ ಪ್ಲೇಟ್‌ನಲ್ಲಿ ರಸದೊಂದಿಗೆ ತಂದಿರಿಸಿದ್ದ ಗಲಾಬ್ ಜಾಮ್ ಅನ್ನು ಚಮಚದಿಂದ ಚುಚ್ಚಿ ಚುಚ್ಚಿ ಸೇವಿಸುತ್ತಿರುವಾಗಲೇ, ನಮ್ಮೀ ಮೂವರೂ ರಾತ್ರಿ ಹನ್ನೊಂದು ಘಂಟೆ ರೈಲಿನಲ್ಲಿ ಹೋಗುವುದೆಂದು ತೀರ್ಮಾನಿಸಿದರು. ಶಾಮರಾಯರು ತಮ್ಮ ಆಪ್ತರಿಬ್ಬರನ್ನೂ ಮುಂದುಗಡೆ ವರಾಂಡಾದಲ್ಲಿ ಕುಳ್ಳಿರಿಸಿ,

ತಾವು ಗುಂಡೂರಾಯರ ಮನೆಗೆ ಹೋಗಿದ್ದು ಬರುವುದಾಗಿ ತಿಳಿಸಿದರು. ಹಾಗೇ ಆಗಲೆಂದು ಇವರುಗಳು ಗಂಟುಮೂಟೆಯನ್ನು ಪಕ್ಕದಲ್ಲಿರಿಸಿಕೊಂಡು ರೇಡಿಯೊ ಹಾಡಿಗೆ ತಲೆಯಲ್ಲಾಡಿಸುತ್ತ ಕುಳಿತುಕೊಂಡರು. ಗುಂಡೂರಾಯರ ಮನೆಯಿಂದ ಶಾಮರಾಯರು ಹಿಂದಿರುಗಿದಾಗ ಘಂಟೆ ಒಂಭತ್ತು ಕಳೆದಿತ್ತು. ಬಂದೊಡನೆಯೇ ಇವರೀರ್ವರನ್ನೂ ಊಟ ತೀರಿಸಲಿಕ್ಕಾಗಿ ಹೋಟಲಿನ ಒಳಗಡೆ ಕರೆದುಕೊಂಡು ಹೋದರು. ಬಾಡಿಗೆ ಗಾಡಿಯಲ್ಲಿ ಸಾಮಾನುಗಳೆಲ್ಲವನ್ನೂ ಏರಿಸಿ ಇವರೆಲ್ಲರೂ ರೈಲ್ವೆ ಸ್ಟೇಷನ್ ಬಂದು ಸೇರಿದಾಗ ಮೈಸೂರಿನ ದೊಡ್ಡಗಡಿಯಾರ ಢಾಣ್ ಢಾಣ್ ಎಂದು ಹತ್ತು ಘಂಟೆ ಹೊಡೆಯಿತು.

## ೪೭

ಇತ್ತ ಗುಂಡೂರಾಯರ ಮನೆಯಲ್ಲೂ ವಿವಾಹಕ್ಕೆ ಅಣಿಯಾಗ ತೊಡಗಿತು. ಶಾರದಮ್ಮನವರಿಗೆ ಮೇರೆ ಮೀರಿದ ಆನಂದ. ಬಹುಕಾಲ ಕಳೆದ ಮೇಲೆ ತಮ್ಮ ಒಬ್ಬನೇ ಮಗನಿಗೆ ಈಗ ತಾನೆ ಅವರು ಮಂಗಳಕಾರ್ಯ ನಡೆಸುತಿದ್ದಾರೆ. ಗುಂಡೂರಾಯರು ಶಾರದಾ ಮುದ್ರಣಾಲಯಕ್ಕೆ ಹೋಗಿ ಅಚ್ಚಾಗಿದ್ದ ಪತ್ರಿಕೆಗಳನ್ನೆಲ್ಲ ತೆಗೆದುಕೊಂಡು ಬಂದು, ಅರ್ಧ ತಾವಿರಿಸಿಕೊಂಡು, ಮಿಕ್ಕರ್ಧ ಬುಕ್‌ಪೋಸ್ಟ್‌ನಲ್ಲಿ ಪಾಕ್ಯಕ್ಕೆ ಕಳುಹಿಸಿದರು. ಬಹುಬೆಲೆ ಕೊಟ್ಟೇ ಅವರೂ ಜವಳಿ ತೆಗೆದರು. ವರನ ಮನೆಯವರೂ ಒಂದು ದಿನ ಔತಣ ನೀಡಬೇಕಲ್ಲವೇ? ಪಾಕ್ಯ ಕಾಡುಸೀಮೆಯಾಗಿದ್ದುದರಿಂದ ಸಾಮಗ್ರಿಗಳೆಲ್ಲವನ್ನೂ ಇಲ್ಲಿಂದಲೇ ಸಾಗಿಸಬೇಕಾಗಿದ್ದಿತು. ಮೈಸೂರಿನಿಂದಲೇ ಎಲ್ಲವನ್ನೂ ಸಾಗಿಸುವುದು ಕಷ್ಟವಾದುದರಿಂದ, ಹೆಚ್ಚಿಗೆ ಸಾಮಾನುಗಳೆಲ್ಲವನ್ನೂ ಚಾಮರಾಜನಗರದಲ್ಲಿ ತೆಗೆದುಕೊಳ್ಳುವುದೆಂದು ತಿರ್ಮಾನಿಸ

ಲಾಯಿತು. ಚೈತ್ರ ಬಹುಳ ಹದಿನಾರರಲ್ಲಿ ರಾಘು ಲಕ್ಷ್ಮಿಯ ಕೈಹಿಡಿಯಬೇಕಾಗಿದ್ದ ದಿನವಾಗಿದ್ದಿತು. ಆ ತೇದಿಯೂ ಸಮೀಪಿಸುತ್ತ ಬಂದಿತು. ಗುಂಡೂರಾಯರೊಮ್ಮೆ ನಂಜನಗೂಡಿಗೂ ಹೋಗಿದ್ದು, ಶ್ರೀನಿವಾಸರಾಯರನ್ನು ಆಹ್ವಾನಿಸಿ ಬಂದಿದ್ದರು. ಒಟ್ಟು ಲೆಕ್ಕಹಾಕಲಾಗಿ ಮೈಸೂರಿನಿಂದ ಪಾಳ್ಯಕ್ಕೆ ಹೊರಡುವವರು ಐವತ್ತು ಮಂದಿಗೆ ಮೇಲ್ಪಟ್ಟಿದ್ದರು. ತಮ್ಮ ಬಂಧುವರ್ಗದವರಲ್ಲದೆ ಕುಟ್ಟಪ್ಪನ ಮನೆಯವರು, ಶೆಟ್ಟರು, ಈ ಲೆಕ್ಕದಲ್ಲಿ ಅಡಕವಾಗಿದ್ದರು. ಗುಂಡೂರಾಯರು ತಮ್ಮ ಸೋದರಳಿಯ ಕೇಶವನನ್ನು ನಂಜನಗೂಡಿನಿಂದ, ವಿವಾಹತೇದಿ ಇನ್ನೂ ಹದಿನೈದು ದಿನಗಳು ಇರುವಾಗಲೇ, ಕರೆದುಕೊಂಡು ಬಂದಿದ್ದರು. ಅವನು ಚಿಕ್ಕ ಹುಡುಗನಾಗಿ ಓಡಾಡುತ್ತಲಿದ್ದುದರಿಂದ, ಶಾರದಮ್ಮನವರಿಗೂ ಬಹಳ ಬೇಕಾದವನಾಗಿದ್ದನು. ಸಾಮಾನು ಕೊಳ್ಳುವುದು, ಬಿಡುವುದು, ಯೋಚನೆ ಹೇಳುವುದರಲ್ಲೆಲ್ಲ ಅತ್ತೆ ಮಾವಂದಿರಿಗೆ ಅವನು ನೆರವಾಗುತಿದ್ದನು. ಕೇಶವ "ಮಾರುತಿ" ಕಂಪೆನಿಗೂ ಒಂದು ದಿನ ಭಾವ ರಾಘುವನ್ನು ನೋಡಲು ಹೋಗಿದ್ದನು. ಆದರೆ ಅವನನ್ನು ರಾಘು ಸರಿಯಾಗಿ ಆದರಿಸಲೇ ಇಲ್ಲ. "ಬಂದೆಯಾ" ಎಂದಿಷ್ಟು ಮಾತ್ರ ಕೇಳಿದನು. ಕೇಶವ ವಯಸ್ಸಿನಲ್ಲಿ ಚಿಕ್ಕ ಹುಡುಗನಾಗಿದ್ದರೂ ವಿಷಯಗಳನ್ನು ಗ್ರಹಿಸುವುದರಲ್ಲಿ ಬಹಳ ಸಮರ್ಥನಾಗಿದ್ದನು. ತನ್ನ ಮನೆಯಲ್ಲಿದ್ದಾಗ ತನ್ನ ತಂದೆತಾಯಿಗಳು ಮೈಸೂರಿನ ಪ್ರಸ್ತಾಪವನ್ನೂ, ರಾಘುವಿನ ಚರಿತ್ರೆಯನ್ನೂ, ಆಗಾಗ್ಗೆ ಎತ್ತುತಿದ್ದುದುಂಟು. ಆದುದರಿಂದ ಸರೋಜ ಎಂಬುವಳೊಬ್ಬಳು ಈ ಕಂಪೆನಿಯಲ್ಲಿ ಕೆಲಸಮಾಡುತ್ತಿರುವುದಾಗಿ ಅವನು ತಿಳಿದುಕೊಂಡಿದ್ದನು. ಅವಳೆಂಥ ರೂಪವತಿಯೊ ನೋಡಬೇಕೆಂಬ ಹಂಬಲ ಅವನಿಗೆ ಮಿಗೆಯಾಗಿತ್ತು. ಸಾಯಂಕಾಲ ಕಂಪೆನಿ ಮುಚ್ಚುವವರೆಗೂ ಅವನು ಅಲ್ಲಿ ಇಲ್ಲಿ ಓಡಾಡುತ್ತಲಿದ್ದು, ಈಗ ರಾಘುವನ್ನು ಹಿಂಬಾಲಿಸಿ ನಡೆದನು.

ಈಗವನು ಸರೋಜಳ ಮನೆಯನ್ನು ಪತ್ತೆಹಚ್ಚಿಕೊಂಡುದಲ್ಲದೆ, ಅವಳನ್ನೂ ತಿಳಿದುಕೊಂಡನು. ಮನೆಗೆ ಹೋಗಿ ತಾನೊಂದು ಹೊಸ ಸಾಹಸದಲ್ಲಿ ಜಯಗಳಿಸಿದೆನೆಂದು ಅತ್ತೆಯ ಕೂಡ ಹೇಳಲು ನಿರ್ಧರಿಸಿ ಅವನು ಓಡಿದನು.

## ೪೮

ರಾಯಲ್ ಹಾಲ್ ಮೈಸೂರಿನಲ್ಲೇ ಅತಿ ದೊಡ್ಡದಾದ ಬ್ರಾಂದಿ ಅಂಗಡಿ. ಅವರವರ ಅಂತಸ್ತಿಗೆ ತಕ್ಕಂತೆ ಪಾನಗಳು ಅಲ್ಲಿ ಸಿದ್ಧವಾಗಿರುತಿದ್ದುವು. ದುರ್ಜನರ ಕೂಡ ಒಡನಾಡೆ........ ಸರ್ವಜ್ಞನ ಪದವನ್ನು ನೀವು ಕೇಳಿಲ್ಲವೇ ? ರಾಘುವಿನ ಪರಿಸ್ಥಿತಿ ಹೀಗೆಯೇ ಆಯಿತು. ಸಹವಾಸದ ದೋಷದಿಂದ, ಅವನ ಮಿತ್ರರುಗಳು ಅವನಿಗೀಗ ಕುಡಿಯುವುದನ್ನು ಕಲಿಸಿಬಿಟ್ಟಿದ್ದರು. ರಾಘುವಿನ ಸಂಬಳ ಈಗ ಖರ್ಚಿಗೆ ಸಾಕಾಗುತ್ತಿರಲಿಲ್ಲ. ಸರೋಜಳ ಸಂಸಾರವನ್ನು ನಡೆಯಿಸಿಕೊಂಡು, ಇತ್ತ ಬ್ರಾಂದಿ ಅಂಗಡಿಗೂ ಸುರಿಯಲು, ಬರೀ ಅರವತ್ತು ರೂಪಾಯಿಗಳು ಹೇಗೆ ನಾಕಾದೀತು ? ಈಗವನು ಮೆಲ್ಲಮೆಲ್ಲನೆ ಕಳ್ಳವ್ಯಾಪಾರವನ್ನು ಮಾಡಲು ಪ್ರಾರಂಭಿಸಿದನು. ಧನಪಾಲಶೆಟ್ಟರ ಪುತ್ರರುಗಳು ಹೈಸ್ಕೂಲಿನಲ್ಲಿಯೂ, ಕಾಲೇಜಿನಲ್ಲಿಯೂ, ವ್ಯಾಸಂಗಮಾಡುತ್ತಿದ್ದರು. ಶೆಟ್ಟರು ಎಲ್ಲಾ ಸಮಯಗಳಲ್ಲಿಯೂ ಕಂಪೆನಿಯಲ್ಲಿರುತ್ತಿರಲಿಲ್ಲ. ಅವರು ರಾಘುವನ್ನು ಬಹಳ ಪ್ರಾಮಾಣಿಕನೆಂದು ಬಗೆದು, ಅವನಿಗೇ ಜವಾಬ್ದಾರಿ ವಹಿಸಿ ಹೋಗುತ್ತಿದ್ದರು. ಇಂಥ ಸಂದರ್ಭಗಳನ್ನು ಈಗವನು ತನ್ನ ಸ್ವಾರ್ಥಕ್ಕಾಗಿ ಉಪಯೋಗಿಸಿಕೊಂಡನು. ಹತ್ತು ದಿನ ಕದ್ದವನು ಒಂದು ದಿನ ಸಿಗಲಾರನೇ ? ಈ ಸಂಗತಿ ಶೆಟ್ಟರ ಕಿವಿಗೂ ಬಿದ್ದಿತು. ಅವರು ಇದನ್ನು ಗಣನೆಗೆ ತರಲೇಯಿಲ್ಲ. ಆದರೆ ಅದೇ ಕಂಪೆನಿಯಲ್ಲಿ ಕೆಲಸಮಾಡುತಿದ್ದ ಕಿಟ್ಟು,

ರಾಘುವಿಗೆ ಪ್ರ ಬ ಲ ವಿರೋಧಿಯಾಗಿದ್ದನು. ಸರೋಜಳ ಮತ್ತೊಬ್ಬ ಗಿರಾಕಿ ಅವನು. ಒಬ್ಬ ಹೆಂಗಸನ್ನೇ ಅಪೇಕ್ಷಿಸುವ ಇಬ್ಬರು ಗಂಡಸರೊಳಗೆ, ಹಗೆ ಬೆಳೆಯುವುದು, ಅಷ್ಟೇನೂ ಸೋಜಿಗದ ಸಂಗತಿಯಲ್ಲ. ಹೇಗಾದರೂ ಮಾಡಿ ರಾಘುವನ್ನು ಕೆಳಕ್ಕೆಎಳೆಯಬೇಕೆಂಬುದು ಅವನ ಹಠ. ರಾಘು ಬ್ರಾಂದಿ ಅಂಗಡಿಯಲ್ಲಿ ನಾಲ್ಕಾರು ಮಿತ್ರರುಗಳೊಂದಿಗೆ ಮಧುಪಾನ ಮಾಡುವುದು, ಸರೋಜಳಿಗೆ ವಿಧವಿಧವಾದ ಉಡಿಗೆ ತೊಡಿಗೆ ಗಳನ್ನು ತೆಗೆದುಕೊಡುವುದು, ಇಷ್ಟಕ್ಕೆಲ್ಲ ಇವನ ಸಂಬಳ ಸಾಲ ದೆಂದು ಅವನಿಗೆ ತಿಳಿದಿದ್ದಿತು. ರಾಘು ಶ್ರೀಮಂತರ ಪುತ್ರನೇನೋ ಹೌದು! ಆದರೆ ಮನೆಯಿಂದವನಿಗೆ ಒಂದು ಬಿಡಿಕಾಸೂ ದೊರ ಕುವ ಹಾಗಿರಲಿಲ್ಲ. ಕಿಟ್ಟು ಏನೇನಲ್ಲ ಮನಸ್ಸಿನಲ್ಲೆ ಯೋಚಿಸ ತೊಡಗಿದನು. ಹೇಗಾದರೂ ಮಾಡಿ ರಾಘುವನ್ನು ಅವಮಾನ ಗೊಳಿಸಬೇಕೆಂದು ಅವನು ನಿರ್ಧರಿಸಿದನು. ಸರೋಜ ರಾಘುವಿನ ಅಧೀನದಲ್ಲಿ ಹೆಚ್ಚಾಗಿರುತ್ತಾಳೆಂದೇ ಅವನಿಗೀ ದ್ವೇಷ! ಶೆಟ್ಟರಲ್ಲಿ ತಾನೇ ನೇರ ನಿಂತು ಮಾತನಾಡುವ ಧೈರ್ಯ ಕಿಟ್ಟುವಿಗಿಲ್ಲ. ಏಕೆಂದರೆ ಕಂಪೆನಿಯ ಪ್ರತಿಯೊಬ್ಬ ಕೆಲಸಗಾರರ ಗುಣವನ್ನೂ ನಡತೆಯನ್ನೂ ಶೆಟ್ಟರು ಚೆನ್ನಾಗಿ ಅರಿತವರಾಗಿದ್ದರು. ಕಿಟ್ಟು ಮೊದಲನೇ ನಂಬರ್ ಪೋಲಿಯೆಂದು ಅನೇಕ ವೇಳೆ ಅವರನ್ನು ತಿನ್ದುದುಂಟು. ರಾಘು ಹದಗೆಟ್ಟಿದ್ದರೂ ದೊಡ್ಡವರ ಮನೆಯ ಹುಡುಗ, ಎಷ್ಟೆಂದರೂ ಅವನಲ್ಲಿ ಘನತೆ ಗಾಂಭೀರ್ಯವಿದೆ ಎಂದು ಅವರ ಅಭಿಪ್ರಾಯ. ಕಿಟ್ಟು ಈಗ ಶೆಟ್ಟರ ಹಿರಿಯಮಗ ಕೋದಂಡನಲ್ಲಿ ಒಂದಕ್ಕೆ ಎರಡು ಸೇರಿಸಿ, ರಾಘುವಿನ ಮೇಲೆ ಚಾಡಿ ಹೇಳಲಾರಂಭಿಸಿದನು. ಕೋದಂಡನೀಗ ಇಂಟರ್‌ನಲ್ಲಿ ವ್ಯಾಸಂಗ ಮಾಡುತಿದ್ದಾನೆ. ತಂದೆಯಂತೆಯೇ ಅವನೂ ದಯಾಳುವಾದರೂ ಬಹಳ ಮುಂಗೋಪಿ. ಮನೆಯಲ್ಲೊಂದು ದಿನ ಏನೋ ಮಾತು ಬೆಳೆದು, ಕಾಫಿ ಕುಡಿಯುತಿದ್ದ ಗಾಜಿನ

ಗ್ಲಾಸನ್ನೇ ಕೋಪದ ರಭಸದಲ್ಲಿ ನೆಲಕ್ಕೆ ಕುಕ್ಕಿ, ಕೈಯೆಲ್ಲ ಚುಚ್ಚಿಸಿಕೊಂಡು ಹದಿನೈದು ದಿನಗಳ ಮೇಲೆ ಗುಣ ಹೊಂದಿದ ವನವನು. ಅವನಿಗೆ ಕೋಪ ಬಂದರೆ ತೀರಿತು, ಸುಂಟರ ಗಾಳಿ ಹಾಗೆ. ಕಿಟ್ಟುವಿನ ಚಾಡಿಗೆ ಈಗವನು ಸ್ವಲ್ಪ ಸ್ವಲ್ಪ ಕಿವಿ ಗೊಡಲಾರಂಭಿಸಿದನು. ಆದರೆ ಸುಮ್ಮನೆ ಒಬ್ಬರ ಮೇಲೆ ಸಂದೇಹಪಡುವುದು ಸರಿಯಲ್ಲವೆಂದೂ ಯಾರೇ ಆಗಲಿ ಉಂಡ ಅನ್ನಕ್ಕೆ ದ್ರೋಹ ಬಗೆಯುವುದಾದನೆ ಅಂಥವನನ್ನು ಹೊರಗಟ್ಟ ಲಾಗುವುದೆಂದೂ, ರಾಘು ನಿಷ್ಕಪಟಿಯೆಂದು ಕಂಡುಬಂದಲ್ಲಿ, ಕಿಟ್ಟನನ್ನೇ ಕಂಪೆನಿ ಬಿಟ್ಟು ಓಡಿಸುತ್ತೇನೆಂದೂ, ಕಿಟ್ಟುವಿಗೆ ಅವನು ನುಡಿದಿದ್ದನು. ಕಿಟ್ಟು ಇದಕ್ಕೆ ಮಣಿಯುವವನೇನೂ ಅಲ್ಲ. ಕಂಪೆನಿಗೆ ರಾಘು ಮೋಸ ಮಾಡುತ್ತಿರುವುದನ್ನು ತಾನೇ ಬಯಲಿಗೆಳೆದು ರುಜುವಾತುಪಡಿಸುವುದಾಗಿ ಕೋದಂಡನಿಗೆ ವಾಗ್ದಾನವಿತ್ತನು. ಈ ಪರಿಣಾಮದಿಂದ ಎಂಪೋ ಒಂದು ದಿನ ಕಂಪೆನಿಗೆ ಕಾಲಿಡುತಿದ್ದ ಕೋದಂಡ, ತನಗೆ ಬಿಡುವು ದೊರೆ ತಾಗಲೆಲ್ಲ ಕಂಪೆನಿಯಲ್ಲೆ ಸುತ್ತಾಡಲು ಪ್ರಾರಂಭಿಸಿದನು.

## ೪೯

ಚೈತ್ರಮಾಸ ಹದಿನಾಲ್ಕನೇ ತೇದಿ ಬಂದಿತು. ಪಾಳ್ಯದಿಂದ ಹದಿನಾಲ್ಕು ಗಾಡಿಗಳು ಚಾಮರಾಜನಗರದತ್ತ ಹೊರಟುವು. ವರನನ್ನು ಕರೆಯಲು ಅಗ್ರಹಾರದ ನಾಣುವನ್ನು ರಾಮರಾಯರು ಕಳುಹಿಸಿದ್ದರು. ರಾಮು ಮನೆ ಬಿಟ್ಟು ಈಗ ಬರಲು ಸಾಧ್ಯ ವಿಲ್ಲದುದರಿಂದ, ಅವನು ಗಾಡಿಗಳ ಕೂಡ ಹೊರಡಲು ಆಗಲಿಲ್ಲ. ಪಾಳ್ಯಕ್ಕೆ ಹೊರಡುವ ಗುಂಡೂರಾಯರ ಸೇನೆ ಸ್ಟೇಷನ್ ಬಂದು ಸೇರಿತು. ಧನಪಾಲಶೆಟ್ಟರು ತಮ್ಮಿಂದ ಬರಲು ಸಾಧ್ಯವಿಲ್ಲೆಂದು ತಮ್ಮ ಕಿರೀಹುಡುಗ ಸದಾನಂದನನ್ನು ಕಳುಹಿಸಿದ್ದರು. ಕುಟ್ಟಪ್ಪ

ಮತ್ತು ಅವನ ಪತ್ನಿ ಗಿರಿಜಮ್ಮ, ಈ ಗುಂಪಿನಲ್ಲಿದ್ದಾರೆಂದು ಬರೆಯಬೇಕಾದುದೇ ಇಲ್ಲ. ಎಲ್ಲರೂ ರೈಲು ಹತ್ತಿ ನಂಜನ ಗೂಡಿಗೆ ಬಂದಾಗ, ಶ್ರೀನಿವಾಸರಾಯರ ಮನೆಯವರೂ ಇವರ ಕೂಡ ಸೇರಿಕೊಂಡರು. ಒಟ್ಟಿನಲ್ಲಿ ಹೇಳುವುದಾದರೆ ಆ ದಿನದ ರೈಲಿನಲ್ಲಿ ಗುಂಡೂರಾಯರ ಬಳಗದವರೇ ತುಂಬಿದ್ದರು. ಎಲ್ಲರೂ ಚಾಮರಾಜನಗರದಲ್ಲಿ ಬಂದಿಳಿದರು. ಈಗ ಗುಂಡೂರಾಯರು ಶ್ರೀನಿವಾಸರಾಯರನ್ನು ಸಹಾಯಕ್ಕೆ ಕರೆದುಕೊಂಡು ಅಂಗಡಿ ಬೀದಿಗೆ ಹೋಗಿ ಸಾಮಾನುಗಳೆಲ್ಲವನ್ನೂ ತೆಗೆದರು. ಪೆಟ್ಟಿಗೆ, ಹಾಸಿಗೆ, ಧಾನ್ಯದ ಚೀಲಗಳೇ ಮೂರು ಗಾಡಿ ಭರ್ತಿಯಾದುವು. ಮಿಕ್ಕುಳಿದ ಹನ್ನೊಂದು ಗಾಡಿಗೆ ಅಲ್ಲಿಯ ಜನ ಜಾಸ್ತಿಯಾಗಿ ದ್ದರೂ ಹಾಗಾಗೇ ಸರಿಮಾಡಿ ಕುಳಿತುಕೊಂಡರು. ಗಾಡಿಗಳು ಹೊರಟುವು. ಬಲಿಷ್ಠವಾದ ಆ ಎತ್ತುಗಳು ತಾವು ಹೊತ್ತಿರುವ ಭಾರವನ್ನೂ ಲಕ್ಷಿಸದೆ, ಲೆಕ್ಕವಿಲ್ಲದಂತೆ ಗಾಡಿಯನ್ನು ಜಗ್ಗಿಸು ತಿದ್ದುವು. ಅವುಗಳ ಕೊರಳಿಗೆ ಕಟ್ಟಿದ್ದ ಘಂಟೆಸರ ಉದ್ದಕ್ಕೂ ಅಲ್ಲಾಡುತ್ತ ಝಣ ಝಣ, ಎಂದು ಶಬ್ದ ಗೈಯುತ್ತಿತ್ತು. ರಸ್ತೆ ಸರಿಯಿಲ್ಲದುದರಿಂದ ಮೇಡು, ಹಳ್ಳಗಳಲ್ಲಿ ಒಂದು ಓರ ವಾಗುವುದೂ ಉಂಟು. ಒಳಗೆ ಕುಳಿತಿದ್ದವರೆಲ್ಲ ಅಂಥ ಸಮಯ ಗಳಲ್ಲಿ ಹೆಚ್ಚು ಭಯಪಡುತಿದ್ದರು. ಆದರೆ ಗಾಡಿ ಬಿಡುವುದ ರಲ್ಲಿ ಚತುರರಾದ ಹಳ್ಳಿಗರು ಇಂಥ ಸ್ಥಳಗಳಲ್ಲಿ ಹಗ್ಗವನ್ನು ಹಿಡಿದು ಎತ್ತುಗಳನ್ನು ಒಂದು ಸ್ತಿಮಿತಕ್ಕೆ ನಿಲ್ಲಿಸಿ, ಮೆಲ್ಲಮೆಲ್ಲಗೆ ಸಡಿಲ ಬಿಡುತ್ತ ಅಪಾಯವಿಲ್ಲದಂತೆ ವರ್ತಿಸುತಿದ್ದರು. ಎತ್ತ ನೋಡಿದರೂ ಹಚ್ಚ ಹಸುರಾಗಿ ಬರೇ ಮರಗಳೇ ಕಾಣಿಸುತ್ತ, ಝೇಂಕಾರ ಶಬ್ದ ಗೈಯುತ್ತಿರುವ ಈ ದಟ್ಟವಾದ ಕಾಡನ್ನು ನೋಡಿ, ಗಾಡಿಯಲ್ಲಿದ್ದ ಅನೇಕರಿಗೆ ವಿಸ್ಮಯದೊಂದಿಗೆ ಭಯವೂ ಆವರಿಸಿತ್ತು. ದಾರಿಯಲ್ಲಿ ಹುಲಿ ಆನೆ ಬಂದರೆ ಏನಮ್ಮಗತಿ ಎಂದಂದುಕೊಂಡರು. ಅಂಥದಕ್ಕೆಲ್ಲ ನಾನಿದ್ದೇನೆ, ಎಂದು

ಕುಟ್ಟಪ್ಪ ಉತ್ತರಕೊಟ್ಟನು. ನೀವ್ಯಾನ್ಬುದ್ಧಿ ಇಷ್ಟಾಬಯ್ಪುಟ್ಟರಿ, ನಾವೊಬ್ಬಬ್ರೇ ಇಲ್ಲಿ ತಿರುಗಾಡ್ತಿವಿ–ಎಂದು ಗಾಡಿ ಹೊಡೆಯುವ ಮರಯ್ಯ ಮೀಸೆ ತಿರುಗಿಸಿದನು. ಗಾಡಿ ಚಕ್ರಗಳು ಕೊರಕಲು ಗುಳಿಗೆ ಬಿದ್ದು ಮತ್ತೆ ಮೇಲೆ ಉರುಳುವಾಗ ಒಂದು ಕುಲುಕು ಕುಲುಕಿ, ಒಳಗಿದ್ದವರೆಲ್ಲ ಅನೇಕ ವೇಳೆ ಡ್ರಿಲ್ ಮಾಡಿದ ಹಾಗೆ ಆಗುವುದೂ ಉಂಟು. ಇಂಥದೇ ಒಂದು ಸಂದರ್ಭದಲ್ಲಿ ಸೊಗಸುಗಾತಿಯೊಬ್ಬಳ ತಲೆ ಗಾಡಿಗೆ ಬಡಿದು, ಅವಳಿಗೆ ಬಹಳ ಯಾತನೆಯನ್ನುಂಟುಮಾಡಿತು. ಅವಳೀಗ ತನ್ನ ಆತ್ರವನ್ನು ಮುಚ್ಚಲು ಸಾಧ್ಯವಾಗಲೇಯಿಲ್ಲ. " ಹಾಳು ಮದುವೆಗೆ ಏಕೆ ಬಂದೆನೋ " ಎಂದೇ ಬಿಟ್ಟಳು. ಅವಳ ಪತಿರಾಯ ತನ್ನ ಎರಡೂ ಕೈಗಳಿಂದ ಅವಳ ಬಾಯಿ ಮುಚ್ಚಿ " ಸುಮ್ಮನಿರೀ, ಹಾಗೆಲ್ಲ ಅನ್ನಬೇಡ ಕಣೇ; ನಮಗೊಂದು ದಿನ ಇಲ್ಲಿ ಬರಲು ಕಷ್ಟ. ನಿರಂತರವೂ ಇಲ್ಲೇ ವಾಸಿಸುವವರಿಗೆ ಎಷ್ಟು ಕಷ್ಟವಿದೆ ನೋಡು, ಎಲ್ಲವನ್ನು ಸರಿಪಡಿಸಿಕೊಳ್ಳಬೇಕು " ಎಂದು ಸಮಾಧಾನ ಮಾಡಿದನು. ನಾವೇನು ದಂಡಕಾರಣ್ಯಕ್ಕೆ ಹೋಗುತಿದ್ದೇವೆಯೊ, ಇಲ್ಲವೆ ಪಂಚವಟಿಗೋ, ಎಂದು ಒಬ್ಬ ಪ್ರಶ್ನಿಸಿದಾಗ, ಅವರಲ್ಲೊಬ್ಬನು ಎರಡೂ ಇಲ್ಲ ಮಿಥಿಲಾಪುರಿಗೆ ಎಂದುತ್ತರವಿತ್ತನು. ಚರಖಾದಲ್ಲಿ ನೀವೆಂದಾದರೂ ನೂತಿದ್ದೀರಾ? ಅದಕ್ಕೆ ಬಹಳ ತಾಳ್ಮೆ, ಸಹನೆ ಬೇಕು. ಸ್ವಲ್ಪ ದುಡುಕಿದಿರೂ ನೂಲು ಕಿತ್ತು ಮನಸ್ಸಿಗೆ ಬೇಜಾರಾಗುತ್ತದೆ. ಮಾನವನಿಗಿರಬೇಕಾದ ಪ್ರಧಾನ ಗುಣಗಳಲ್ಲಿ ತಾಳ್ಮೆಯೇ ಅತಿ ಮುಖ್ಯವಾದುದು. ಈ ಕಾರಣದಿಂದಲೋ ಏನೋ ಬಾಪುಜಿ ಭಾರತೀಯರಿಗೆ ಚರಖಾ ನೀಡಿದ್ದಾರೆ. ಅದರ ಮೂಲಕವಾದರೂ ತುಸು ತಾಳ್ಮೆಯನ್ನು ಅವಲಂಬಿಸಲೆಂಬುದು ಅದರ ಅರ್ಥವಾಗಿರಬೇಕು. ಪಟ್ಟಣಿಗರಲ್ಲಿ ಹೆಚ್ಚು ಜನಕ್ಕೆ ತಾಳ್ಮೆ ಕಡಿಮೆಯೆಂದು ನನ್ನ ಅಭಿಪ್ರಾಯ. ಅವರ ಜೀವನ ಕ್ರಮವೇ ಹಾಗೆ, ರಭಸ ಜಾಸ್ತಿ.

ಒಂದು ಬೀದಿಯಿಂದ ಮತ್ತೊಂದು ಬೀದಿಗೆ ಹೋಗಬೇಕಾದರೆ, ಒಂದಾಣೆಕೊಟ್ಟು ಬಸ್‌ನಲ್ಲೇರಿ ಭರ್‍ರೆಂದು ಹೋಗಿಳಿಯುವುದು, ಸೈಕಲ್ ತುಳಿದು ನಿಮಿಷಗಳ ಲೆಕ್ಕದಲ್ಲೇ ಮಾರ್ಕಟ್ಟಿಗೆ ಹೋಗಿ ಕಾಯಿಪಲ್ಯ ತರುವುದು, ಆಫೀಸಿಗೆ ಹೋಗುವುದು ಬರುವುದು, ಸಿನಿಮಾ ನೋಡುವುದು, ಎಲ್ಲ ಜರೂರು ಜರೂರೇ. ಕೊನೆಗೆ ಮಾತಾಡುವುದು ಸಹ ಷಾರ್ಟ್‌ಹ್ಯಾಂಡ್ ಲೆಕ್ಕದಲ್ಲೇ. ಮಾಡುವುದನ್ನೆಲ್ಲ ಭರಭರನೆ ಮುಗಿಸಬೇಕು ಎನ್ನುವ ಕಾಲ ಇದು. ಇಪ್ಪತ್ತು ಮೈಲುಗಳಿಗೆ ಮೇಲ್ಪಟ್ಟ ಪ್ರಯಾಣವನ್ನು ಗಾಡಿಯಲ್ಲೇ ಕಳೆಯಬೇಕೆಂದರೆ ಅದು ಒಗ್ಗಿದವರಿಗೇ ಸಾಧ್ಯ, ಮತ್ತಿತರರಿಗೆ ಬೇಜಾರು. ಆದರೆ ನನ್ನ ಅಭಿಪ್ರಾಯ ಬೇರೆ. ಸುತ್ತಮುತ್ತಲೂ ಹಚ್ಚಹಸುರಾಗಿ, ಎತ್ತುಗಳ ಕೊರಳಿನ ಘಂಟೆಗಳ ನಿನಾದದೊಡನೆ, ಆಳುಗಳ ಕೂಗಿನ ಶಬ್ದಮೊಂದಿಗೆ, ನೀವೆಂದಾದರೂ ಒಂದು ದಿನ ಪಯಣ ನಡೆಸಬೇಕೆಂದು ನಿಮಗೆ ಸಲಹೆ ಕೊಡುತ್ತೇನೆ. "ಬೇಗ ಮನ್ಗೆ ಸೇರ್‍ಸೊ, ನಮ್ಮಪ್ಪಾ" ಎಂದು ಗಾಡಿ ಬಿಡುವವನು ಎತ್ತಿನ ಬಾಲ ನುಲಿದಾಗ, ಆಗಲೆಂಬಂತೆ ಅದು ತುಸುದೂರ ಭಾರವನ್ನು ಮರೆತು ತಲೆಯಲ್ಲಾಡಿಸುತ್ತ ಓಡುವಾ ದೃಶ್ಯ ಗಾಡಿಬಿಡುವವನು ರಾಗವಾಗಿ ಪದ ಎಳೆಯುವುದು, ಕಾಡಿನಲ್ಲಿ ಹಾಡಿನ ಪ್ರತಿ ಧ್ವನಿ, ಬಂಡೆಗಳ ಮೇಲಿಂದ ನೀರು ಧುಮುಕಿ ಶಬ್ದ ಗೈಯುವುದು, ಸ್ಫಟಿಕದಂತಹ ಆ ತಿಳಿ ನೀರು, ಹಕ್ಕಿ ಪಕ್ಷಿಗಳೆಲ್ಲ ಚೀಂ ಚೀಂಗುಟ್ಟುತ್ತ ಹಾರಾಡುವಾ ದೃಶ್ಯ, ಉದ್ದಕ್ಕೆ ಬೆಳೆದು ನಿಂತಿರುವ ಬಿದಿರು ಮೆಳೆಗಳು, ಅಲ್ಲಲ್ಲಿ ಬಂಡೆಗಳು, ಝರಿಗಳು,-ಇಂಥವನ್ನೊಳಗೊಂಡ ಸ್ಥಳಗಳಲ್ಲಿ ನೀವು ಪ್ರಯಾಣ ಗೈದು ನೋಡಿ, ಮನಸ್ಸಿಗೆ ಎಷ್ಟು ಆನಂದ, ನೆಮ್ಮದಿ ಉಂಟಾಗುತ್ತದೆ. ನಿಸರ್ಗದ ಈ ರಮಣೀಯವಾದ ನೋಟಕ್ಕೆ ಖಂಡಿತ ನೀವು ತಲೆದೂಗುತ್ತೀರಿ. ಸುಮ್ಮನೆ ಪಟ್ಟಣಗಳಲ್ಲಿ ಕುಳಿತು ಸೀನರೀಸ್, ಸೀನರೀಸ್, ಎಂದು ಹೊಡೆದುಕೊಳ್ಳು

ತ್ತೀರಲ್ಲಾ, ಯಾವ ಸಿನಿಮಾದಲ್ಲಿ ನಿಮಗಿಂಥ ಸೀನರೀಸ್ ತೋರಿಸುತ್ತಾನೆ? ಮನಸ್ಸಿಗೆ ಆಹ್ಲಾದವನ್ನೂ, ಕಣ್ಣಿಗೆ ಹಬ್ಬವನ್ನೂ, ಇಂಥ ಸ್ಥಳಗಳಲ್ಲಿ ಖಂಡಿತ ನೀವು ಪಡೆಯುವಿರಿ. ಕಾಡು ಸೀಮೆಯವನು ಏನೇನೋ ಗೀಚುತ್ತಾನೆ ಎಂದೀರೇನೋ? ನಿಮ್ಮ ಅಸಮಾಧಾನದಿಂದ ನನಗೇನೂ ನಷ್ಟವಿಲ್ಲ. ಗುಂಡೂರಾಯರ ಪಡೆ ಈಗ ಪಾಳ್ಯದ ಹತ್ತಿರ ಹತ್ತಿರಕ್ಕೆ ಬಂದು ಮುತ್ತಿಗೆ ಹಾಕಿತು.

## ೫೦

ವರನ ಮನೆಯವರೆಲ್ಲ ಈಗ ಪಾಳ್ಯದ ಸಮೀಪದಲ್ಲಿರುವ ಚಾವಡಿಯ ಬಳಿಯಲ್ಲಿ ಗಾಡಿಗಳನ್ನು ಬಿಚ್ಚಿಹಾಕಿಸಿದರು. ಇನ್ನು ಮುಂದಿನ ಕಾರ್ಯಕ್ರಮ ಇಲ್ಲಿಂದ ಇವರುಗಳನ್ನೆಲ್ಲ ಸ್ವಾಗತಿಸಿ ಕರೆದುಕೊಂಡು ಹೋಗುವುದು. ಇನ್ನೇನು ಸೂರ್ಯಾಸ್ತವಾಗುವ ಸಮಯ. ಕಾ, ಕಾ ಎಂದು ಕಾಗೆಗಳು ಕೂಗಿಕೊಳ್ಳುತ್ತ ಗೂಡನ್ನು ಸೇರಿಕೊಳ್ಳಲು ಹಾರಿಬರುತಿದ್ದುವು. ಕುರಿಯ ಮಂದೆಗಳನ್ನೂ ದನಕರುಗಳನ್ನೂ ಹೊಡೆದುಕೊಂಡು ರೈತರು ಮನೆಗೆ ಹಿಂದಿರುಗುತಿದ್ದರು. ಹುಲ್ಲಿನ ಹೊರೆಗಳನ್ನು ತಲೆಯಮೇಲೆ ಹೊತ್ತು ಹೆಂಗಸರು ಗ್ರಾಮಾಭಿಮುಖವಾಗಿ ಸಾಗುತಿದ್ದರು. ಹೊಸಬರು ಊರಿಗೆ ಬಂದಿದ್ದಾರೆಂದೋ ಏನೋ ಒಂದು ನಾಯಿ ಬೌ ಬೌ ಎಂದು ಬೊಗಳುತಿತ್ತು. ಚಳಿಗಾಲವಲ್ಲದಿದ್ದರೂ ಬೆಟ್ಟಗುಡ್ಡದ ಸೀಮೆಯಾದುದರಿಂದ ತಣ್ಣನೆಯ ಗಾಳಿ ಬೀಸಿ, ಎದೆಯನ್ನು ಡವಡವ ಮಾಡಿಸುತಿತ್ತು. ಶಾಮರಾಯರು ಗಾಡಿಗಳ ಬಳಿ ಬಂದು, ಎಲ್ಲರ ಕುಶಲ ಪ್ರಶ್ನೆಗಳನ್ನು ವಿಚಾರಿಸಿಕೊಂಡು ಇನ್ನು ತುಸು ಸಮಯದೊಳಗಾಗಿಯೇ ಸ್ವಾಗತಿಸುವ ಸಮಾರಂಭವು ಪ್ರಾರಂಭವಾಗುವುದೆಂದು ಹೇಳಿಹೋದರು.

ಮೈಸೂರಿನಿಂದಲೇ ತಯಾರು ಮಾಡಿ ತಂದಿದ್ದ ಚಿರೋಟಿಗಳನ್ನೂ ಹುರಿಗಾಳನ್ನೂ ಶಾರದಮ್ಮನವರು ಎಲ್ಲರಿಗೂ ಹಂಚಿದರು. ಇಂಥ ಸಂದರ್ಭದಲ್ಲಿ ಇವನ್ನು ಬಾಯಾಡಿಸುವುದರಿಂದ ಬಹಳ ಪ್ರಯೋಜನವಿದ್ದಿತು. ಈಗ ವರನ ಮನೆಯವರೆಲ್ಲ ತಮ್ಮನ್ನು ಸಿಂಗರಿಸಿಕೊಳ್ಳಲು ಸನ್ನದ್ಧರಾದರು. ಮುಖತೊಳೆದು, ಧೂಳಾಗಿದ್ದ ಬಟ್ಟೆಗಳನೆಲ್ಲ ಕಳಚಿ, ಪೆಟ್ಟಿಗೆಗಳಲ್ಲಿದ್ದ ಹೊಸ ಉಡುಪನ್ನು ಧರಿಸಿಕೊಂಡರು. ಕನ್ನಡಿಯನ್ನು ಕಿಟಕಿಯಲ್ಲಿ ಒರಗಿಸಿ ಗಂಡಸರು ತಮ್ಮ ಕ್ರಾಪ್ ಅನ್ನು ಸರಿಯಾಗಿ ತಿದ್ದಿಕೊಂಡರು. ಬಟ್ಟೆಗಳಿಗೆಲ್ಲ ಸ್ವಲ್ಪ ಸ್ವಲ್ಪ "ಸೆಂಟ್" ಒರಸಿದರು. ಗಾಳಿ ಬೇಕಿಲ್ಲದಿದ್ದರೂ ಷೋಕಿಗಾಗಿ ಕರವಸ್ತ್ರವನ್ನು ಬೀಸುತ್ತ ಸುತ್ತಲೂ ನಿಂತಿರುವ ಬೆಟ್ಟ ಗುಡ್ಡಗಳನ್ನು ನೋಡಲಾರಂಭಿಸಿದರು. ಹೆಂಗಸರ ಅಲಂಕಾರವಂತೂ ಮುಗಿಯಲೇ ಮುಗಿಯದು. ಸಣ್ಣದಾಗಿ ಬೈತಲೆ ತೆಗೆದು ಜಡೆ ಹೆಣೆದು, ಲಾಂಗೂಲದಂತೆ ಇಳಿಬಿಟ್ಟು 'ಮೈಸೂರು ಮಲ್ಲಿಗೆ' ಮುಡಿದುಕೊಂಡರು. ಮುಖಕ್ಕೆ ಸ್ನೋ ಪೌಡರೆಲ್ಲ ಬಳಿದುಕೊಂಡರು. ಚಿಕ್ಕದಾಗಿ ಕಂಡೂ ಕಾಣದ ಹಾಗೆ ಒಂದು ಬೊಟ್ಟು ಕುಂಕುಮ ಇಟ್ಟುಕೊಂಡರು. ಜಡೆಯ ತುದಿಗೆ ಕೆಲವರು ಟೇಪ್ ಕಟ್ಟಿದರು. ಮತ್ತೆ ಕೆಲವರು ಅರ್ಧ ಜಡೆ ಹೆಣೆದು ಮಿಕ್ಕರ್ಧ ಹಾಗೆ ಬಿಟ್ಟು ಸೆರಗನ್ನು ಮೇಲೆ ಮುಚ್ಚಿಕೊಂಡರು. ಅದು ಯಾವುದೋ ಒಂದು ಸಿನಿಮಾ ಫ್ಯಾಶನ್ನಂತೆ: ಚಿಕ್ಕ ಹುಡುಗಿಯರಿಗೆ ಅವರ ತಾಯಿ ಅಕ್ಕಂದಿರುಗಳು ಕುಳ್ಳಿರಿಸಿ, ಲಂಗ ಉಡಿಸಿ, ಜಂಪರ್ ತೊಡಿಸಿ, ವಿಧವಿಧದ ಅಲಂಕಾರ ಮಾಡುತಿದ್ದರು. ರಾಘುವಿಗೂ ವಿಶೇಷ ಅಲಂಕಾರ ಮಾಡಲಾಯಿತು. ಸೂಟು ಕೋಟನ್ನು ಧರಿಸಿ ಬೂಟನ್ನು ಮೆಟ್ಟಿದನು. ಅವನು ಮೈಸೂರು ಸೀಮೆಯವನಾದರೂ ರುಮಾಲು ಸುತ್ತುವುದನ್ನು ಕಲಿತಿರಲಿಲ್ಲ. ಈಗ ಶ್ರೀನಿವಾಸರಾಯರು ಸೊಗಸಾಗಿ ಅವನಿಗೆ ರುಮಾಲು ಸುತ್ತಿದರು. ಗಂಡಸ

ರೆಲ್ಲ ಉದ್ಯೋಗದ ಸಮಾಚಾರ, ಅವರವರ ವರಮಾನ ಇತ್ಯಾದಿ ಮಾತುಕತೆಗಳನ್ನಾಡುತಿದ್ದರೆ, ಹೆಂಗಸರು ಸೀರೆ, ಕಣ ಮೊದಲಾದವುಗಳನ್ನು ಕೊಂಡ ಅಂಗಡಿ, ಅವುಗಳ ಬಾರ್ಡರ್, ಕಲರ್, ಬೇಸರಿ, ಓಲೆ, ಮುಂತಾದ ಮಾತುಕತೆಗಳಲ್ಲಿ ಮಗ್ನರಾಗಿದ್ದರು. ಈಗ ಮಸಕು ಮಸಕಾಗಿ ಕತ್ತಲು ಕವಿಯಲು ಪ್ರಾರಂಭಿಸಿತು. ಶಾಮರಾಯರು ತಮ್ಮ ಮನೆಯ ಮುಂದಿನ ವಿಸ್ತಾರವಾದ ಚಪ್ಪರದಿಂದ ಹತ್ತಾರು ಪೆಟ್ರೋಮ್ಯಾಕ್ಸ್ ಲೈಟುಗಳ ಸಹಿತ ಹೊರಬಂದು, ಬ್ಯಾಂಡ್ ಸಹಿತ ವರನ ಮನೆಯವರನ್ನು ಇದಿರ್ಗೊಂಡರು. ಅನಂತರ ಎಲ್ಲರೂ ಬಿಡದಿ ಬಿಟ್ಟಿದ್ದ ಮನೆಗೆ ಪ್ರಯಾಣ ಮಾಡಿದರು. ಉಡುಪಿ ಭಟ್ಟರುಗಳು ತಯಾರಿಸಿದ್ದ ಅಡಿಗೆ ರುಚಿಯನ್ನು ಸೇವಿಸಿದನಂತರ ಎಲ್ಲರೂ ಅಲ್ಲಿಂದಲ್ಲೇ ಆ ದಿನ ಮಲಗಿ ನಿದ್ದೆಹೋದರು.

## ೩೧

ಇಂದು ಧಾರೆಯೆರೆಯುವ ದಿನ. ಅಂದರೆ ಹಿಂದೂಸಮಾಜದಲ್ಲಿ, ಮಾನವ ಜೀವಿತದಲ್ಲಿ, ಗಂಡುಹೆಣ್ಣಿಗೆ ನಿಕಟ ಬಾಂಧವ್ಯವನ್ನು ಶಾಸ್ತ್ರದಮೂಲಕ ಹೆಣೆದು, ಅವರು ಜೀವ ಪರ್ಯಂತವೂ ಒಬ್ಬರನ್ನೊಬ್ಬರು ಅಗಲದಂತೆ ದೈವವನ್ನೇ ಸಾಕ್ಷಿಯನ್ನಾಗಿ ಇರಿಸಿ, ಸಂಸಾರ ಪ್ರಪಂಚದಲ್ಲಿ ಇಬ್ಬರೂ ಅನ್ಯೋನ್ಯವಾಗಿ ಬಾಳಿ ಬದುಕುತ್ತೇವೆಂದು ದಂಪತಿಯರಿಂದ ಪ್ರತಿಜ್ಞೆ ತೆಗೆದುಕೊಳ್ಳುವ ದಿನ. ಒಂಭತ್ತೂವರೆ ಘಂಟೆಯಿಂದ ಹನ್ನೊಂದು ಘಂಟೆಯವರೆಗೆ ಮುಹೂರ್ತಕಾಲವು ನಿಶ್ಚಯಿಸಲ್ಪಟ್ಟಿದ್ದಿತು. ರಾಘು ತನ್ನ ಬಾಳಗೆಳತಿಯನ್ನಾಗಿ, ಸಂಗಾತಿಯನ್ನಾಗಿ ಲಕ್ಷ್ಮಿಯನ್ನು ಒಪ್ಪಿ ಕೈಹಿಡಿಯಲು ಇನ್ನು ಮೂರು ಘಂಟೆಗಳ ಅವಕಾಶವೇ ಇದೆ. ಇಷ್ಟರಲ್ಲಿ ಮತ್ತಿತರ ಶಾಸ್ತ್ರೋಕ್ತ

ವಿಧಿಗಳು ನಡೆಯುತಿದ್ದುವು. ಬೆಳಗಿನಿಂದಲೂ ನಾಗಸ್ವರ ಕಚೇರಿ ಪ್ರಾರಂಭವಾಗಿತ್ತು. ಢಂಢಂ ಡೋಲು ಶಬ್ದದೊಡನೆ ಅವರು ನುಡಿಸುತಿದ್ದಾಗ, ಅದರ ಶಬ್ದಕ್ಕೆ ಮತ್ತಿತರ ಸದ್ದೆಲ್ಲ ಅಡಗಿ, ಮತ್ತೊಬ್ಬರ ಮಾತುಕತೆಗಳೇ ಕೇಳುತ್ತಲಿರಲಿಲ್ಲ. ಯಾವ ಯಾವದೋ ಸಿನಿಮಾ ಹಾಡುಗಳನ್ನು ಅವರು ಚಲಾಯಿಸು ತಿದ್ದರು. ಬಾಲಕರ ತಂಡವು ಅವರನ್ನು ಸುತ್ತುವರಿದಿತ್ತು. ಒಳಗೆ ಪುರೋಹಿತರ ಮಂತ್ರೋಚ್ಚಾರಣೆ—ಸಂಸ್ಕೃತ ಶಬ್ದಗಳನ್ನು ಅವರು ತಪ್ಪುತಪ್ಪಾಗಿ ಉಚ್ಚರಿಸುತಿದ್ದರೂ, ರಾಗವಾಗಿ ಎಳೆ ಯುತಿದ್ದುದರಿಂದ ಕೇಳಲು ನಮ್ಮ ಕಿವಿಗೆ ಅದು ಇಂಪಾಗಿತ್ತು. ಎತ್ತ ನೋಡಿವರೂ ಹೆಂಗಸರ ಓಡಾಟವೇ ಜಾಸ್ತಿ. ಹೊಸ ಸೀರೆಗಳನ್ನು ಧರಿಸಿದ್ದುದರಿಂದ ಜರಜರ ಶಬ್ದಮಾಡುತ್ತ ಅವರು ಗಳು ಅತ್ತಿಂದಿತ್ತ ಇತ್ತಿಂದತ್ತ ತಿರುಗಾಡುತಿದ್ದರು. ನಗುವಿನ ಲಹರಿ, ಬಳೆಗಳ ನಿನಾದ, ಫಳಕ್ ಫಳಕ್ ಶಬ್ದ, ಬಾಲಕರ ಕೂಗಾಟ, ದೊಡ್ಡವರ ಹರಟೆ, ನಮ್ಮ ಮನಸ್ಸಿಗೆ ಬಹಳ ಆಹ್ಲಾದ ವನ್ನುಂಟುಮಾಡಿತ್ತು. ಹೆಬ್ಬಾಗಿಲಿನಲ್ಲಿ ಬಾಳೆಯ ಕಂದು ಗಳನ್ನೂ, ಮಾವಿನ ತೋರಣವನ್ನೂ ಕಟ್ಟಿದ್ದರು. ವಿಸ್ತಾರವಾದ ಆ ಚಪ್ಪರವನ್ನು ತೆಂಗಿನ ಗರಿಗಳಿಂದ ಹೆಣೆದು ಹೊದಿಸಿ, ನಾಲ್ಕು ಕಡೆಗಳಿಗೂ ಮೇಲ್ಭಾಗಕ್ಕೆ ವರ್ಣದ ಕಾಗದಗಳನ್ನು ಅಂಟಿಸಿ ಸೊಗಸುಮಾಡಿದ್ದರು. ನೆಲಕ್ಕೆ ಮರಳನ್ನು ಸುರಿಸಲಾಗಿದ್ದಿತು. ಅಡಿಗೆ ತಯಾರು ಮಾಡುವ ಉಡುಪಿ ಭಟ್ಟರುಗಳು ತಮ್ಮ ಕಾರ್ಯದಲ್ಲೆ ಕಣ್ಣಾಗಿದ್ದರು. ಅವರಿಗೆ ಸಹಾಯಕರಾಗಿಯೂ ಒಂದೆರಡು ಮಂದಿ ಇದ್ದರು. ನೀರು ಹೊತ್ತುತರುವುದು, ಸೌದೆ ತೆಗೆದುಕೊಡುವುದು, ಅವರ ಕೆಲಸ. ಏನೇನೋ ಭಕ್ಷ್ಯಭೋಜ್ಯ ಗಳನ್ನು ತಯಾರಿಸುತಿದ್ದುದರಿಂದ, ಅದರ ಪರಿಮಳವು ಊರೆಲ್ಲಾ ಹರಡಿ ಘಂ ಎನ್ನುತಿತ್ತು. ನಾಲ್ಕಾರು ನಾಯಿಗಳು ದೂರನಿಂತು ನಾಲಗೆಯನ್ನು ಇಳಿಬಿಟ್ಟು ನಿಂತಿದ್ದುವು. ಅವುಗಳ ಕಣ್ಣು

ಗಳನ್ನು ನೋಡಿದರೆ ತಮಗೇನಾದರೂ ಸಿಗುತ್ತದೆಯೇ ಎಂದು ನಮ್ಮನ್ನು ಕೇಳುವಂತಿತ್ತು. ಊರಜನ ಶಾಮರಾಯರ ಮನೆಗೆ ಮುತ್ತಿಗೆ ಹಾಕಿದ್ದರು. ಅವರೆಲ್ಲರೂ ವರಾಂಡಾದಲ್ಲಿ, ದಿಣ್ಣೆಯ ಮೇಲೆ, ಚಪ್ಪರದ ಮರಳಿನಲ್ಲಿ ಕುಳಿತಿದ್ದರು. ಇವರಲ್ಲಿ ಹೆಂಗಸರು ಮತ್ತು ಬಾಲಕರ ಸಂಖ್ಯೆಯೇ ಜಾಸ್ತಿ ಇದ್ದಿತು. ಲಕ್ಷ್ಮಿಯ ಕೂಡ ಆಟವಾಡುತಿದ್ದ ಅವಳ ಸ್ನೇಹಿತೆಯರೂ ದೂರ ದೂರ ನೋಡುತ್ತ ನಿಂತಿದ್ದರು. ಅವರೆಲ್ಲರೂ ಶೂದ್ರರಾಗಿದ್ದುದರಿಂದ ಒಳಗೆ ಬಂದು ಎಲ್ಲರ ಸರಿಸಮಾನವಾಗಿ ಕುಳಿತುಕೊಳ್ಳಲು ಸಾಧ್ಯವಿರಲಿಲ್ಲ. ಇಷ್ಟುದಿನ ಲಕ್ಷ್ಮಿ ನಮ್ಮ ಕೂಡ ಒಡನಾಡಿಯಂತಿದ್ದು, ಈಗ ನಮ್ಮನ್ನು ಬಿಟ್ಟು ಹೋಗುತ್ತಾಳಲ್ಲಾ ಎಂಬ ಚಿಂತೆ ಅವರಿಗೆ. ಘಂಟೆ ಒಂಭತ್ತಾಯಿತು. ಇನ್ನು ಲಕ್ಷ್ಮಿಯನ್ನು ರಾಘುವಿನ ಕೈಗೆ ಒಪ್ಪಿಸುವುದೊಂದೇ ಬಾಕಿ. ಪುರೋಹಿತರು ಮಂತ್ರ ಹೇಳಿ ಹೋಮಕುಂಡಕ್ಕೆ ಆಜ್ಯ ಸುರಿದಾಗ, ಅದು ಭುಗ್ಗೆಂದು ಉರಿದು, ಜೊತೆಗೆ ಒಂದು ತರಹದ ಸುವಾಸನೆಯನ್ನು ಸೂಸುತಿತ್ತು. ಈಗ ಶಾಸ್ತ್ರಿಗಳು ಜೋರಾಗಿ ಮಂತ್ರ ಓದಲಾರಂಭಿಸಿದರು. ಮಂಗಳವಾದ್ಯಗಳು ಭೋರ್ಗರೆಯುತಿರಲು, ಸುವಾಸಿನಿಯರು ಲಾಜಾಕ್ಷತೆ ಚೆಲ್ಲುತಿರಲು, ಮಧುರವಾಣಿಯರು ಆರತಿ ಎತ್ತಿ ಹಾಡು ಹಾಡುತಿರಲು, ರಾಘು ಲಕ್ಷ್ಮಿಯನ್ನು ತನ್ನ ಬಾಳಗೆಳತಿಯನ್ನಾಗಿ ಸ್ವೀಕರಿಸಿದನು. ಇದಕ್ಕೆ ಮೊದಲು ಮಾಡಬೇಕಾದ ಅನೇಕ ವಿಧಿಗಳ ನಡುವೆ ಲಕ್ಷ್ಮಿಯಿಂದ ಹಾಡನ್ನೂ ಹಾಡಿಸಲಾಯಿತು. ಅವಳು ಮಿಗೆಯಾದ ನಾಚಿಕೆಯಿಂದ ತಗ್ಗಿಸಿದ ತಲೆಯನ್ನು ಮೇಲಕ್ಕೆತ್ತಲೇಯಿಲ್ಲ. ಹೇಗೋ ಕಷ್ಟಪಟ್ಟು ಮತ್ತಿತರರ ನಿರ್ಬಂಧದಿಂದ ಒಂದೆರಡು ಹಾಡುಗಳನ್ನು ಹಾಡಿದಳು. ಇಷ್ಟರಲ್ಲಿ ಅವಳಿಗೆ ಸಾಕುಸಾಕಾಯಿತು. ನಡೆಯಬೇಕಾದ ಕಾರ್ಯಕ್ರಮಗಳೆಲ್ಲ ಮುಗಿದನಂತರ ಊಟಕ್ಕೆ ಎಲೆಗಳನ್ನು ಹಾಕಿದರು. ಬಿಡದಿ ಬಿಟ್ಟಿರುವ ಮನೆಯಲ್ಲೇ

ಹೆಂಗಸರಿಗೆ ಎಲೆ ಹಾಕಲಾಯಿತು. ಏಕೆಂದರೆ ಶಾಮರಾಯರ ಮನೆಯಲ್ಲಿ ಗಂಡಸರೂ ಹೆಂಗಸರೂ ಕುಳಿತುಕೊಳ್ಳುವಷ್ಟು ಸ್ಥಳ ಇರಲಿಲ್ಲ. ಬಡಿಸಲು ಉಡುಪಿ ಭಟ್ಟರುಗಳ ಕೂಡ ರಾಮುವೂ, ಅಗ್ರಹಾರದ ಕೆಲವು ಹುಡುಗರುಗಳೂ, ನಿಂತರು. ಬಂಧುವರ್ಗದ ಕೆಲವು ಚಿಕ್ಕವಯಸ್ಸಿನ ಹುಡುಗಿಯರೂ ಬಡಿಸಲು ನಿಂತರು.ಅವರ ದೆಲ್ಲ ಚಿಲ್ಲರೆ ಕೆಲಸ ಅನ್ನಿ; ಹಾಗಂದರೆ ಕೋಸುಂಬರಿ ಗೀಸುಂಬರಿ, ಉಪ್ಪಿನಕಾಯಿ, ಸಂಡಿಗೆ, ತುಪ್ಪ, ಇತ್ಯಾದಿ ಬಡಿಸುವುದು. ಒಬ್ಬರ ಹಿಂದೆ ಮತ್ತೊಬ್ಬರು ಸಾಲುಸಾಲಾಗಿ, ಬಗ್ಗುತ್ತ ನಿಮಿರುತ್ತ ಸರಸರನೆ ಇರುವೆಗಳಂತೆ ಹೋಗುತ್ತಿರುವಾ ದೃಶ್ಯ ನೋಡಲು ಸೊಗಸಾಗಿಯೇ ಕಾಣುತಿತ್ತು. ಶಾಮರಾಯರು ಆಪೋಶನ ಹಾಕಿ, ಶಾಸ್ತ್ರಿಗಳ ಮಂತ್ರ ನಿಂತಮೇಲೆ, “ ಸರ್ವರೂ ಭೋಜನ ತೀರಿಸಬಹುದು ” ಎಂದಮೇಲೆ, ಸರಕ್ಕನೆ ಕೈಯಲ್ಲಿದ್ದ ತೀರ್ಥ ವನ್ನು ಕುಡಿದು, ಎಲ್ಲರೂ ಎಲೆಗೆ ಕೈಹಾಕಿದರು. ನಾಲ್ಕಾರು ಕಡೆಗಳಿಂದ ಹಪ್ಪಳ ಮುರಿಯುವ ಶಬ್ದ, ನರಕ್, ನರಕ್ ಎಂದು ಕೇಳುತಿತ್ತು. ಮಧ್ಯೆ ಮಧ್ಯೆ ಚಿಕ್ಕ ಬಾಲಕರು, ಬೆಳ್ಳಿಯ ತಂಬಿಗೆಯಲ್ಲಿ ನೀರನ್ನು ತುಂಬಿಸಿ, ಅತ್ತಿಂದಿತ್ತ, ಇತ್ತಿಂದತ್ತ “ ಗಂಗೋದಕ, ಗಂಗೋದಕ ” ಎಂದು ಕೂಗಿಕೊಂಡು ಹೋಗು ತಿದ್ದರು. “ಅವಸರಪಡಬೇಡಿ, ನಿಧಾನವಾಗಿ ಭೋಜನ ತೀರಿಸ ಬಹುದು ” ಎಂದು ಒಂದೆರಡು ತಡವೆ ಪಂಙ್ತಿಯನ್ನುದ್ದೇಶಿಸಿ, ಶಾಮರಾಯರು ನುಡಿದರು. ಪಲ್ಯ, ಹುಳಿ, ಸಾರಿಗೆ ಅನ್ನ, ಚಿತ್ರಾನ್ನ, ಲಾಡು, ಇನ್ನೂ ಏನೇನೋ ಕ್ರಮದಂತೆ ಎಲೆಗೆ ಬೀಳುತಿದ್ದುವು. ಲಕ್ಷ್ಮಿಯನ್ನೂ ರಾಘುವನ್ನೂ ಒತ್ತಟ್ಟಿಗೆ ಕುಳ್ಳಿರಿಸಿದ್ದರು. ಲಕ್ಷ್ಮಿಯ ಎದುರುಗಡೆ ನೇರಾಗಿ ನಂಜುಂಡ ರಾಯರು ಕುಳಿತಿದ್ದರು. ಪಾಯಸದ ಸರದಿ ಬಂದಾಗ ರಾಮುವೇ ಸೌಟು ಹಿಡಿದು ಹೊರಬಂದನು. ನಂಜುಂಡ ರಾಯರು “ ಲಕ್ಷ್ಮಿಗೆ ಜಾಸ್ತಿಹಾಕು, ” ಎಂದಾಗ ಕೀಟಲೆ

ಗೆಂದು ರಾಮು ನಾಲ್ಕು ಸೌಟು ಪಾಯಸವನ್ನು ಜಾಸ್ತಿಹಾಕಿ ಹೊರಟೇ ಹೋದನು. ಯಾರು ಬೇಡವೆನ್ನುತ್ತಾರೊ ಅವರಿಗೆಲ್ಲ ಒಂದೆರಡು ಸೌಟು ಪಾಯಸವನ್ನಾದರೂ ಜಾಸ್ತಿಹಾಕದೆ ಅವನು ಬಿಡುತ್ತಿರಲಿಲ್ಲ. ಲಕ್ಷ್ಮಿಗೀಗ ಬಹಳ ಪೇಚಾಟಕ್ಕಿಟ್ಟು ಕೊಂಡಿತು. ಅವಳಿಗೆ ಯಾವಾಗಲೂ ಸಿಹಿ ಪದಾರ್ಥ ಸೇರದು. ಮನೆಯಲ್ಲಿ, ವಿಶೇಷ ದಿನಗಳಲ್ಲೂ ಸಹ ಅವಳು ಪಾಯಸವನ್ನು ಕುಡಿಯುತ್ತಿರಲಿಲ್ಲ. ಒಂದು ಕಡೆಗೆ ಒತ್ತರಿಸಿ ಬಿಸಾಡೋಣ ವೆಂದರೆ, ಆ ದ್ರವವಸ್ತುವನ್ನು ತಳ್ಳುವುದು ತಾನೆ ಹೇಗೆ? ಒತ್ತರಿಸಿದರೆ ಅದು ಈಚೆಗೆಲ್ಲಾ ಹರಿದು ಬರಲು ಪ್ರಾರಂ ಭಿಸುತ್ತದೆ. ಅದು ನೋಡುವವರಿಗೆ ಅಸಹ್ಯವಾಗಿ ಕಾಣುವು ದಿಲ್ಲವೆ? ಲಕ್ಷ್ಮಿಗೆ ಕೋಪ ಉಕ್ಕಿ ಬಂದಿತು. ತಿಳಿದೂ ತಿಳಿದೂ ರಾಮು ಹೀಗೆ ಮಾಡಿದನಲ್ಲಾ ಎಂಬ ಆಗ್ರಹ ಅವಳಿಗೆ. ಆದರೆ ಈಗ ಅವನನ್ನು ಅವಳೇನೂ ಮಾಡುವಹಾಗಿರಲಿಲ್ಲ. ಲಾಡು ಒಡೆದು ಅದರ ಕೂಡ ಸೇರಿಸಿ, ಹೇಗೋ ಕಷ್ಟಪಟ್ಟು ಮುಗಿಸಿದಳು. ಈಗ "ಚೂರ್ಣಿಕೆ" ಹೇಳಲು ಪ್ರಾರಂಭ ವಾಯಿತು. ಶಾಸ್ತ್ರಿಗಳೇ ಮೊದಲು ರಾಮಾಯಣದ ಒಂದು ಶ್ಲೋಕವನ್ನು ಎತ್ತಿ ಹೇಳಿದರು. ಅನಂತರ ನಾಲ್ಕಾರು ಕಡೆ ಗಳಿಂದ ರಾಗಮಾಲಿಕೆ ಪ್ರಾರಂಭವಾಯಿತು. ಸಂಗೀತ ಶಿಕ್ಷೆ ಇಲ್ಲದುದರಿಂದಲೋ ಅಥವಾ ಗಡದ್ದಾಗಿ ತಿಂದುದರಿಂದಲೋ ಏನೋ ಯಾರೂ ಸರಿಯಾಗಿ ಎತ್ತರಿಸಿ ಹಾಡಲೇ ಇಲ್ಲ. ಸೊಟ್ಟೆ ಪಟ್ಟೆಯಾಗಿ, ದನಿಯನ್ನುಕೆಳಕೆಳಗಿಳಿಸಿ ಮುಗಿಸಿದರು. ಊರವರು ಬಯಲಾಟ ಆಡಿದಾಗ, ಶಕುನಿ ವೇಷ ಧರಿಸಿದ್ದ ಅಗ್ರಹಾರದ ಸುಬ್ಬು ಒಂದು ಕಂದ ಹಾಡಿದ. ಅದನ್ನು ಕೇಳಿ ಎಲ್ಲರೂ ನಕ್ಕರು. ಊಟ ಮುಗಿಯಿತು, ಕೈ ತೊಳೆದುದಾಯಿತು. ಈಗೆಲ್ಲ ತಾಂಬೂಲ ಸ್ವೀಕರಿಸಿದರು. ಜಾಯಿಕಾಯಿ, ಜಾಯಿಪತ್ರೆ, ಲವಂಗ, ಬಿಳೀ ಕಲ್ಲುಸಕ್ಕರೆ, ಬಣ್ಣಕಟ್ಟಿದ ತೆಂಗಿನ ತುರಿ ಇವು

ಗಳನ್ನು ಬೆರಸಿದ ಅಡಿಕೆ, ಅನುಚವಾಡಿ ಚಿಗುರು ವೀಳ್ಯದೆಲೆ, ನೈಸ್ ಸುಣ್ಣ-ತಟ್ಟೆಗಳಲ್ಲಿ ಇರಿಸಿ ಎಲ್ಲರಿಗೂ ಕೊಟ್ಟರು. ಅಲ್ಲಿಂದಲ್ಲೆ ಒಳಗೆ ಹೊರಗೆ ವೃಂದಾವನದ ಕಟ್ಟೆಯ ಮೇಲೆ ಸ್ಥಳ ಇದ್ದಲ್ಲೆಲ್ಲ ಅವರುಗಳು ಕುಳಿತುಕೊಂಡರು. ಮಿಕ್ಕುಳಿದ ಮತ್ತಿತರರೆಲ್ಲ ಎರಡನೇ ಪಂಕ್ತಿ ಕುಳಿತು ಊಟ ಮುಗಿಸಿದರು; ಆಳು ಕಾಳುಗಳಿಗೂ ಬಡಿಸಿದರು. ಅವರನ್ನು ಬ್ರಾಹ್ಮಣರು ತಿರುಗಾಡದ ಜಾಗಕ್ಕೆ ದೂರ ಕುಳ್ಳಿರಿಸಿ ಅನ್ನ ಹಾಕಲಾಯಿತು. ಊರವರಿಗೆಲ್ಲ ಊಟ ಹಾಕಲು ಸಾಮುಗ್ರಿಗಳನ್ನೆಲ್ಲ ಗೌಡರ ಬಸಪ್ಪನಿಗೆ ಕೊಡಲಾಗಿದ್ದಿತು. ಅವನು ಬೇರೊಂದೆಡೆ ಅಡಿಗೆ ತಯಾರು ಮಾಡಿಸಿದ್ದನು. ಹತ್ತಿರದ ಹಳ್ಳಿಗಳಿಂದ ಬಂದಿದ್ದ ಅತಿಥಿಗಳು, ಆಪ್ತರು ಊಟ ಮುಗಿಸಿದನಂತರ ಒಬ್ಬೊಬ್ಬರಾಗಿ ಹಿಂದಿರುಗುತಿದ್ದರು. ಕೆಲಸಕಾರ್ಯಗಳಿರುವವರು ಮನೆಯಲ್ಲಿ ಓಡಾಡುತ್ತ ಅದು ಇದು ಮಾಡುತಿದ್ದರು. ಹೊಟ್ಟೆಯನ್ನು ಮೇಲಕ್ಕೆತ್ತಲಾರವವರು, ಕೆಲಸವಿಲ್ಲದವರು ಒಂದು ಗುಂಪು ಸೇರಿ, ಇಸ್ಪೀಟು ಆಡಲು ಕುಳಿತುಕೊಂಡರು. ಮತ್ತೊಂದು ಗುಂಪು ಗ್ರಾಮಾಫೋನ್ ಹಾಕಿ ಕುಳಿತುಕೊಂಡಿತ್ತು. ಇದರ ಸುತ್ತ ಬಾಲಕರ ತಂಡವೇ ಹೆಚ್ಚಾಗಿ ತುಂಬಿದ್ದಿತು. ಹೆಂಗಸರು ಏನೇನೆಲ್ಲ ಹರಟೆ ಹೊಡೆಯುತಿದ್ದರು. ಅವರ ಮಾತೇಮಾತು, ಓಡಾಟವೋ ಓಡಾಟ. ನಗುವಿನ ಲಹರಿಯಲ್ಲಿ ತೇಲುತ್ತ ಹಾವ ಭಾವಮೊಂದಿಗೆ ಕೈ ಕುಣಿಸುತ್ತ ನಡುವನ್ನು ಬಳುಕಿಸುತ್ತ ನಡೆಯುವಾಗ ಅವರು ನರ್ತಕಿಯರಂತೆ ಕಾಣಿಸುತ್ತಾರೆ. ಹಕ್ಕಿಯಂತೆ ಅವರುಗಳು ಅತ್ತಿಂದಿತ್ತ ಇತ್ತಿಂದತ್ತ ಓಡಾಡುತಿದ್ದರೆ ನೋಡಲು ಅದೆಂಥ ಸೊಗಸು; ಆನಂದ. ಗಂಡಿಗಿಂತ ಹೆಣ್ಣು ನಕ್ಕಾಗ ಅವಳ ಮುಖ ನೋಡಲು ಬಲು ಚೆಂದ ಕಾಣುತ್ತದಲ್ಲವೇ ?

# ೫೨

ಸಂಜೆಯಾಯಿತು. ಹತ್ತಾರು ಪೆಟ್ರೋಮ್ಯಾಕ್ಸ್‌ಗಳ ಪ್ರಕಾಶದ ಪ್ರಭೆ ಮನೆಯನ್ನೆಲ್ಲಾ ಆವರಿಸಿತು. ರಾಮು ಆಗಾಗ್ಯೆ ಎಲ್ಲವನ್ನೂ ನೋಡಿ "ಪಂಪು" ಹೊಡೆಯುತಿದ್ದನು. ಈಗ ವಧುವನ್ನೂ, ವರನನ್ನೂ ಹಸೆಯಮೇಲೆ ಕುಳ್ಳಿರಿಸಿದ್ದರು. ಒಂದು ಕಡೆ ಹೆಂಗಸರ ಗುಂಪು ಮತ್ತೊಂದು ಕಡೆ ಗಂಡಸರ ಗುಂಪು ಕುಳಿತಿದ್ದಿತು. ರಾಘುವನ್ನು ಈಗ ನೋಡಿದರೆ ಕುಡುಕನಂತೆಯೋ ಕಾಮುಕನಂತೆಯೋ ಕಾಣುತ್ತಲಿರಲಿಲ್ಲ. ಗಂಭೀರವಾಗಿ ಅವನು ಕುಳಿತಿದ್ದನು. ಅವನು ಹಾಗೂ ಜಾಸ್ತಿ ಹೆಂಗಸರ ಕಡೆಗೇ ಕಣ್ಣು ಹಾಯಿಸುತಿದ್ದನು. ನಸ್ಯದ ಕಲರ್ ಕೋಟು ಅವನಿಗೆ ಚೆನ್ನಾಗಿ ಒಪ್ಪಿತ್ತು. ಅರವಿಂದಾ ಮಿಲ್ಲಿನ ಪಂಜೆಯುಟ್ಟು ಪಂಚಗಚ್ಚೆ ಹಾಕಿ ಕುಳಿತಿದ್ದನು. ಜರಿಗೆ ರೇಶ್ಮೆ ವಸ್ತ್ರದಿಂದ ರುಮಾಲು ಸುತ್ತಿದ್ದನು. ಕೈ ಬೆರಳುಗಳಲ್ಲಿದ್ದ ಎರಡು ಉಂಗುರಗಳೂ ಹತ್ತಿಉರಿಯುವಂತೆ ಜಗಜಗಿಸುತಿದ್ದುವು. ಸೊಗಸಾದ ರಿಸ್ಟ್‌ವಾಚೊಂದನ್ನೂ ಕಟ್ಟಿದ್ದನು. ಲಕ್ಷ್ಮಿಗೂ ವಿಶೇಷ ಅಲಂಕಾರ ಮಾಡಲಾಗಿತ್ತು. ನೀಲಿ ಬಣ್ಣದ ರೇಶ್ಮೆ ಸೀರೆಯನ್ನವಳುಟ್ಟು ಪಾಚಿ ಕಲರ್ ಕುಪ್ಪಸವನ್ನು ತೊಟ್ಟಿದ್ದಳು. ಮಧ್ಯಕ್ಕೆ ಬೈತಲೆ ತೆಗೆದು ಚೆನ್ನಾಗಿ ಬಾಚಿ ಹೆರಳು ಹಾಕಿದ್ದರು. ಸಂಪಿಗೆಯೊಂದಿಗೆ ಸುಗಂಧರಾಜ ಪುಷ್ಪವನ್ನೂ ಬೆರಸಿ ಮುಡಿಸಿದ್ದರು. ಜಡೆಯ ತುದಿಗೆ ಕಪ್ಪು ನೂಲಿನಿಂದ ತಯಾರಿಸಿದ ಗುಚ್ಛವೊಂದನ್ನು ಕಟ್ಟಿದ್ದರು. ಅದರ ಸುತ್ತಲೂ ಹಳದಿ ಮಣಿಗಳನ್ನು ಹೊಲೆದು, ಅದು ನೋಡುವುದಕ್ಕೆ ಬಹಳ ಅಂದವಾಗಿತ್ತು. ಬೆವರು ಒರಸಿಕೊಳ್ಳಲೆಂದು ಅವಳ ಕೈಗೆ ಕರವಸ್ತ್ರವನ್ನು ಮಡಿಸಿ ಕೊಟ್ಟಿದ್ದರು. ಅವಳು ಅದನ್ನು ತನ್ನ ಎಡಭಾಗದಲ್ಲಿರಿಸಿಕೊಂಡಿದ್ದಳು. ಹಣೆಯಲ್ಲಿಟ್ಟಿದ್ದ ಕುಂಕುಮ ಬೆವರಿಗೆ

ಒದ್ದೆಯಾದಂತೆ ಕಾಣುತಿತ್ತು. ಕತ್ತಿನಲ್ಲಿ ಹಾಕಿದ ಚಿನ್ನದ ಸರ ದೀಪದ ಪ್ರಭೆಗೆ ಒಂದೊಂದುತಡವೆ ಮಿನುಗುತಿತ್ತು. ಬಿಳೀ ಮಣಿಹಾರ ಅವಳ ಕೊರಳಿಗೆ ಹೆಚ್ಚು ಶೋಭೆಯನ್ನುಂಟು ಮಾಡಿತ್ತು. ಕೈತುಂಬ ಅವಳು ಬಳೆ ತೊಟ್ಟಿದ್ದಳು. ಇಷ್ಟು ದಿನದ ಅಲಂಕಾರಕ್ಕೂ ಈ ದಿನದ ಅಲಂಕಾರಕ್ಕೂ ವ್ಯತ್ಯಾಸ ವೇನೆಂದರೆ, ಮಧ್ಯಾಹ್ನ ಪತಿರಾಯನು ಕಟ್ಟಿದ್ದ ಮಾಂಗಲ್ಯ ವೊಂದು ಹೆಚ್ಚಿಗೆ. ಎಲ್ಲ ಆಭರಣಗಳಿಗಿಂತಲೂ ಅದು ಶ್ರೇಷ್ಠ ವಾದುದಲ್ಲವೇ ? ಚಿಕ್ಕದಾದ ಆ ಮಾಂಗಲ್ಯ, ಸೆರಗು ಮುಚ್ಚಿ ಕೊಂಡಿದ್ದುದರಿಂದ, ನಮಗೆ ಕಾಣಿಸುತ್ತಿರಲಿಲ್ಲ. ಆದರೆ ಅದಕ್ಕೆ ಕಟ್ಟಿದ್ದ ಅರಿಶಿನ ಕಲಸಿದ ನೂಲು ಮಾತ್ರ ನಮಗೆ ಕಾಣುತಿತ್ತು. ಲಕ್ಷ್ಮಿ ನಾಚಿಕೆಯಿಂದ ತಲೆ ತಗ್ಗಿಸಿ ಕುಳಿತಿದ್ದಾಗ ಅವಳ ಬೈತಲೆ, ನಾವು ಸತ್ಯಮಂಗಲಕ್ಕೆ ಘಾಟಿರೋಡಿನಲ್ಲಿ ಪ್ರಯಾಣ ಮಾಡುವಾಗ, ಬೆಟ್ಟದ ಅಡಿಯಲ್ಲಿ ಕಾಣುವ ರಸ್ತೆಯಂತೆ ಕಾಣು ತಿತ್ತು. ಒಂದೆರಡು ತಡವೆ ತಲೆಯನ್ನು ಮೇಲಕ್ಕೆತ್ತಲು ಅವಳು ಪ್ರಯತ್ನಿಸಿದರೂ, ಕೊನೆಗೂ ಅವಳಿಂದ ಅದು ಸಾಧ್ಯವಾಗಲೇ ಇಲ್ಲ. ಬಿಳಿ, ಕೆಂಪು ಅಡ್ಡಗೆರೆ ಬಂದ ದೊಡ್ಡ ಜಮಖಾನ ವನ್ನು ಹಸೆಯ ಮಣೆಯಮೇಲೆ ಹಾಕಿ, ಮೇಲೆ ಬಿಳೀ ಬಟ್ಟೆ ಯನ್ನು ಹಾಸಿ, ದಂಪತಿಗಳನ್ನು ಕುಳ್ಳಿರಿಸಿದ್ದರು. ಎರಡೂ ಕಡೆಗಳಲ್ಲಿ ಉದ್ದವ ದೀಪದ ಕಂಭಗಳನ್ನು ಇರಿಸಿದ್ದರು. ಎಂಟು ಘಂಟೆಗೆ ವಧೂವರರಿಗೆ ಓದಿಸುವ ಸಂಭ್ರಮ. ಊರಗಣ್ಯವ್ಯಕ್ತಿ ಗಳೂ, ಆಪ್ತರೂ ಮನೆತುಂಬ ನೆರೆದಿದ್ದರು. ಎಲ್ಲರಿಗೂ ಚಾಪೆ ಹಾಸಲಾಗಿತ್ತು. ಕೆಲವು ಕಡೆ ದೊಡ್ಡದೊಡ್ಡ ಜಮಖಾನವನ್ನೂ ಹಾಸಿದ್ದರು. ಹೆಂಗಸರ ಗುಂಪಿನಿಂದ ಹಾಡಿನ ಪೋಟಾಪೋಟಿ ಈಗ ನಡೆಯುತಿತ್ತು. ಒಬ್ಬಳು ಹಾಡಿ ಮುಗಿಸಿದರೆ ತೀರಿತು, ಮತ್ತೊಬ್ಬಳು ಪ್ರಾರಂಭಿಸಿ ಬಿಡುತಿದ್ದಳು. ತಾವು ಹಾಡುವುದೇ ಚೆಂದವೆಂದು ಅವರವರ ಮನಸ್ಸಿನ ಭಾವನೆ. ತಮಿಳು, ತೆಲುಗು,

ಹಿಂದಿ, ಮರಾಠಿ, ಗುಜರಾಥಿ ಎಲ್ಲ ಭಾಷೆಯ ಹಾಡುಗಳೂ ಆ ಗುಂಪಿನಿಂದ ಹೊರಬರುತ್ತಿದ್ದುವು. ಆದರೆ ಕನ್ನಡ ಮಾತ್ರ ಕಡಮೆ. ಮೈಸೂರಿನ ಹುಡುಗಿಯರು ಬರೀ ಸಿನಿಮಾ ಹಾಡುಗಳನ್ನೇ ಉಧ್ಘಾಯಿಸತಿದ್ದರು. “ ಕಾದಲ್ ದಾಹತ್ತಿಲ್ ನಾನ್ ವೆಂದು ತವಿಕ್ಕುರೇನೇ ” ಎಂದು ಹಾಡುತಿದ್ದರೆ, ಭಾಷೆ ತಿಳಿಯದಿದ್ದುದರಿಂದ, ಅದೇನೋ ಒಂದು ಕೀರ್ತನೆಯಿರಬಹುದೆಂದು ಮುಕ್ಕಾಲುಜನದ ನಂಬಿಕೆ. ಮೈಸೂರಿನ ರಂಗೂಬಾಯಿ ಹಾರ್ಮೋನಿಯಂ ಇಟ್ಟುಕೊಂಡು ಕೊಂಯ್, ಕೊಂಯ್, ಎನ್ನಿಸುತಿದ್ದಳು. ಅವಳಿಗೆ ಕನ್ನಡ ಸುತರಾಂ ಗೊತ್ತಿಲ್ಲ. ಬರೀ ತೆಲುಗು ಕೀರ್ತನೆಗಳನ್ನೇ ತಳ್ಳುತಿದ್ದಳು. “ ನಿಜಭಕ್ತಮುಲನು ತೆಲಸಿನ ವಾರಿಕಿ ” ಎನ್ನುವುದಕ್ಕೆ, “ ನಿಜಭಕ್ತಮುಲನು ದೆಲಿಸಿನ ವಾರಿಗಿ ” ಎಂದು ತ್ಯಾಗ ಗುರುವಿನ ಕೀರ್ತನೆಗಳನ್ನು ಕೊಲೆಮಾಡುತಿದ್ದಳು. ಅವಳ ಬಾಯಿ ಬಾಯಿ ನೋಡುತ್ತ, ಕೈಕೈ ನೋಡುತ್ತ, ಮತ್ತಿತರರೆಲ್ಲ ತೆಪ್ಪಗೆ ಕುಳಿತುಕೊಂಡಿದ್ದರು. “ ಇನ್ನು ಸ್ವಲ್ಪ ದಿನದಲ್ಲಿ ನೋಡಿ, ನಮ್ಮ ರಂಗು ಆಕಾಶವಾಣಿಯಲ್ಲೆ ಹಾಡ್ತಾಳೆ. ಎಮ್. ಎಸ್. ಸುಬ್ಬುಲಕ್ಷ್ಮಿ ಕಂಠಾನೂ, ನಮ್ಮ ರಂಗೂ ಕಂಠಾನೂ ಒಂದೇ ಎಂದು ಮೈಸೂರು ಜನವೆಲ್ಲ ಹೊಗಳ್ತಿದೆ ” ಎಂದು ಅವಳ ತಾಯಿ ಜಂಭಕೊಚ್ಚಿಕೊಳ್ಳುತಿದ್ದಳು. ಪಾಳ್ಯದ ಅಗ್ರಹಾರದ ಹುಡುಗಿಯರೆಲ್ಲ ಮೊವಲು ಮೊದಲು ಸ್ವಲ್ಪಬಾಯಿ ಬಿಚ್ಚಿದ್ದರು. ಈಗ ಪಿಟಕ್, ಫಟಕ್ ಎನ್ನಲಿಲ್ಲ. ಅವರಿಗೆ ಕನ್ನಡ ಬಿಟ್ಟು ಮತ್ತಾವ ಭಾಷೆಯೂ ತಿಳಿಯದು. “ ಸುರನಾರೀಮಣಿ ಬಾ ಬಾರೆ ” ಎಂದರೆ ಎಲ್ಲರೂ ನಗುವರಲ್ಲವೆ ? ಹಳ್ಳಿಗಮಾರ್ ಎನ್ನುತ್ತಾರಲ್ಲವೇ ? ಅದಕ್ಕೇ ಅವರು ಮೌನಸಾಧಿಸಿದರು. ಲಕ್ಷ್ಮಿ ಹಾಡುಗಳನ್ನು ಕೇಳುತ್ತ ತಲೆತಗ್ಗಿಸಿ ಕುಳಿತಿದ್ದಳು. ಕೆಲವೊಮ್ಮೆ ತಲೆಯೆತ್ತಿ ಹಾಡುತ್ತಿರುವರಾರೆಂದು ನೋಡಿಕೊಳ್ಳುತಿದ್ದಳು. ನಮ್ಮ ಕಡೆಯವರಾರೂ ಹಾಡುವುದಿಲ್ಲವಲ್ಲಾ ಎಂದು ಅವಳಿಗೆ

ಮನಸ್ಸಿನಲ್ಲಿ ಅಸಮಾಧಾನ. ಮೈಸೂರು ಹುಡುಗಿಯರ ಹಾಡಿನ ಹೊಡೆತ ಹಾಗಾಡಿ ಹೀಗಾಡಿ, ಒಂದು ಸ್ತಿಮಿತಕ್ಕೆ ನಿಂತಿತು. ಇನ್ನು ಉಡುಗೊರೆ ಹೊಡೆತ. ಶಾಸ್ತ್ರಿಗಳು ಈಗ ಎದ್ದು ನಿಂತರು. ಅವರು ನೋಡಲು ಸುಂದರವಾಗಿದ್ದರು. ಪಂಚೆಕಚ್ಚೆಹಾಕಿ ಮೇಲೆ ವಸ್ತ್ರ ಹೊದ್ದಿದ್ದರು. ಕುಂಬಳಕಾಯಿನ ಹಾಗೆ ಗುಂಡು ಗುಂಡಾಗಿದ್ದರು. ಕಿವಿಯಲ್ಲಿದ್ದ ಕಡುಕು ಮಿನುಗುತಿತ್ತು. ಬಲೆ ಹಾಗಿದ್ದ ರೇಶ್ಮೆವಸ್ತ್ರದ ಒಳಗಡೆ ಅವರ ಕೆಂಪಗಿನ ಶರೀರವೂ, ಬೆಳ್ಳಗಿನ ಜನಿವಾರವೂ ಕಾಣುತಿತ್ತು. ಮೂಗು ಉದ್ದವಾಗಿ ಕಣ್ಣುಗಳು ಮಾತ್ರ ಸ್ವಲ್ಪ ಚಿಕ್ಕದಾಗಿದ್ದುವು. ಮಂಗಳದ್ರವ್ಯ ಗಳನ್ನು ಬೇರೆ ಬೇರೆ ಬೆಳ್ಳಿತಟ್ಟೆಗಳಲ್ಲಿ ತುಂಬಿಸಿ, ದೊಡ್ಡದಾದ ಬೆಳ್ಳಿತಟ್ಟೆಯಲ್ಲಿರಿಸಿ, ಅವರ ಮುಂದೆ ಇಡಲಾಗಿದ್ದಿತು. ಅವರು ಅಕ್ಷತೆಯ "ಗಿಣ್ಣ" ವನ್ನು ಮಾತ್ರ ತೆಗೆದುಕೊಂಡು, ಸ್ವಲ್ಪ ಅಕ್ಷತೆ ಕಾಳನ್ನು ವಧೂವರರ ಮೇಲೆ ಚೆಲ್ಲಿದರು. ಅನಂತರ ಪ್ರಾರಂಭಿಸಿದರು. "ಶ್ರೀಮಾ̄....ರವರು ವಧೂವರರಿಗೆ ನೀಡಿದ ಗಟ್ಟಿಗಟ್ಟಿವರಹ" ಎಂದು ಉಡುಗೊರೆಗಳು ಕುವಿಯ ಲಾರಂಭಿಸುವುವು. ಅವೊಂದು ರಾಶಿಯೇ ಆಯಿತು. ಶಾಸ್ತ್ರಿಗಳು ಒಂದೊಂದಾಗಿ, ನೀಡಿದವರ ಹೆಸರನ್ನು ಕೇಳಿಕೊಂಡು, ವಧುವಿಗೂ ವರನಿಗೂ ಕೊಡುತಿದ್ದರು. ಲಕ್ಷ್ಮಿ ಸಂಕೋಚದಿಂದಲೇ ಎರಡೂ ಕೈಗಳಿಂದ ತೆಗೆದುಕೊಂಡು ತನ್ನ ಎಡಭಾಗದಲ್ಲಿರಿಸಿಕೊಳ್ಳುತಿದ್ದಳು. ರಾಘು ತನ್ನ ಬಲಭಾಗದಲ್ಲಿರಿಸಿಕೊಳ್ಳುತಿದ್ದನು. ಲಕ್ಷ್ಮಿಗೆ ಉಡು ಗೊರೆ ಜಾಸ್ತಿಯೆಂದೇ ಹೇಳಬೇಕು. ಆದರೆ ರಾಘುವಿಗೇನೂ ಕಡಮೆಯಾಗಲಿಲ್ಲ. ಬೆಳ್ಳಿಪಾತ್ರೆಗಳು, ಹಣಕಾಸು, ಸೀರೆ, ಕಣ ಮುಂತಾದವುಗಳೆಲ್ಲ ಅದರಲ್ಲಿ ಅಡಕವಾಗಿದ್ದುವು. ಕುಟ್ಟಪ್ಪ ತುಳಸಿಪೂಜೆಗೆಂದು ವಧುವಿಗೆ ಒಂದು ಬೆಳ್ಳಿ ಪಂಚಾರತಿಯನ್ನು ಓದಿಸಿದ. ಗ್ರಾಮದ ರೈತರೆಲ್ಲರೂ ಅವರವರ ಅಂತಸ್ತಿಗೆ ತಕ್ಕಂತೆ ಸಂಭಾವನೆ ನೀಡಿದರು. ಲಕ್ಷ್ಮಿ ತಮ್ಮ ಊರಿನವಳು

ಎಂಬ ಅಭಿಮಾನ ಜಾಸ್ತಿಯಿದ್ದರೂ, ಹುಲಿ ಬೇಟೆಯಿಂದ ರಾಘುವಿಗೂ ಅವರುಗಳು ಬೇಕಾದವರಾಗಿ ಹೋದರು. ರಾತ್ರಿ ಹತ್ತುಘಂಟೆಯವರೆಗೆ ಈ ಸಮಾರಂಭವೆಲ್ಲ ಮುಗಿಯಿತು. ಬಂದವ ರೆಲ್ಲ ತಾಂಬೂಲ ಸ್ವೀಕರಿಸಿದನಂತರ ಹೊರ ನಡೆದರು. ಅನಂತರ ಎಲ್ಲರೂ ಊಟಮುಗಿಸಿ ಆ ದಿನದ ಕಾರ್ಯಕಲಾಪಗಳು ಮುಗಿಯಿತೆಂದು ಹರ್ಷಿತರಾಗಿ, ನಿಶ್ಚಿಂತತೆಯಿಂದ ಮಲಗಿ ನಿದ್ದೆ ಹೋದರು.

೩೩

ಇಂದು ನಾಗಬಲಿ. ಮನೆಯೆಲ್ಲ ಚಿತ್ರವಿಚಿತ್ರವಾಗಿ ಬಣ್ಣ ಕಲಸಿದ ಅಕ್ಕಿಕಾಳುಗಳಿಂದ ಸಾಲು ಎಳೆದಿದ್ದರು. ಮಾರನೆಯ ದಿನ ಬೀಗರ ಔತಣ. ಅಂದರೆ ಗುಂಡೂರಾಯರ ಮನೆಯವ ರದ್ದು. ಅವರೂ ಸೊಗಸಾಗಿಯೇ ತಮ್ಮ ಭಾಗವನ್ನು ಮುಗಿಸಿ ಕೊಂಡರು. ಇನ್ನೊಂದು ಪ್ರಮುಖವಾದ ವಿಷಯವನ್ನು ಬರೆ ಯಲು ಮರೆತೆ. ಅದೇ ದಂಪತಿಗಳ ಮೆರವಣಿಗೆ. ಪಟ್ಟಣ ಗಳಲ್ಲಿ ಹೆಚ್ಚು ವಿಜೃಂಭಣೆಯಿಂದ ಇದನ್ನು ಆಚರಿಸುತ್ತಾರೆ. ಬಾಡಿಗೆಗೆ ಕಾರ್ ಸಿಗುತ್ತದೆ; ಇನ್ನೂ ಎಷ್ಟೋ ಸೌಲಭ್ಯಗಳಿವೆ. ಆದರೆ ಹಳ್ಳಿಗಳ ಮಾತು ಹಾಗಲ್ಲ. ಅವರಿಗೆ ಇಂಥ ಅನುಕೂಲತೆ ಗಳು ಕಡಿಮೆ. ಆದುದರಿಂದ ಗಾಡಿ, ಅಥವಾ ಕಾಲ್ನಡಿಗೆಯಲ್ಲೇ ಅವರುಗಳು ಮೆರವಣಿಗೆ ಮುಗಿಸಿಕೊಳ್ಳುತ್ತಾರೆ. ಪಾಳ್ಯ ಚಿಕ್ಕ ಹಳ್ಳಿಯಾದುದರಿಂದ ಕಾಲ್ನಡಿಗೆಯಲ್ಲೆ ಬೀದಿ ಮೆರವಣಿಗೆ ಮುಗಿಸಿದರು. "ನಾವು ಸ್ವಲ್ಪ ಯೋಚನೆ ಮಾಡಲಿಲ್ಲ, ಇಲ್ಲದಿದ್ದರೆ ಮೈಸೂರಿನಿಂದಲೇ 'ಸಾರೋಟ್' ಕರಿಸಬಹುದಾಗಿತ್ತು" ಎಂದು ಕುಟ್ಟಪ್ಪನಂದನು. "ಬಿಡಿ, ಏನಾಯಿತು? ಕಾಡು ಸೀಮೆ, ಇಲ್ಲಿಗೆಲ್ಲಾ ತರುವುದೆಂದರೆ ಬಹಳ ಕಷ್ಟವಿದೆ" ಎಂದು ಶಾಮ

ರಾಯರು ಪ್ರತ್ಯುತ್ತರವಿತ್ತರು. ಮಾರನೆಯ ದಿನ ಶಾಂತಿಪ್ರಸ್ಥ. ದಂಪತಿಗಳು ಒಂದುಗೂಡುವ ಪ್ರಥಮ ದಿನವಿದೇ ಆದುದರಿಂದ ಇದಕ್ಕೆ ಮಹತ್ವ ಹೆಚ್ಚು. ಈ ರಾತ್ರಿ ಕೋಣೆಯೊಂದರಲ್ಲಿ ವಿವಿಧ ಅಲಂಕಾರಗಳನ್ನು ಮಾಡಿದ್ದರು. ಪಾಲಕ್ಕಾಡು ದೊಡ್ಡ ಮಂಚವೊಂದನ್ನು ಒಳಗೆ ಹಾಕಲಾಗಿದ್ದಿತು. ಅದರ ಮೇಲೆ ಮೆತ್ತನೆಯ ಹಾಸಿಗೆ; ಎತ್ತರದ ಎರಡು ದಿಂಬುಗಳನ್ನು ಒರಗಿಸಿ ಇರಿಸಿದ್ದರು. ಊದುಬತ್ತಿಯ ಸುವಾಸನೆ ಕೋಣೆಯನ್ನೆಲ್ಲ ಆವರಿಸಿತ್ತು. ವಿಧ ವಿಧದ ಚಿತ್ರಪಟಗಳನ್ನು ಗೋಡೆಗೆ ತಗಲು ಹಾಕಿದ್ದರು. ದಂಪತಿಗಳು ಮನೆಗೆ ಹೋಗುವ ಮುನ್ನ, ಅವರು ನಡೆದುಕೊಳ್ಳಬೇಕಾದ ವಿಧಾನವನ್ನು ಸಮೀಪದ ಕೆಲವು ಬಂಧುಗಳು ಅವರಿಗೆ ಹೇಳಿಕೊಡುತ್ತಾರೆ. ಆ ಸಮಯವೂ ಬಂದಿತು. ರಾಘು ಮುನ್ನವೇ ಒಳಕ್ಕೆ ಬಿಡಲ್ಪಟ್ಟನು. ಅನಂತರ ತುಸು ಸಮಯ ಕಳೆದನಂತರ ಲಕ್ಷ್ಮಿಯೂ ಒಳಗೆ ಪ್ರವೇಶಿಸಿದಳು. ಈಗ ಹೊರಗೆ ಬಾಗಿಲು ಹಾಕಲಾಯಿತು. ಹೇಳಿಕೊಟ್ಟದ್ದಂತೆ ' ಹಾಲು ತೆಗೆದುಕೊಳ್ಳಿ' ಎಂದು ನಾಲ್ಕಕ್ಷರ ಹೊರಗೆಡಹುವುದಕ್ಕೆ, ಲಕ್ಷ್ಮಿಗೆ ಬಹಳ ನಾಚಿಕೆಯಾಗಿ ಹೋಯಿತು. ಪತಿಯ ಕೂಡ ಮೊದಲನೇ ತಡವೆ ಮಾತನಾಡುವುದೆಂದರೆ ಹೆಣ್ಣಿಗೆ ಬಲು ಸಂಕೋಚ; ಆಮೇಲಾಮೇಲೆ ಧಾರಾಳ. ತಾನು ಹೇಳಿದ ಹಾಗೆಲ್ಲ ನಡೆಯುವಂತೆ ಆಮೇಲೆ ಪತಿಯನ್ನು ಕುಣಿಸುತ್ತಾಳೆ.

ವಿವಾಹವೆಲ್ಲ ಈಗ ಮುಗಿಯಿತು. ಬಂದಿದ್ದ ಅಭ್ಯಾಗತರುಗಳೆಲ್ಲ ಈಗ ತಮ್ಮ ತಮ್ಮ ಊರಿಗೆ ಹಿಂದಿರುಗಹತ್ತಿದರು. ಗುಂಡೂರಾಯರ ಮನೆಯವರೂ ಈಗ ಪ್ರಯಾಣಕ್ಕೆ ಸನ್ನದ್ಧರಾದರು. ಲಕ್ಷ್ಮಿ ಹೆಚ್ಚು ಉತ್ಸುಕತೆಯಿಂದಲೇ ಇದ್ದಳು. ಗಾಡಿಗಳೆಲ್ಲ ಸಜ್ಜಾಗಿ ಬಾಗಿಲ ಬಳಿ ಬಂದು ನಿಂತಿದ್ದುವು. ಆಳುಗಳು ಗಾಡಿಗೆ ಹುಲ್ಲುಹಾಕಿ, ಅದರ ಮೇಲೆ ಚಾಪೆಹಾಸಿ, ಚಕ್ರದ ಒಳಭಾಗಕ್ಕೆಲ್ಲ ಹೆರೆ ಎಣ್ಣೆ ಹಾಕುತಿದ್ದರು. ಎತ್ತುಗಳನ್ನು

ನೊಗದ ಬಳಿ ತಂದು ಕಟ್ಟಲಾಯಿತು. ಘಂಟೆಗಳ ಶಬ್ದ ದೊಂದಿಗೆ ಮೆಲುಕು ಹಾಕುತ್ತ ಅವು ನಿಂತುಕೊಂಡಿದ್ದುವು. ಸಾಮಾನುಗಳನ್ನೆಲ್ಲ ಈಗ ಒಂದೊಂದಾಗಿ ಮನೆಯಿಂದ ಹೊರಗೆ ತೆಗೆದು ಒಂದು ಗಾಡಿಯೊಳಗೆ ಆಳುಗಳು ಇರಿಸುತಿದ್ದರು. ಹಿಂದು ಗಡೆ ಬಿದ್ದುಹೋಗದಂತೆ ಹಗ್ಗ ಬಿಗಿದಿದ್ದರು. ರಾಹುಕಾಲ ವೆಲ್ಲವೂ ಈಗ ಕಳೆಯಿತು. ಇನ್ನೇನು, ಎಲ್ಲರೂ ಗಾಡಿ ಏರುವ ಸಮಯ. ಜಾನಕಮ್ಮನವರು ಮಗಳನ್ನು ಆಲಂಗಿಸಿಕೊಂಡು ಬಿಕ್ಕಿಬಿಕ್ಕಿ ಅಳಹತ್ತಿದರು. ಅವರಿಗೀಗ ದುಃಖ ತಡೆಯಲಾಗ ಲಿಲ್ಲ. ಒಂಭತ್ತು ತಿಂಗಳು ಹೊತ್ತು ಹೆತ್ತು, ಲಾಲಿಸಿ ಪಾಲಿಸಿ, ಅಕ್ಕರೆಯಿಂದ ಬೆಳೆಸಿ, ಯಾವುದೋ ಪರಿಚಯವಿಲ್ಲದ ಊರಿಗೆ, ನೂತನ ವ್ಯಕ್ತಿಯೊಂದಿಗೆ ಮಗಳನ್ನು ಕಳುಹಿಸಿಕೊಡಬೇಕು. ತಾಯಿಯಾದವಳಿಗೆ ಇದಕ್ಕಿಂತ ಹೆಚ್ಚಿನ ಬಿಕ್ಕಟ್ಟಿನ ಸಂದರ್ಭ ಬೇರೆ ಯಾವುದೂ ಇರುವುದಿಲ್ಲ. "ಅತ್ತೆ ಮಾವಂದಿರ ಮನಸ್ಸನ್ನು ಯಾವಾಗಲೂ ನೋಯಿಸಬೇಡಮ್ಮ. ಸಂಸಾರದಲ್ಲಿ ಯಾವಾ ಗಲೂ ಬಿರುಕು ಏಳದಂತೆ ಜಾಗ್ರತೆಯಾಗಿ ನೋಡಿಕೊ" ಎಂದಿಷ್ಟೆ ಅವರಿಗೆ ಹೇಳುವುದಕ್ಕೆ ಸಾಧ್ಯವಾಗಲಿಲ್ಲ. ಬರುತಿದ್ದ ಕಣ್ಣೀರನ್ನು ಅವರು ಸೀರೆಯ ಸೆರಗಿನಿಂದ ಒರಸಿಕೊಂಡರು. ಶಾಮರಾಯರು ಅಳಿಯನ ಬಳಿ ಕುಳಿತು "ಚಿಕ್ಕಹುಡುಗಿ; ತಿಳಿಯದೇನಾದರೂ ತಪ್ಪುಮಾಡಬಹುದು. ಅಂಥ ಸಂದರ್ಭದಲ್ಲಿ ಅವಳನ್ನು ಕ್ಷಮಿಸಿ ಸರಿಪಡಿಸಿಕೊಂಡು ಹೋಗುವುದು ತಮ್ಮ ಕರ್ತವ್ಯ" ಎಂದು ಬುದ್ಧಿವಾದ ಹೇಳಿದರು. ಜಾನಕಮ್ಮನವರೂ ಶಾರದಮ್ಮನವರೂ, ಒಳಗೆ ಕುಳಿತು ಏನೇನೋ ಮಾತಾಡು ತ್ತಿದ್ದರು. ಊರಜನಗಳ ಹೆಂಗಸರ ಗುಂಪು ಬಾಗಿಲಲ್ಲಿ ಬಂದು ನೆರೆದಿತ್ತು. ಇನ್ನು ತುಸು ಸಮಯದಲ್ಲಿ ಪಕ್ಷಿ ರಾಣಿ ಹಾರಿ ಹೋಗಲಿದೆಯಲ್ಲಾ ಎಂಬ ಚಿಂತೆ ಪ್ರತಿಯೊಬ್ಬರ ಮನಸ್ಸನ್ನೂ ಕಲಕಿತ್ತು. ಹೆಂಗಸರ ಮಾತುಕತೆಗಳು ಎಲ್ಲಿಂದೆಲ್ಲಿಗೂ ಎಷ್ಟು

ಹೊತ್ತಿನವರೆಗೂ ಮುಗಿಯುವುದೇ ಇಲ್ಲ. ಹನುಮಂತನ ಬಾಲದ ಹಾಗೆ ಅದು ಬೆಳೆದುಕೊಂಡೇಯಿರುತ್ತದೆ. ಶಾಮ ರಾಯರೇ ಈಗ ಪ್ರಯಾಣ ಹೊರಡಲು ಎಲ್ಲರನ್ನೂ ತ್ವರಿತಗೊಳಿ ಸಿದರು. "ಕಾಡುದಾರಿ. ಬೇಗ ನಗರ ಸೇರಬೇಕು. ಏಳಿ, ಏಳಿ" ಎಂದು ಅವರು ಎಬ್ಬಿಸಿದರು. ಈಗ ಒಬ್ಬೊಬ್ಬರಾಗಿ ಗಾಡಿಯ ಬಳಿ ಬರಲಾರಂಭಿಸಿದರು. ತಂಗಿಯ ಕೂಡ ರಾಮು ಮೈಸೂರಿಗೆ ಹೋಗಿದ್ದು ಬರುವುದೆಂದು ತೀರ್ಮಾನವಾಗಿತ್ತು. ರಾಘು ಗಾಡಿ ಹತ್ತಿದನು. ಮಗಳಿಗೆ ಬುದ್ಧಿವಾದ ಹೇಳುತ್ತ ಪತಿಪತ್ನಿಯರು ಅವಳನ್ನು ಗಾಡಿಗೆ ಹತ್ತಿಸಿದರು. ಭಾವ ಕುಳಿತಿದ್ದ ಗಾಡಿಯನ್ನು ಬಿಡುವುದಕ್ಕೆ ರಾಮುವೇ ಕುಳಿತನು. ದೊಡ್ಡ ಗುಂಪೊಂದು ಅವರನ್ನು ಸಾಗಗೊಳಿಸಲು ಊರಿಂದ ಮುಕ್ಕಾಲು ಮೈಲುವರೆಗೂ ಹೋಗಿದ್ದಿತು. ಆಟವಾಡಿದ ಮನೆ, ನೆಚ್ಚಿನ ತಾಯ್ತಂದೆಯರು, ಅಗ್ರಹಾರದ ತನ್ನ ಸ್ನೇಹಿತೆಯರು, ಊರಸ್ತ್ರೀಯರು, ಆ ಕೆರೆ, ವೃಂದಾವನ, ಊರ ಮುಂದಿನ ಮಾವಿನಮರ, ಎಲ್ಲ ಈಗ ಲಕ್ಷ್ಮಿ ಯಿಂದ ಒಂದೊಂದಾಗಿ ಕಣ್ಮರೆಯಾಗುತಿದ್ದುವು. ಅವಳಿಗೆ ಕ್ಷಣಕಾಲ ಮನಸ್ಸು ಧಿಕ್ ಎಂದರೂ, ಕೈಹಿಡಿದ ಪತಿ ಪಕ್ಕದಲ್ಲೆ ಕುಳಿತಿರುವಾಗ, ಒಡನೆಯೇ ಆನಂದವೂ ಉಂಟಾಯಿತು. ಮೆಲ್ಲಗೆ ಅವಳು ಓರೆಗಣ್ಣಿನಿಂದ ಪತಿಯ ಮುಖವನ್ನು ಈಕ್ಷಿಸಿ ದಳು. ರಾಘು ತನ್ನ ಮುದ್ದು ಮಡದಿಯೊಂದಿಗೆ ನಗುತ್ತ ಏನೇನೋ ಪ್ರಶ್ನೆ ಹಾಕುತಿದ್ದನು. ಅವಕ್ಕೆಲ್ಲ ಉತ್ತರಕೊಡಲು ಅನೇಕವೇಳೆ ಅವಳಿಂದ ಸಾಧ್ಯವಾಗುತ್ತಿರಲಿಲ್ಲ. ಅಂಥ ಸಮಯ ಗಳಲ್ಲವಳು ಪ್ರತ್ಯುತ್ತರಕ್ಕೆ ಮುಗುಳ್ನಗೆಯೊಂದನ್ನು ಬೀರಿ ನಾಚಿಕೆ ಯಿಂದ ತಲೆ ತಗ್ಗಿಸುತಿದ್ದಳು.

## ೨೪

ಪಂಜರದಲ್ಲಿದ್ದ ಗಿಳಿ ಈಗ ಇಲ್ಲ. ಬರೇ ಗೂಡು ಮಾತ್ರ ನೇತುಹಾಕಿದೆ. ಜಾನಕಮ್ಮನವರಿಗೆ ಮನೆಯೊಳಗೆ ಎತ್ತ ಕಾಲಿಟ್ಟರೂ, ಏನೋ ಒಂದು ವಿಧದ ಬೇಜಾರು-ಅವರನ್ನು ಹಿಡಿದುಕೊಳ್ಳುತಿತ್ತು. ಲಕ್ಷ್ಮಿ, ಲಕ್ಷ್ಮಿ ಎಂದು ಅವರ ಬಾಯಿ ದಿನಕ್ಕೆ ನೂರು ತಡವೆಯಾದರೂ ಅನ್ನುತಿತ್ತು. ಆ ಲಕ್ಷ್ಮಿ ಈಗ ಮನೆಯಲ್ಲಿಲ್ಲ. ಹೆಣ್ಣು ಜೀವ ಎಂಥ ಕಠಿಣ! ಅವಳು ಸುಖ ವಾಗಿ ಬಾಳಬೇಕು ಎಂದು ದೇವರಿಗೆ ಕೈಮುಗಿದರು. ಲಕ್ಷ್ಮಿ ಮನೆಯಲ್ಲಿದ್ದಾಗ ಅವಳ ಗೆಳತಿಯರು ಧುಮುಧುಮುಯೆಂದು ಮನೆ ತುಂಬ ಓಡಾಡುತ್ತ ರಗಳೆ ಮಾಡುತಿದ್ದರು. ಈಗ ಈ ಮುದುಕಮ್ಮನ ಕೂಡ ಅವರಿಗೇನು ಕೆಲಸ. ಬಂದರೂ ಒಂದೆರಡು ವಾರ್ತೆಯಾಡಿ ಹೊರಟು ಹೋಗುತಿದ್ದರು. ಅವರಿಗೆ ಹೊತ್ತು ಕಳೆಯುವುದೇ ಬಹಳ ಕಷ್ಟವಾಗುತಿತ್ತು. ಆಗಾಗ್ಗೆ ಅವರಲ್ಲಿಗೆ ಪಾತು ಬರುತಿದ್ದಳು. ಜಾನಕಮ್ಮನವರ ನೆಚ್ಚಿನ ಸ್ನೇಹಿತಿ ಅವಳೇ! ಅವಳೊಂದಿಗೆ ಏನಾದರೂ ಮಾತನಾಡುತ್ತ ಘಂಟೆ ಘಂಟೆ ಕಳೆಯುತಿದ್ದರು. ಲಕ್ಷ್ಮಿ ಮನೆ ಬಿಟ್ಟು ಪತಿಯ ಮನೆಗೆ ತೆರಳಿ ಎರಡು ದಿನಗಳು ಸಂದುವು. ಹೋಗಿದ್ದ ಗಾಡಿಗಳೆಲ್ಲ ಈಗ ಊರಿಗೆ ಹಿಂದಿರುಗಿದವು. ರಾಮು ಮಾತ್ರ ಬರಲಿಲ್ಲ. ಗುಂಡೂರಾಯರ ಬಲವಂತದ ಮೇಲೆ, ಲಕ್ಷ್ಮಿಯ ಕೋರಿಕೆಯ ಮೇರೆಗೆ, ಇನ್ನೂ ಎಂಟು ದಿನಗಳು ಮೈಸೂರಿನಲ್ಲಿದ್ದು ಬರುವು ದಾಗಿ ಗಾಡಿಯವರ ಕೂಡ ಅವನು ಹೇಳಿ ಕಳುಹಿಸಿದ್ದನು. ಅವನಿಗೂ ಬೇಗನೆ ಊರಿಗೆ ಹಿಂದಿರುಗುವ ಹಂಬಲ. ತನ್ನ ಮನೆಯ ಪರಿಸ್ಥಿತಿಯನ್ನು ರಾಮು ಚೆನ್ನಾಗಿ ತಿಳಿದವನಾಗಿದ್ದನು. ವಯಸ್ಸಾದ ತಂದೆ. ಅದಲ್ಲದೆ ಈಗ ಜಮಾಬಂದಿಯ ಕಾಲ. ತಾಲ್ಲೂಕು ಹೆಡ್‌ಕ್ವಾರ್ಟರಾದ ಗೋಪಿಚೆಟ್ಟಿಪಾಳ್ಯದ ತಿಟ್ಟು

ಹತ್ತಬೇಕು. ತಂಗಿಗೆ ಸಮಾಧಾನ ಹೇಳಿ, ಆಗಾಗ್ಗೆ ಬರುತ್ತೇನೆಂದು ವಾಗ್ದಾನಕೊಟ್ಟು, ಅವನೀಗ ಊರಿಗೆ ಹಿಂದಿರುಗಿದನು. ಜಾನಕಮ್ಮನವರು ಮಗನಿಗೆ ವಕೀಲರಂತೆ ಏನೇನೆಲ್ಲ ಪ್ರಶ್ನೆ ಹಾಕಿದರು. ಕೆಲವಕ್ಕೆಲ್ಲ ಉತ್ತರಕೊಡಲು ರಾಮುವಿನಿಂದ ಸಾಧ್ಯವಾಗುತ್ತಿರಲಿಲ್ಲ. ಆಗವನು ಹುಂಗುಟ್ಟುತ್ತ ಮೌನ ಸಾಧಿಸುತಿದ್ದನು.

೩೩

ಲಕ್ಷ್ಮಿಗೀಗ ಅಪರಿಮಿತಾನಂದ ; ಅವಳು ಹಿಗ್ಗಿಹೋದಳು. ಸುಖಕ್ಕೇನೂ ಅವಳಿಗೆ ಕೊರತೆಯಿಲ್ಲ. ಭಾರಿ ಮನೆ. ನೆಲಕ್ಕೆ ಹಾಸಿದ್ದ ಕರಿಯ ಕಡಪಾ ಕಲ್ಲುಗಳು ಪ್ರತಿಬಿಂಬ ತೋರಿಸುತಿದ್ದುವು. ಲಕ್ಷ್ಮಿಗೆ ಮನೆಯ ಪರಿಚಯ ಮಾಡಿಕೊಳ್ಳುವುದಕ್ಕೇ ಬಹಳ ದಿನಗಳು ಹಿಡಿಯಿತು. ಅವಳು ಮಹಡಿಯ ಮೇಲೆ ನಿಂತು ಕೆಲವು ವೇಳೆ ಬೀದಿಯ ಸೊಬಗನ್ನು ನೋಡುತಿದ್ದಳು. ಪಾಳ್ಯದಲ್ಲಿ ಇಂಥದೊಂದು ಬೀದಿ ತಾನೆ ಎಲ್ಲಿದ್ದಿತು? ಲಕ್ಷ್ಮಿ ತನ್ನ ಮನೆಯಲ್ಲಿದ್ದಾಗ ಬೀಸುವುದು, ಕುಟ್ಟುವುದು, ಸ್ನೇಹಿತೆಯರ ಕೂಡ ಕೆರೆಗೆ ಹೋಗಿ ನೀರು ಹೊತ್ತುತರುವುದು, ಮುಂತಾದುವನ್ನೆಲ್ಲ ಮಾಡುತಿದ್ದಳು. ಈಗ ಇಲ್ಲಿ ಇಂಥದಕ್ಕೇನೂ ಅವಕಾಶವಿಲ್ಲ. ಪೈಪ್ ತಿರುಗಿಸಿದರೆ ಸಾಕು ಸೊರ್ರೆಂದು ನೀರು ಕೆಳಕ್ಕೆ ಧುಮುಕುತ್ತದೆ. ಚಿಲುಮಿ ಒರಸಿ ಎಣ್ಣೆಹಾಕಿ ದೀಪ ಹಚ್ಚಬೇಕಾಗಿಲ್ಲ. ಸ್ವಿಚ್ ತಟ್ಟಿದರೆ ಸಾಕು ; ಭಗ್ಗೆಂದು ಹತ್ತಿ ಉರಿಯುತ್ತದೆ ದೀಪ. ಲಕ್ಷ್ಮಿಯು ಮಹಡಿಯ ಕೋಣೆಯಲ್ಲೆ ಮಲಗುತಿದ್ದಳು. ಕೆಳಗಡೆ ಅತ್ತೆ ಮಾವಂದಿರು ಮಲಗುತಿದ್ದರು. ಲಕ್ಷ್ಮಿ ಮಲಗುವ ಕೋಣೆಯ ಸೊಬಗೇ ಸೊಬಗು. ಥಳಥಳನೆ ಮಿನುಗುವ ಕೆಂಪುವರ್ಣದ ಮಂಚ, ಮೇಲೆ ಸೊಳ್ಳೆ ಪರದೆ.

ವಿಶಾಲವಾದ ಎರಡು ಕಿಟಕಿಗಳಿಂದ, ಯಥೇಚ್ಛವಾಗಿ ಗಾಳಿ ಬೆಳಕುಗಳು. ಕಿಟಕಿಯ ಬಳಿಯಲ್ಲೊಂದು ಮೇಜ, ಅದರ ಬಳಿ ಕುರ್ಚಿ. ಮೇಜಿನಮೇಲೆ ಟಿಕ್ ಟಿಕ್ ಶಬ್ದಮಾಡುತ್ತಲಿರುವ ಅಲಾರಂ ಗಡಿಯಾರ. ಒರಗಿ ಕುಳಿತುಕೊಳ್ಳಲು ಈಸಿ ಚೇರ್ ಒಂದು. ಕೋಣೆಯಲ್ಲಿ ವಿಧವಿಧದ ಚಿಕ್ಕ ಸೈಜಿನ ಚಿತ್ರಪಟಗಳು; ರಾಘುವಿನ ದೊಡ್ಡದಾದ ಫೋಟೊವೊಂದು. ಬಾಗಿಲ ಹಿಂದೆ, ಬಟ್ಟೆಬರೆಗಳನ್ನು ಹಾಕಿಡಲೆಂದು ಚಿಕ್ಕದೊಂದು ಬೀರು. ಇನ್ನು ಕೆಳಗೋ! ಮಧ್ಯೆ ದೊಡ್ಡದಾದ ಹಾಲ್. ಪಶ್ಚಿಮಕ್ಕೆ ಒಂದು ಸಾಲಿನಲ್ಲಿ ಮೂರು ಕೊಠಡಿಗಳು. ಉತ್ತರನ ಸಾಲಿನಲ್ಲಿ ಎರಡು ಕೊಠಡಿಗಳು. ಉತ್ತರದ ಸಾಲಿನ ಒಂದು ಕೊಠಡಿ ಗುಂಡೂ ರಾಯರ ಆಫೀಸ್‌ರೂಮು. ಮತ್ತೊಂದು ಕೊಠಡಿಯಲ್ಲಿ ಹತ್ತಾರು ಭತ್ತದ ಮೂಟೆಗಳನ್ನು ಹಾಕಿದ್ದರು. ಪೂರ್ವ ಸಾಲಿನ ಚಿಕ್ಕ ಕೋಣೆಯೇ ಸ್ನಾನದ ರೂಮು. ಮೂಲೆ ಕೊಠಡಿ ಅಡಿಗೆ ಮನೆ. ಅದು ದೊಡ್ಡದಾಗಿದ್ದುದರಿಂದ ಎರಡು ಭಾಗ ಮಾಡಲ್ಪಟ್ಟಿದ್ದಿತು. ಒಂದು ಭಾಗ ದೇವರ ಮನೆ. ಅದು ಚಿಕ್ಕದಾಗಿ ಸುಂದರ ವಾಗಿದ್ದಿತು. ವಿಗ್ರಹಗಳ ಕೂಡ ನಾಲ್ಕಾರು ದೇವರ ಸಣ್ಣ ಚಿತ್ರ ಗಳನ್ನೂ ತಗಲು ಹಾಕಿದ್ದರು. ಮತ್ತೊಂದು ಉಗ್ರಾಣದ ಕೊಠಡಿ. ಎರಡು ಗೋಡೆ ಬೀರುಗಳು ಅದರಲ್ಲಿದ್ದುವು. ಹಾಲಿ ನಲ್ಲಿ ಗೋಡೆಗೆ ಸೇರಿಸಿದಂತೆ ದೊಡ್ಡದೊಂದು ಪೆಟ್ಟಿಗೆ, ಪೂರ್ವ ಭಾಗಗಲ್ಲಿ ಒಂದು ಮೇಜ, ಅದರ ಪಶ್ಚಿಮಕ್ಕೆ ಒಂದು ಸ್ಟೂಲು, ಉತ್ತರಕ್ಕೆ ಒಂದು ಈಸಿ ಚೇರ್ ಹಾಕಲಾಗಿದ್ದಿತು. ಮೇಜದ ಮೇಲೆ ಅಲಂಕಾರಕ್ಕೆ ಮಣ್ಣಿನ ಪಾನೆಯಲ್ಲಿ ಹೂತಿದ್ದ ಕಾಗದದ ಹೂವೊಂದು. ಗೋಡೆಗೆ ದೊಡ್ಡದೊಂದು ಗಡಿಯಾರ ತಗಲು ಹಾಕಿದ್ದರು. ಘಂಟೆಗೆ, ಅರ್ಧಘಂಟೆಗೆ ಅದು ಢಾಣ್, ಢಾಣ್ ಶಬ್ದ ಮಾಡುತಿತ್ತು. ದೊಡ್ಡ ದೊಡ್ಡ ಚಿತ್ರಪಟಗಳು ಹಾಲಿನಲ್ಲಿ ಕಂಗೊಳಿಸುತಿದ್ದುವು. ಅದರಲ್ಲೂ ಎಷ್ಟೊಂದು ವಿಧ. ಗುಂಡೂ

ರಾಯರು ಮತ್ತು ಶಾರದಮ್ಮನವರ ದೊಡ್ಡ ತೈಲಚಿತ್ರಗಳು ಎದುರುಗಡೆ ಒಂದೇ ಸ್ಥಳದಲ್ಲಿದ್ದುವು. ಕುಟ್ಟಪ್ಪನೂ, ರಾಮುವೂ ಕೈ ಕ್ಯಾಮರಾದಿಂದ ರಾಘುವಿನ ವಿವಾಹ ಕಾಲದಲ್ಲಿ ತೆಗೆದ ಚಿಕ್ಕ ಚಿಕ್ಕ ಫೋಟೋಗಳಿಗೂ ಆಗಲೇ ಫ್ರೇಂ ಹಾಕಿಸಿ ತಗಲು ಹಾಕಿದ್ದರು. ಉತ್ತರ ಪಾರ್ಶ್ವದಲ್ಲಿ ಕೆಳಗಡೆ ಚಿಕ್ಕದಾದೊಂದು ಜಗಲಿ, ಅದರ ಮೇಲೆ ತುಳಸಿಗಿಡ ನೆಟ್ಟ ವೃಂದಾವನ, ಬಾಗಿಲಿನಲ್ಲೆ ಒಂದು ವರಾಂಡಾ. ಬಂದ ಅತಿಥಿಗಳು ಕುಳಿತುಕೊಳ್ಳುವುದಕ್ಕಾಗಿ ಇದನ್ನು ಉಪಯೋಗಿಸುತಿದ್ದರು. ಅಲ್ಲೂ ಸಹ ಎರಡು ಹುಲ್ಲೆಯ ಕೊಂಬಿನೊಂದಿಗೆ ನಾಲ್ಕಾರು ಚಿತ್ರಪಟಗಳು, ಒಂದೆರಡು ಕುರ್ಚಿ, ಮೇಜವನ್ನು ಹಾಕಲಾಗಿದ್ದಿತು. ಮನೆಯಲ್ಲಿ ಬಟ್ಟೆಗಳನ್ನು ಒಗೆಯ ಬೇಕಾಗಿಲ್ಲ; ಮನೆಯಲ್ಲಿ ಕಸ ತೆಗೆಯ ಬೇಕಾಗಿಲ್ಲ. ಒಂದೂವರಾಣೆ ಕೊಟ್ಟರೆ ತೀರಿತು. ಎಷ್ಟು ಸೊಗಸಾಗಿ, ಫಳಫಳನೆ ಮಿಂಚುವ ಹಾಗೆ, ಆ ಲಾಂಡ್ರಿಯವನು "ಇಸ್ತ್ರಿ" ಮಾಡಿಕೊಡುತ್ತಾನೆ. ಕೆಲಸಕ್ಕೆಂದು ಮನೆಯಲ್ಲಿ ಒಬ್ಬಳನ್ನು ಇರಿಸಿಕೊಂಡಿದ್ದರು. ಅವಳು ಆಗಾಗ್ಯೆ ಮನೆಯನ್ನೆಲ್ಲ ಶುಭ್ರವಾಗಿ ಗುಡಿಸಿ, ಚಿಲ್ಲರೆ ಕೆಲಸಗಳನ್ನೆಲ್ಲ ಮಾಡಿಕೊಡುತಿದ್ದಳು. ಕಂಪೌಂಡು ಬಳಸಿ ಚಿಕ್ಕದಾದ ಒಂದು ಹಿತ್ತಿಲೂ ಇತ್ತು

ಅತ್ತೆಮಾವಂದಿರು ಲಕ್ಷ್ಮಿಯನ್ನು ಕಂಡರೆ ಬಹಳ ಪ್ರೀತಿಯಿಂದಿದ್ದರು. ಗುಂಡೂರಾಯರಿಗೆ ಸೊಸೆಯೆಂದರೆ ಬಹಳ ಪ್ರೇಮ. ಅವರಿಗಿನ್ನಾವ ಸುಖವಿದ್ದಿತು ? ಮಗನೊಂದಿಗೆ ಸಲಿಗೆಯಿಂದ ಮಾತನಾಡಿದ ದಿನವು ಅವರಿಗೇ ಜ್ಞಾಪಕವಿಲ್ಲ, ಆದರೆ ಈಗ ರಾಘುವಿನ ಮೇಲೆ ಅವರಿಗೆ ಕೋಪವಿಲ್ಲ. ಲಕ್ಷ್ಮಿ ಸದಾ ಕಾಲವೂ ನಗುನಗುತ್ತ "ಮಾವ ಮಾವ" ಎನ್ನುತಿದ್ದಾಗ, ಅವರು ಆನಂದಭರಿತರಾಗುತಿದ್ದರು. ಸೊಸೆಗೆ ಯಾವ ಕಾಲದಲ್ಲೂ ಒಂದಿಷ್ಟೂ ಚಿಂತೆಯಿರಕೂಡದೆಂದು ಅವರ ಹಂಬಲ.

ಮೈಸೂರಿನ ಪರಿಚಯವನ್ನು ಈಗ ಲಕ್ಷ್ಮಿಗೆ ಅವರು ಮಾಡಿ ಕೊಡಲಾರಂಭಿಸಿದರು. ಕನ್ನಂಬಾಡಿ ಕಟ್ಟೆ, ಮೃಗಾಲಯ, ಚಾಮುಂಡಿಬೆಟ್ಟ, ಚರ್ಚ್, ಇನ್ನೂ ಮುಖ್ಯವಾದ ಸ್ಥಳಗಳಿಗೆ, ಒಂದೊಂದು ದಿನ ಅವಳನ್ನು ಕರೆದುಕೊಂಡು ಹೋಗುತಿದ್ದರು. ಶಿವರಾಂಪೇಟೆಯ ತಮ್ಮ ಇನ್ನೊಂದು ಮನೆಯನ್ನು ಅವಳಿಗೆ ತೋರಿಸಿ, ಅದರಿಂದ ನೂರೈವತ್ತು ರೂಪಾಯಿ ಬಾಡಿಗೆ ಬರುವು ದಾಗಿ ತಿಳಿಸಿದರು. ರಜೆಯ ದಿನಗಳಲ್ಲಿ ಲಕ್ಷ್ಮಿ ಪತಿಯೊಂದಿಗೆ ಸಿನಿಮಾ ನೋಡಲು ಹೋಗುವುದೂ ಉಂಟು. ಸಿನಿಮಾ ನೋಡ ದಿದ್ದ ಅತ್ತೆಯನ್ನು ತಗಾದೆ ಮಾಡಿ, ಅವಳು ಕೆಲವು ವೇಳೆ ಕರೆದು ಕೊಂಡು ಹೋಗುವುದೂ ಉಂಟು. ಲಕ್ಷ್ಮಿಗೆ ಆಗಾಗ್ಯೆ ಊರಿಂದ ಪತ್ರಗಳು ಬರುತಿದ್ದುವು. ಎಷ್ಟೇ ಅನುಕೂಲತೆಯಿಂದಿದ್ದರೂ ಕೆಲವು ವೇಳೆ ತನ್ನ ತಾಯಿಯ ನೆನಪು ಬಂದಾಗ, ಕ್ಷಣಕಾಲ ಅವಳಿಗೆ ಕಣ್ಣು ಕಟ್ಟಿದಂತಾಗುತಿತ್ತು. ಲಕ್ಷ್ಮಿ ಈಗ ಸಂಸಾರ ವೆಂಬ ಸಾಗರದಲ್ಲಿ, ಸುಖವೆಂಬ ನೌಕೆಯಲ್ಲಿ ಕುಳಿತು, ಶುಕ್ಲ ಪಕ್ಷದ ಬೆಳದಿಂಗಳಿನಲ್ಲಿ ಪ್ರಯಾಣಮಾಡುತಿದ್ದಳು.

೫೬

ರತಿದೇವಿಯಂಥ ಪತ್ನಿ ತನಗಿದ್ದರೂ ಸಹ ರಾಘು ಸರೋ ಜಳ ಮನೆಗೆ ಹೋಗುವುದನ್ನು ಮಾತ್ರ ಬಿಡಲಿಲ್ಲ. “ಏನ್ರೀ, ಕೊನೆಗೂ ನನ್ನನ್ನು ಮರೆಯದೆ ಇದ್ದೀರಲ್ಲಾ, ಅಷ್ಟೆಸಾಕು. ಲಗ್ನವೆಲ್ಲ ಬಹಳ ಜಬರ್ದಸ್ತಾಗಿ ನಡೆಯಿತೂಂತ ಕಾಣುತ್ತೆ” ಎಂದವಳು ನಗುತ್ತ ಅವನನ್ನು ಸ್ವಾಗತಿಸಿದಳು. ಆದರೆ ರಾಘು ಈಗ ಸರೋಜಳ ಮನೆಯನ್ನು ನಿರಂತರ ವಾಸಸ್ಥಾನವನ್ನಾಗಿ ಮಾಡಿಕೊಳ್ಳಲಿಲ್ಲ. ಕೆಲಸದ ಬಿಡುವು ದೊರೆತಾಗ ಮನೆಗೇ ಬಂದು ಬಿಡುತಿದ್ದನು. ಅನೇಕ ರಾತ್ರಿ ಅವನು ತನ್ನ ಮನ

ಸ್ವಾಕ್ಷಿಯನ್ನೂ ಮೀರಿ, ಸರೋಜಳ ಮನೆಯಲ್ಲಿ ತಂಗುತಿದ್ದುದೂ ಉಂಟು. ಆಗ ಅವನ ಎದೆ ಥಬಥಬ ಎಂದು ಹೊಡೆದುಕೊಳ್ಳು ತಲಿತ್ತು. ಲಕ್ಷ್ಮಿಗೆ ಪೂರಾ ಮೋಸ ಮಾಡುವ ಸಾಹಸ ಅವನು ಮಾಡಲಿಲ್ಲ. ಅವಳ ನಿಷ್ಕಳಂಕವಾದ ಮುಖ, ನಿರ್ಮಲವಾದ ಹೃದಯ, ಅವನನ್ನು ಸೆರೆಹಿಡಿದಿತ್ತು. ಹೀಗೆಂದ ಮಾತ್ರಕ್ಕೆ ಸರೋಜಳನ್ನು ಒಡನೆಯೇ ತೊರೆಯುವ ಧೈರ್ಯವನ್ನೂ, ಅವನು ಮಾಡಲು ಸಾಧ್ಯವಾಗಲಿಲ್ಲ. ಬಹಳ ದಿನಗಳ ಸಂಬಂಧ ಅದು. ರಾತ್ರಿ ರಾಘು ಮನೆಗೆ ಬರಲಿಲ್ಲವೆಂದರೆ ಗುಂಡೂರಾಯರ ಮುಖ ಸಿಡಿದು ಉರಿಯುತ್ತಿತ್ತು. ಅದದ್ನು ಹೊರಗೆ ತೋರ್ಪಡಿಸಿ ಕೊಳ್ಳದೆ, ಒಳಗೊಳಗೇ ಗುಡುಗುತಿದ್ದರು. ವಿವಾಹಕ್ಕೆ ಮುನ್ನ ಮಗನನ್ನು " ಹಾಳುನು-ಶನಿಮು-" ಎನ್ನುತಿದ್ದರು, ಬೈಯು ತಿದ್ದರು. ಈಗ ಸೊಸೆ ಮನೆಗೆ ಬಂದಮೇಲೆ ಹಾಗೆಲ್ಲ ಅನ್ನು ವುದಕ್ಕೆ ಅವರಿಗೇನು ತಿಳಿಯದೆ? ಹಾಗೂ ರಾಘು ಮನೆಗೆ ಬಂದಾಗ ಸೊಸೆಯನ್ನು ತಪ್ಪಿಸಿ, ಕೆಲವು ವೇಳೆ ಮಾತುಗಳನ್ನು ಉಛಾಯಿಸುತ್ತಿದ್ದರು, ಜೋಕೆ ಎನ್ನುತ್ತಿದ್ದರು. ಅನೇಕ ರಾತ್ರಿ ಪತಿ ಮಲಗಲು ಬಾರದಿರುವುದಕ್ಕೆ ಏನೋ ಕೆಲಸಕಾರ್ಯಗಳು ಜಾಸ್ತಿಯಿರಬಹುದೆಂದು ಲಕ್ಷ್ಮಿ ತಿಳಿದುಕೊಂಡಿದ್ದಳು. ಆದರೆ ಪತಿಯಿಲ್ಲದ ರಾತ್ರಿ ಅವಳಿಗೆ ನೀರಸವಾಗಿಯೇ ಕಳೆದುಹೋಗು ತ್ತಿತ್ತು. ಬಹಳಹೊತ್ತಿನವರೆಗೂ ಆ ಕೋಮಲೆಗೆ ನಿದ್ರೆ ಬಾರದೆ, ಹಾಸಿಗೆಯ ಮೇಲೆ ಹೊರಳಾಡುತ್ತ, ಅನಂತರ ಪತಿಯ ದಿಂಬನ್ನು ಆಲಿಂಗಿಸಿಕೊಂಡು, ನಿದ್ದೆ ಹೋಗುತ್ತಿದ್ದಳು. ಅನೇಕ ರಾತ್ರಿ ಬಹು ವೇಳೆ ಕಳೆದು ರಾಘು ಮನೆಗೆ ಬರುತ್ತಿದ್ದುದೂ ಉಂಟು. ಪತಿಯ ಬರುವಿಕೆಗಾಗಿ ಇದಿರುನೋಡುತ್ತ, ಈದಿನ ಬರುವುದಿಲ್ಲ ವೆಂದು ದೃಢ ಮಾಡಿ, ನಿರಾಸೆಯಿಂದ ಮಲಗಿ, ತುಸು ನಿದ್ದೆ ಹೋ ಗುತ್ತಿದ್ದಾಗ, ರಾಘು ಬಂದು ಕದತಟ್ಟುವುದೂ ಉಂಟು. ಆಗವಳಿಗೆ ಉಂಟಾಗುವ ಆನಂದ ಹೇಳತೀರದು. ಸಡಗರದಿಂದೆದ್ದು

ಹೋಗಿ ಬಾಗಿಲು ತೆಗೆಯುವಳು. ಉತ್ಸಾಹದ ಅಲೆ ಅವಳ ಮುಖದಲ್ಲಿ ಹೊಯ್ದಾಡುತ್ತಿತ್ತು. ಪ್ಪಾಪ! ಎಷ್ಟೊಂದು ಕೆಲಸ ಕಾರ್ಯವಿದ್ದಿತೋ! ಇಂಥ ರಾತ್ರಿಯಲ್ಲಿ ನಡೆದು ಬರುತ್ತಾರೆಂದು ಪತಿಗಾಗಿ ಮರುಕಪಡುವಳು. ಆದರೆ ಕ್ಷಣಕಾಲದಲ್ಲಿ ಅವಳು-ಇವರು ಇಷ್ಟು ಶ್ರೀಮಂತಸ್ಥಿತಿಯಲ್ಲೇ ಇದ್ದರೂ, ಏತಕ್ಕೋಸ್ಕರ ಇಷ್ಟು ಕಷ್ಟಪಡಬೇಕು? ಎಂದಂದುಕೊಳ್ಳುವಳು. ನಗುನಗುತ್ತಲೇ ಅವಳು ಬಾಗಿಲು ತೆರೆದು ಪತಿಯನ್ನು ಆದರದಿಂದ ಮಾತನಾಡಿಸಿದಾಗ, ರಾಘು ಏನೋ ಒಂದು ಬಗೆಯಾಗಿಕಾಣುತ್ತ ಹಾಸಿಗೆಯಲ್ಲಿ ಒರಗುತ್ತಿದ್ದನು. ಬಾಗಿಲು ಹಚ್ಚಿ ಅಗಳಿ ಹಾಕಿದ ಮೇಲೆ ಲಕ್ಷ್ಮಿ ಪತಿಯ ಕೂಡ ಸೇರಿಕೊಂಡು ಮಲಗಿದಾಗ, ಎಂಥದೋ ಒಂದು ವಿಧದ ವಾಸನೆ ಅವನ ಶರೀರದಿಂದ ಹೊರಡುತಿತ್ತು. ಅದೇನೆಂದು ಅದರ ರಹಸ್ಯವನ್ನು, ಬಹಳದಿನಗಳವರೆಗೆ ತಿಳಿದುಕೊಳ್ಳಲು ಲಕ್ಷ್ಮಿಯಿಂದ ಸಾಧ್ಯವಾಗಲಿಲ್ಲ. ಉನ್ಮತ್ತನಂತೆ ಅವನು ಅವಳನ್ನು ಆಲಂಗಿಸಿ ಚುಂಬಿಸಿದಾಗ, ಆ ವಾಸನೆಯನ್ನು ಅವಳು ಕಷ್ಟಪಟ್ಟು ಸಹಿಸಿಕೊಳ್ಳುತಿದ್ದಳು.

## ೫೭

ಈಗ ಬೇಸಿಗೆ ರಜ. ವರ್ಷಪೂರಾ ಶಾಲೆಯಲ್ಲಿ ಅಡಗಿದ್ದು, ಈಗತಾನೆ ವಿದ್ಯಾರ್ಥಿಗಳು ಪರೀಕ್ಷೆಯನ್ನು ಮುಗಿಸಿ ಹೊರ ಬಂದಿದ್ದಾರೆ. ಫಲಿತಾಂಶ ತಿಳಿಯಲು ಇನ್ನೂ ಸ್ವಲ್ಪ ದಿನಗಳು ಬೇಕು. ಅನೇಕ ವಿದ್ಯಾರ್ಥಿಗಳು ನಗರಗಳಿಂದ ತಮ್ಮ ತಮ್ಮ ಗ್ರಾಮಗಳಿಗೆ ಹಿಂದಿರುಗುತಿದ್ದಾರೆ. ಶಿವಮೊಗ್ಗೆಯಲ್ಲಿ ವ್ಯಾಸಂಗ ಮಾಡುತಿದ್ದ ಕುಟ್ಟಪ್ಪನ ತಮ್ಮನ ಮಗ ಗುರುಪಾದಸ್ವಾಮಿಗೂ ಈಗ ರಜೆ ದೊರಕಿದೆ. ಆದುದರಿಂದ ಈಗವನನ್ನು ಸ್ವೀಕಾರ ಪುತ್ರನನ್ನಾಗಿ ತೆಗೆದುಕೊಳ್ಳಲು ಕುಟ್ಟಪ್ಪ ನಿರ್ಧರಿಸಿದನು. ಒಂದೆ

ರಡು ತಡವೆ ಶಿವಮೊಗ್ಗೆಗೂ ಹೋಗಿ ಬಂದನು. ಕಾರ್ಯ ಕಲಾಪಗಳೆಲ್ಲ ತ್ವರಿತವಾಗಿ ನಡೆಯಲಾರಂಭಿಸಿದುವು. ಪಾಣ್ಯಕ್ಕೀಗ ಅವನು ಅವಶ್ಯ ಬರಬೇಕೆಂದು ಎರಡು ಪತ್ರಗಳನ್ನು ಬರೆದನು. ಶಾಮರಾಯರ ಮನೆಯವರು ಮೈಸೂರಿಗೆ ಹೊರಡಲನುವಾದರು. ಅವರಿಗೆ ಕುಟ್ಟಪ್ಪನ ಕೋರಿಕೆಯನ್ನು ನಿರಾಕರಿಸಲು ಸಾಧ್ಯವಾಗಿರಲಿಲ್ಲ. ಲಕ್ಷ್ಮಿಗಂತೂ ಈಗ ಬಹಳ ಆನಂದ. ಊರಿಂದ ತನ್ನ ತಾಯ್ತಂದೆಯರು ಬರುತ್ತಾರೆಂಬ ಸುದ್ದಿ ತಿಳಿದ ಮೇಲೆ, ಯಾವ ಹೆಣ್ಣಿಗೆ ತಾನೆ ಸಂತಸವಾಗಲಿಕ್ಕಿಲ್ಲ! ಬೀಗರನ್ನು ಸ್ವಾಗತಿಸಿ ಕರೆದುಕೊಂಡು ಬರಲು ಸ್ವತಃ ಗುಂಡೂರಾಯರೇ ಸ್ಟೇಷನಿಗೆ ಹೋಗಿದ್ದರು. ಊರಿನಲ್ಲಿದ್ದುದಕ್ಕಿಂತ ಈಗ ಅಂಗಾಂಗಗಳೆಲ್ಲ ಇನ್ನೂ ಸ್ವಲ್ಪ ಬಲಿತು, ಲಕ್ಷ್ಮಿ ಸೌಂದರ್ಯ ದೇವತೆಯಂತಿದ್ದುದನ್ನು ಕಂಡು, ಜಾನಕಮ್ಮನವರು ಹಿಗ್ಗಿಹೋದರು. ರಾಮು ವರಾಂಡಾದಲ್ಲಿ ಕುಳಿತು ಆಯಾಸ ಪರಿಹರಿಸಿಕೊಳ್ಳುತಿದ್ದನು. ಮಿಕ್ಕೆಲ್ಲರೂ ಹಾಲಿನಲ್ಲಿ ಕುಳಿತು ಹರಟೆ ಹೊಡೆಯುತಿದ್ದರು. ಕುಟ್ಟಪ್ಪ ಈಗಿಲ್ಲಿಗೆ ಬಂದನು. "ಬಂದಿರುವುದು ಈಗ ನಮ್ಮ ಮನೆಗೆ, ಏಳಿ, ಏಳಿ, ಹೊತ್ತಾಯಿತು" ಎಂದು ಎಲ್ಲರನ್ನೂ ಅವನು ಎಬ್ಬಿಸಿದನು. ಕುಟ್ಟಪ್ಪ ಕಚ್ಚೆ ಹಾಕಿರುವುದನ್ನು ನೋಡಿ ರಾಮುವಿಗೆ ನಗು ಬಂದಿತು. ಎಲ್ಲರೂ ಈಗ ಕುಟ್ಟಪ್ಪನ ಮನೆಗೆ ನಡೆದರು. ಅಲ್ಲೂ ಲಕ್ಷ್ಮಿಯದೇ ಓಡಾಟ ಜಾಸ್ತಿ. ಕುಟ್ಟಪ್ಪನೇ ಹೇಳುತಿದ್ದನು "ಲಕ್ಷ್ಮಿಯನ್ನು ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗಳ ಹಾಗೆ ನಾನು ಭಾವಿಸಿಕೊಂಡಿದ್ದೇನೆ" ಎಂದು. ಶಾಸ್ತ್ರೋಕ್ತವಾಗಿ ಈಗ ಗುರುಪಾದಸ್ವಾಮಿಯನ್ನು ಕುಟ್ಟಪ್ಪ ಸ್ವೀಕಾರ ಪುತ್ರನನ್ನಾಗಿ ಅಂಗೀಕರಿಸಿದನು. ಊಟ ಉಪಚಾರಗಳೆಲ್ಲ ಮುಗಿದುವು. ಶಾಮರಾಯರ ಮನೆಯವರು ಈಗ ಎಂಟು ದಿನ ಮೈಸೂರಿನಲ್ಲಿ ತಂಗಿದರು. ಲಕ್ಷ್ಮಿ ತಾಯಿಯನ್ನು ಒಂದೊಂದು ದಿನ ಒಂದೊಂದು ಸ್ಥಳಕ್ಕೆ ಕರೆದುಕೊಂಡು ಹೋಗಿ

ತೋರಿಸಿಕೊಂಡು ಬಂದಳು. ಒತ್ತಟ್ಟಿಗೆಲ್ಲರೂ ಒಂದು ದಿನ ಸಿನಿಮಾ ನೋಡಲು ಹೋಗಿದ್ದರು. ರಾಘು ತನ್ನ ಅತ್ತೆ-ಮಾವಂದಿರುಗಳು ಊರಿಗೆ ಹಿಂದಿರುಗುವವರೆಗೆ, ಬೇಗನೇ ಮನೆಗೆ ಬಂದು ಸೇರುತಿದ್ದನು. ಶಾಮರಾಯರು ಈಗ ಪಾಳ್ಯಕ್ಕೆ ಹೊರಡಲು ಸಿದ್ಧರಾದರು. ಇನ್ನೂ ನಾಲ್ಕು ದಿನ ಅವರು ಇದ್ದು ಹೋಗಬೇಕೆಂದು ಲಕ್ಷ್ಮಿಗೆ ಆಸೆ. ಯಾವ ಹೆಣ್ಣಿಗೆ ತಾನೆ ತನ್ನ ತಾಯಿ ತಂದೆಯರೂ, ಒಡಹುಟ್ಟಿದ ಅಣ್ಣನೂ, ತನ್ನನ್ನು ಆಗಲುವಗೆಂವ ಮೇಲೆ, ಯಾವುದೋ ಒಂದು ವಿಧವಾದ ವ್ಯಸನ ಆವರಿಸಲಿಕ್ಕಿಲ್ಲ-ಆದರೆ ಎಷ್ಟೊಂದು ದಿನ ಇಲ್ಲಿರುವುದು? ಮೇಲಾಗಿ ಮನೆಯನ್ನು ಆಳುಕಾಳಿನ ವಶ ಒಪ್ಪಿಸಿ ಶಾಮರಾಯರು ಇಲ್ಲಿಗೆ ಬಂದಿರುವುದರಿಂದ, ಅಲ್ಲಿನ ಪರಿಸ್ಥಿತಿ ಹೇಗಿದೆಯೊ? ಒಡನೆ ಹೊರಡಬೇಕೆಂಬ ಹಂಬಲ ಅವರಿಗೂ ಇರುತ್ತದಲ್ಲವೇ? ಆದುದರಿಂದ ಅವರುಗಳು ಲಕ್ಷ್ಮಿಯ ಕೋರಿಕೆಯನ್ನು ನಿರಾಕರಿಸಿದರು. ಲಕ್ಷ್ಮಿ ಮಾವನ ಕೂಡ, ಪತಿಯ ಕೂಡ, ಸ್ಟೇಷನ್ ವರೆಗೂ ಬಂದಿದ್ದು ಅಗಲಲಾರದ ಮನಸ್ಸಿನಿಂದ, ತನ್ನ ತಾಯ್ತಂದೆಯರನ್ನೂ, ಅಣ್ಣನನ್ನೂ, ಬೀಳ್ಕೊಟ್ಟು ಮನೆಗೆ ಹಿಂತಿರುಗಿದಳು.

## ೫೮

ಕೋದಂಡ ಹೊಂಚು ಹಾಕುತಿದ್ದುದೇನೂ ಅಪ್ರಯೋಜನವಾಗಲಿಲ್ಲ. ರಾಘು ಕಂಪೆನಿಗೆ ಮೋಸಮಾಡುವುದು ದಿಟವೆಂದು ಅವನೀಗ ನಿರ್ಧರಿಸಿದನು. ಅನೇಕ ವೇಳೆ ಲೆಕ್ಕ ಪತ್ರಗಳಿಗೂ, ಹಣಕಾಸಿಗೂ, ಸಂಬಂಧವೇ ಇರುತ್ತಿರಲಿಲ್ಲ. ತಂದೆಯ ಕೂಡ ಈಗವನು ರಾಘುವನ್ನು ತೆಗೆದುಹಾಕಬೇಕೆಂದು ನಿರ್ಬಂಧಿಸಿದನು. ಮೊದಲು ಶೆಟ್ಟರು ಸ್ವಲ್ಪ ಆಲೋಚಿಸತೊಡಗಿದರು; ಆಮೇಲೆ ಸರಿ ಎಂದರು. ಈ ಸಂಧಾನಗಳೆಲ್ಲ ಹೇಗೋ ರಾಘುವಿಗೂ

ತಿಳಿಯಿತು. ಅವರಾಗಿ ಹೋಗೆಂದು ಹೇಳುವುದಕ್ಕಿಂತ, ತಾನಾಗಿಯೇ ಹೊರ ಬರುವುದು ಮರ್ಯಾದೆಯೆಂದೆಣಿಸಿ, ತಾನು ಕೆಲಸಕ್ಕೆ ರಾಜಿನಾಮೆಯಿತ್ತಿರುವುದಾಗಿ ತಿಳಿಸಿ, ತನ್ನ ಲೆಕ್ಕಪತ್ರಗಳನ್ನು ತೀರಿಸಿಕೊಂಡು ಹೊರಬಂದನು. ಮಗ ಶೆಟ್ಟರನ್ನು ಬಿಟ್ಟು ಬಂದುದು ಗುಂಡೂರಾಯರಿಗೆ ಸ್ವಲ್ಪ ಅಸಮಾಧಾನವೇ ; ಸಂಪಾದನೆಗಲ್ಲದಿದ್ದರೂ ಅವರಂಥ ಉದಾರಿಗಳ ಸಂಗ ಮೇಲ್ಮಟ್ಟದ್ದೆಂದು ಅವರ ಅಭಿಪ್ರಾಯ. ಈಗ ರಾಘು ತಾನೇ ಹೊಸ ಊದುಬತ್ತಿ ಕಂಪೆನಿಯೊಂದನ್ನು ಸ್ಥಾಪಿಸಲು ಪ್ರಯತ್ನಿಸಿದನು. ಆರೇಳು ವರ್ಷಗಳ ಅನುಭವ ಅವನಿಗಿದ್ದುದರಿಂದ, ಕೆಲಸದ ಮರ್ಮವನ್ನೆಲ್ಲ ಅವನು ತಿಳಿದುಕೊಂಡಿದ್ದನು. ಮೊದಲು ಈ ಸುದ್ದಿಯನ್ನು ಅವನು ತಾಯಿಗೆ ತಿಳಿಸಿದನು. ಅನಂತರ ತಂದೆಯ ಕಿವಿಗೂ ಸುದ್ದಿ ಮುಟ್ಟಿತು. ಅವರಿಗೆ ಅರ್ಧಮನಸ್ಸಾದರೂ, ಕೊನೆಗೆ ಒಪ್ಪಿದರು. ಮನೆ ಬಾಡಿಗೆಗೆ ತೆಗೆದುಕೊಳ್ಳುವ ಹಾಗಿರಲಿಲ್ಲ. ಶಿವರಾಂಪೇಟೆಯಲ್ಲಿ ಇವರದೇ ಸ್ವಂತ ಮನೆ ಇದ್ದಿತು. ರಾಘು ತುಂಬ ಹರ್ಷಿತನಾದನು. ತಾನು ಹೊಸದಾಗಿ ಸ್ಥಾಪಿಸಲಿರುವ ಕಂಪೆನಿಯಲ್ಲಿ ತನ್ನ ಮಿತ್ರರುಗಳಿಗೆಲ್ಲ ಕೆಲಸಕ್ಕೆ ಎಡೆ ಕೊಟ್ಟನು. ಸರೋಜಳ ಮನೆಗೆ ಹೋಗಿ ಅವಳಿಗೂ ಈ ಸಂತೋಷ ಸಮಾಚಾರ ತಿಳಿಸಿದನು. ಆದರೆ ಅವಳನ್ನು ತನ್ನ ಕಂಪೆನಿಗೆ ಸೇರಿಸಿಕೊಳ್ಳುವ ಧೈರ್ಯ ಮಾಡಲಾಗಲಿಲ್ಲ. ಏಕೆಂದರೆ ಅದರಿಂದ ಎಷ್ಟೋಂದು ಅನಾನುಕೂಲತೆಗಳಾಗುತ್ತವೆಂದು ಅವನು ತಿಳಿದಿದ್ದನು. ತಂದೆಯ ಪೂರ್ಣ ಕೋಪಕ್ಕೆ ಆಹುತಿಯಾಗಲು ಅವನು ಇಷ್ಟಪಡಲಿಲ್ಲ. ಆದುದರಿಂದ ಅವನು ಸರೋಜಳಿಗೆ ಬುದ್ಧಿವಾದ ಹೇಳಿದನು. ಅವಳನ್ನು ಇನ್ನೂ ಹೆಚ್ಚು ಗಮನಿಸಿಕೊಳ್ಳುವುದಾಗಿ ಅವನು ಅವಳಿಗೆ ವಾಗ್ದಾನ ಕೊಟ್ಟನು ಮೂಲಧನ ಮೂರು ಸಹಸ್ರ ರೂಪಾಯಿಗಳನ್ನು ಹಾಕುವುದೆಂದು ತೀರ್ಮಾನಿಸಲಾಗಿದ್ದಿತು. ಗುಂಡೂರಾಯರ ಬಳಿ ಎರಡು

ಸಹಸ್ರ ರೂಪಾಯಿಗಳೇ ಇದ್ದಿತು. ಉಳಿಕೆಗಾಗಿ ಭತ್ತ ಮಾರಿ, ಅದು ಮಾರಿ ಇದು ಮಾರಿ, ಹೇಗೇಗೋ ಸರಿಮಾಡಿಕೊಟ್ಟರು. ಬಾಡಿಗೆಗೆ ಕೊಟ್ಟಿದ್ದ ಮನೆಯನ್ನು ಖಾಲಿಮಾಡಬೇಕೆಂದು ಮೂರು ತಿಂಗಳ ಮುಂಚಿತವಾಗಿಯೇ ಅವರು ನೋಟೀಸು ಕೊಟ್ಟಿದ್ದರು. ಈಗ ಮನೆ ಖಾಲಿಯಾಯಿತು. "ಸುಗಂಧ ಪರಿಮಳ ದ್ರವ್ಯಗಳ ಕಂಪೆನಿ. ತಯಾರಿಕೆ:—ಜಿ. ರಾಘವೇಂದ್ರ" ಎಂದವನು ದೊಡ್ಡದೊಂದು ಬೋರ್ಡನ್ನು ಹಾಕಿಸಿದನು. ಗುಂಡೂ ರಾಯರೂ ಈಗ ಮನೆಯಲ್ಲಿರುತ್ತಿರಲಿಲ್ಲ. ಕೆಲಸ ಕಾರ್ಯಗಳು ತಮಗೆ ತಿಳಿಯದಿದ್ದರೂ ಕಂಪೆನಿಯಲ್ಲಿ ಅವರು ಸುತ್ತಾಡಿ ಕೊಂಡಿರುತಿದ್ದರು. ರಾಘು ಪಾಳ್ಯಕ್ಕೆ, ಮಾವನಮನೆಗೆ, ತಾನು ಹೊಸದಾಗಿ ಊದುಬತ್ತಿ ಕಂಪೆನಿಯೊಂದನ್ನು ಸ್ಥಾಪಿಸಿರುವು ದಾಗಿ ಪತ್ರ ಬರೆದನು. "ಸುಗಮವಾಗಿ ನಡೆಯಲೆಂದು ನಾವು ಆಶೀರ್ವದಿಸುತ್ತೇವೆ" ಎಂದು ಅಲ್ಲಿಂದ ಪ್ರತ್ಯುತ್ತರ ಬಂದಿತು. ಹೀಗೆ ರಾಘುವಿನ ಜೀವನದಲ್ಲಿ ಈಗ ಎರಡನೇ ಘಟ್ಟ ಪ್ರಾರಂಭ ವಾಯಿತು.

## ೫೯

ರಾಯಲ್ ಹಾಲಿಗೆ ಈಗ ರಾಘು ಪದೇಪದೇ ಹೋಗು ತಿದ್ದನು. ಮೊದಲಿನಂತೆ ಈಗೇನೂ ಅವನಿಗೆ ಹಣಕಾಸಿಗೆ ಅಡ ಚಣೆಯಿರಲಿಲ್ಲ. ಏಕೆಂದರೆ ಅವನೀಗ ಕಂಪೆನಿಯೊಂದರ ಮಾಲೀಕನಾಗಿದ್ದನು. ಅದರಲ್ಲಿ ಅಪರಿಮಿತವಾದ ಲಾಭವು ಅವನಿಗೆ ದೊರಕುತಿದ್ದಿತು. ಮಿತ್ರರುಗಳನ್ನೂ ಸೇರಿಸಿಕೊಂಡು ಅವನೀಗ ಮೇಲ್ಮಟ್ಟದ ಪಾನಕಗಳನ್ನೆ ಕುಡಿಯಲಾರಂಭಿಸಿದನು— ಇಂಥ ವ್ಯವಹಾರಗಳಲ್ಲಿ, ಹಣಕಾಸು ಇದ್ದು ಧಾರಾಳ ಮಾಡು ವವರ ಬಳಿಯಲ್ಲಿ, ಸ್ನೇಹಿತರು ಕೂಡುವುದು ಬಹಳ ಜಾಸ್ತಿ.

ರಾಘುವಿಗೆ ಬಳಗವೂ ಹೆಚ್ಚಾಯಿತು. ಸುರಾಪಾನ ಮಾಡಿದವನಿಗೆ ಅಧಿಕ ಕಾಮೋದ್ರೇಕ ಉಂಟಾಗುವುದು ಸಹಜ. ಅವನ ಅನೇಕ ಮಿತ್ರರು ಕೆಲವು ವೇಳೆ ಕೊಪ್ಪಲಿನಲ್ಲಿರುವ ಕೆಲವು ದಾಸಿಯರ ಮನೆಗೆ ಅವನನ್ನು ಎಳೆದೊಯ್ಯುವುದೂ ಉಂಟು. ಕೆಲವು ವೇಳೆ ಅವನು ಸರೋಜಳ ಮನೆಗೆ ಹೋಗುವುದೂ ಉಂಟು. ಆದರೆ ಸುರಾಪಾನ ಮಾಡಿದವನು ಮತ್ತಿನಲ್ಲಿ, ತನ್ನ ಕಾಮ ಕೇಳಿಕೆಗಳನ್ನು ತೀರಿಸಿಕೊಳ್ಳಲು, ಮಡದಿಗಿಂತ ಹೆಚ್ಚಾಗಿ ದಾಸಿಯರನ್ನೇ ಅಪೇಕ್ಷಿಸುತ್ತಾನೆ. ಅಂಥ ಸಂದರ್ಭಗಳಲ್ಲಿ ಅವರು ತೃಪ್ತಿಪಡಿಸುವಷ್ಟು ಮಡದಿಯಿಂದ ಆಗಲಾರದು. ಇದು ಲೋಕಸ್ಥಿತಿ. ತಾನು ಎಲ್ಲಿಗೆ ಹೋದರೂ ಮತ್ತು ನಿಂತಮೇಲೆ, ಒಂದು ಸ್ತಿಮಿತಕ್ಕೆ ಬಂದ ಮೇಲೆ, ರಾಘು ಎಚ್ಚತ್ತುಕೊಳ್ಳುತಿದ್ದನು. ಲಕ್ಷ್ಮಿಯ ಚಿತ್ರ ಅವನ ಕಣ್ಣಮುಂದೆ ಕಟ್ಟಿನಿಂತಂತಾಗುತಿತ್ತು. ಈವರೆಗೆ ಅವನು ಎಷ್ಟೋ ಹೆಂಗಸರ ಸಂಪರ್ಕ ಮಾಡಿದ್ದನು. ಆದರೆ ಅವರಲ್ಲಾರೂ ಲಕ್ಷ್ಮಿಯಂತೆ ಕಳೆಯುಳ್ಳವರಾಗಿ, ನಿರ್ಮಲ ಚಿತ್ತರಾಗಿ ಇದ್ದಿರಲಿಲ್ಲ. ಅವಳ ಪವಿತ್ರವಾದ ಹೃದಯ, ಅವನ ಎದೆ ಡಬಗುಟ್ಟುವಂತೆ ಮಾಡಿದ್ದಿತು. ತನ್ನ ಗುಟ್ಟನ್ನು ಯಾವ ವಿಧದಿಂದಲೂ ಪತ್ನಿ ತಿಳಿದುಕೊಳ್ಳಕೂಡದೆಂದೂ ಹಾಗೇನಾದರೂ ಅವಳು ತಿಳಿದುಕೊಂಡಲ್ಲಿ, ಅವಳ ಮನಸ್ಸು ನೀರಾಗಿ ಹರಿಯುವುದೆಂದೂ, ಅವನು ಬಹಳ ಜಾಗರೂಕತೆಯಿಂದಲೇ ವರ್ತಿಸುತಿದ್ದನು. ಯಾವುದೇ ದುಶ್ಚಟಗಳು ಮಾನವನಿಗೆ ತಗಲಿದಲ್ಲಿ, ಅವನನ್ನು ಅವು ಬೇಗನೆ ಬಿಡುವುದಿಲ್ಲ. ಬೇರೂರಿ ದೊಡ್ಡ ಮರವಾದರಂತೂ ತೀರಿತು. ಕಷ್ಟವೆಂಬ ಕೊಡಲಿ ತಾಗಿ ಅದರ ಬುಡಮಟ್ಟ ಕತ್ತರಿಸಿದರೇನೇ ಅದು ಸರಿಹೋಗುತ್ತದೆ. ರಾಘು ಬುದ್ಧಿಶಾಲಿ; ವ್ಯಾಪಾರದಲ್ಲಿ ನಿಪುಣ. ಆದರೆ ವ್ಯಭಿಚಾರ, ಮಧುಪಾನ ಮುಂತಾದ ಹಂಬಲಗಳೆಲ್ಲ ಅವನ ಸುತ್ತಲೂ ಹಬ್ಬಿ, ಅವನನ್ನು ಕಾಣದ ಹಾಗೆ ಮಾಡಿದ್ದುವು. ಲಕ್ಷ್ಮಿ ಮನೆಗೆ

ಸಹಸ್ರ ರೂಪಾಯಿಗಳೇ ಇದ್ದಿತು. ಉಳಿಕೆಗಾಗಿ ಭತ್ತ ಮಾರಿ, ಅದು ಮಾರಿ ಇದು ಮಾರಿ, ಹೇಗೇಗೋ ಸರಿಮಾಡಿಕೊಟ್ಟರು. ಬಾಡಿಗೆಗೆ ಕೊಟ್ಟಿದ್ದ ಮನೆಯನ್ನು ಖಾಲಿಮಾಡಬೇಕೆಂದು ಮೂರು ತಿಂಗಳ ಮುಂಚಿತವಾಗಿಯೇ ಅವರು ನೋಟೀಸು ಕೊಟ್ಟಿದ್ದರು. ಈಗ ಮನೆ ಖಾಲಿಯಾಯಿತು. "ಸುಗಂಧ ಪರಿಮಳ ದ್ರವ್ಯಗಳ ಕಂಪೆನಿ. ತಯಾರಿಕೆ:—ಜಿ. ರಾಘವೇಂದ್ರ" ಎಂದವನು ದೊಡ್ಡದೊಂದು ಬೋರ್ಡನ್ನು ಹಾಕಿಸಿದನು. ಗುಂಡೂ ರಾಯರೂ ಈಗ ಮನೆಯಲ್ಲಿರುತ್ತಿರಲಿಲ್ಲ. ಕೆಲಸ ಕಾರ್ಯಗಳು ತಮಗೆ ತಿಳಿಯದಿದ್ದರೂ ಕಂಪೆನಿಯಲ್ಲಿ ಅವರು ಸುತ್ತಾಡಿ ಕೊಂಡಿರುತಿದ್ದರು. ರಾಘು ಪಾಳ್ಯಕ್ಕೆ, ಮಾವನಮನೆಗೆ, ತಾನು ಹೊಸದಾಗಿ ಊದುಬತ್ತಿ ಕಂಪೆನಿಯೊಂದನ್ನು ಸ್ಥಾಪಿಸಿರುವು ದಾಗಿ ಪತ್ರ ಬರೆದನು. "ಸುಗಮವಾಗಿ ನಡೆಯಲೆಂದು ನಾವು ಆಶೀರ್ವದಿಸುತ್ತೇವೆ" ಎಂದು ಅಲ್ಲಿಂದ ಪ್ರತ್ಯುತ್ತರ ಬಂದಿತು. ಹೀಗೆ ರಾಘುವಿನ ಜೀವನದಲ್ಲಿ ಈಗ ಎರಡನೇ ಘಟ್ಟ ಪ್ರಾರಂಭ ವಾಯಿತು.

೫೯

ರಾಯಲ್ ಹಾಲಿಗೆ ಈಗ ರಾಘು ಪದೇಪದೇ ಹೋಗು ತಿದ್ದನು. ಮೊದಲಿನಂತೆ ಈಗೇನೂ ಅವನಿಗೆ ಹಣಕಾಸಿಗೆ ಅಡ ಚಣೆಯಿರಲಿಲ್ಲ. ಏಕೆಂದರೆ ಅವನೀಗ ಕಂಪೆನಿಯೊಂದರ ಮಾಲೀಕನಾಗಿದ್ದನು. ಅದರಲ್ಲಿ ಅಪರಿಮಿತವಾದ ಲಾಭವು ಅವನಿಗೆ ದೊರಕುತಿದ್ದಿತು. ಮಿತ್ರರುಗಳನ್ನೂ ಸೇರಿಸಿಕೊಂಡು ಅವನೀಗ ಮೇಲ್ಮಟ್ಟದ ಪಾನಕಗಳನ್ನೆ ಕುಡಿಯಲಾರಂಭಿಸಿದನು— ಇಂಥ ವ್ಯವಹಾರಗಳಲ್ಲಿ, ಹಣಕಾಸು ಇದ್ದು ಧಾರಾಳ ಮಾಡು ವವರ ಬಳಿಯಲ್ಲಿ, ಸ್ನೇಹಿತರು ಕೂಡುವುದು ಬಹಳ ಜಾಸ್ತಿ.

ರಾಘುವಿಗೆ ಬಳಗವೂ ಹೆಚ್ಚಾಯಿತು. ಸುರಾಪಾನ ಮಾಡಿದವನಿಗೆ ಅಧಿಕ ಕಾಮೋದ್ರೇಕ ಉಂಟಾಗುವುದು ಸಹಜ. ಅವನ ಅನೇಕ ಮಿತ್ರರು ಕೆಲವು ವೇಳೆ ಕೊಪ್ಪಲಿನಲ್ಲಿರುವ ಕೆಲವು ದಾಸಿಯರ ಮನೆಗೆ ಅವನನ್ನು ಎಳೆದೊಯ್ಯುವುದೂ ಉಂಟು. ಕೆಲವು ವೇಳೆ ಅವನು ಸರೋಜಳ ಮನೆಗೆ ಹೋಗುವುದೂ ಉಂಟು. ಆದರೆ ಸುರಾಪಾನ ಮಾಡಿದವನು ಮತ್ತಿನಲ್ಲಿ, ತನ್ನ ಕಾಮ ಕೇಳಿಕೆಗಳನ್ನು ತೀರಿಸಿಕೊಳ್ಳಲು, ಮಡದಿಗಿಂತ ಹೆಚ್ಚಾಗಿ ದಾಸಿಯರನ್ನೇ ಅಪೇಕ್ಷಿಸುತ್ತಾನೆ. ಅಂಥ ಸಂದರ್ಭಗಳಲ್ಲಿ ಅವರು ತೃಪ್ತಿಪಡಿಸುವಷ್ಟು ಮಡದಿಯಿಂದ ಆಗಲಾರದು. ಇದು ಲೋಕ ಸ್ಥಿತಿ. ತಾನು ಎಲ್ಲಿಗೆ ಹೋದರೂ ಮತ್ತು ನಿಂತಮೇಲೆ, ಒಂದು ಸ್ತಿಮಿತಕ್ಕೆ ಬಂದ ಮೇಲೆ, ರಾಘು ಎಚ್ಚತ್ತುಕೊಳ್ಳುತಿದ್ದನು. ಲಕ್ಷ್ಮಿಯ ಚಿತ್ರ ಅವನ ಕಣ್ಣಮುಂದೆ ಕಟ್ಟನಿಂತಂತಾಗುತಿತ್ತು. ಈವರೆಗೆ ಅವನು ಎಷ್ಟೋ ಹೆಂಗಸರ ಸಂಪರ್ಕ ಮಾಡಿದ್ದನು. ಆದರೆ ಅವರಲ್ಲಾರೂ ಲಕ್ಷ್ಮಿಯಂತೆ ಕಳೆಯುಳ್ಳವರಾಗಿ, ನಿರ್ಮಲ ಚಿತ್ತರಾಗಿ ಇದ್ದಿರಲಿಲ್ಲ. ಅವಳ ಪವಿತ್ರವಾದ ಹೃದಯ, ಅವನ ಎದೆ ಡಬಗುಟ್ಟುವಂತೆ ಮಾಡಿದ್ದಿತು. ತನ್ನ ಗುಟ್ಟನ್ನು ಯಾವ ವಿಧದಿಂದಲೂ ಪತ್ನಿ ತಿಳಿದುಕೊಳ್ಳಕೂಡದೆಂದೂ ಹಾಗೇನಾದರೂ ಅವಳು ತಿಳಿದುಕೊಂಡಲ್ಲಿ, ಅವಳ ಮನಸ್ಸು ನೀರಾಗಿ ಹರಿಯುವುದೆಂದೂ, ಅವನು ಬಹಳ ಜಾಗರೂಕತೆಯಿಂದಲೇ ವರ್ತಿಸುತಿದ್ದನು. ಯಾವುದೇ ದುಶ್ಚಟಗಳು ಮಾನವನಿಗೆ ತಗಲಿದಲ್ಲಿ, ಅವನನ್ನು ಅವು ಬೇಗನೆ ಬಿಡುವುದಿಲ್ಲ. ಬೇರೂರಿ ದೊಡ್ಡ ಮರವಾದರಂತೂ ತೀರಿತು. ಕಷ್ಟವೆಂಬ ಕೊಡಲಿ ತಾಗಿ ಅದರ ಬುಡಮಟ್ಟ ಕತ್ತರಿಸಿದರೇನೇ ಅದು ಸರಿಹೋಗುತ್ತದೆ. ರಾಘು ಬುದ್ಧಿಶಾಲಿ; ವ್ಯಾಪಾರದಲ್ಲಿ ನಿಪುಣ. ಆದರೆ ವ್ಯಭಿಚಾರ, ಮಧುಪಾನ ಮುಂತಾದ ಹಂಬಲಗಳೆಲ್ಲ ಅವನ ಸುತ್ತಲೂ ಹಬ್ಬಿ, ಅವನನ್ನು ಕಾಣದ ಹಾಗೆ ಮಾಡಿದ್ದುವು. ಲಕ್ಷ್ಮಿ ಮನೆಗೆ

ಕಾಲಿಟ್ಟ ಮೇಲೆ ಹೆಚ್ಚಿಗೆ ಅವನು ಸರೋಜಳ ಮನೆಗೆ ಹೋಗ ದಿದ್ದರೂ, ಆಗಾಗ್ಯೆ ಹೋಗಿ ಬರುತಿದ್ದನು. ಆದರೆ ಈಗ ಮೊದಲಿ ಗಿಂತ ಒಂದು ವಿಶೇಷ ಜಾಸ್ತಿಯಾಯಿತು. ಅದೇನೆಂದರೆ ಅವನು ಶೆಟ್ಟರ ಕಂಪೆನಿ ಬಿಟ್ಟಮೇಲೆ, ಸರೋಜಳ ಮೈಮೇಲೆ, ಮೊದಲಿ ಗಿಂತ ಈಗ ಆಭರಣಗಳು ಜಾಸ್ತಿಯಾದುವು. ಬಹು ಬೆಲೆ ಬಾಳುವ ಸೀರೆಗಳನ್ನು ಅವಳೀಗ ಉಡಲಾರಂಭಿಸಿದಳು.

## ೬೦

ಹಲವು ತಿಂಗಳುಗಳು ಕಾಲವೆನ್ನುವ ರಸ್ತೆಯಲ್ಲಿ ಓಡೋಡು ತಿದ್ದುವು. ಸುಗಂಧ ಕಂಪೆನಿಗೆ ಗುರುವಾರ ರಜೆ ಬಿಡಲಾಗಿತ್ತು- ಒಂದು ಗುರುವಾರ. ಲಕ್ಷ್ಮಿ ಪತಿಯ ಕೂಡ ಸಿನಿಮಾ ನೋಡಲು ಅಪೇಕ್ಷೆಪಟ್ಟಳು. ರಾಘು ತನ್ನ ಮಡದಿಯನ್ನು ಕರೆದುಕೊಂಡು ಮೊದಲನೇ ಆಟಕ್ಕೆ ಹೊರಟನು. ಲಕ್ಷ್ಮಿ ಅತ್ತೆಯನ್ನೂ ಕೂಡ ಬರಬೇಕೆಂದು ನಿರ್ಬಂಧ ಮಾಡಿದಳು. ಆದರೆ ಶಾರದಮ್ಮ ನವರು ಕೊನೆಗೂ ಬರುವುದಿಲ್ಲವೆಂದೇ ಬಿಟ್ಟರು. ಗುಂಡೂ ರಾಯರು “ ನೀವೀದಿನ ಹೋಗಿದ್ದು ಬನ್ನಿರಮ್ಮಾ. ಮತ್ತೊಂದು ದಿನ ನಾವು ನೋಡುತ್ತೇವೆ ” ಎಂದು ಸೊಸೆಗೆ ಸಮಾಧಾನ ಹೇಳಿ ದರು. ತುಂಬು ಯೌವನದಲ್ಲಿರುವ ದಂಪತಿಗಳ ಕೂಡ, ಮುದುಕರುಗಳಾದ ತಾವು ಹೊರಟರೆ, ಅವರ ಸರಸ ಸಂಭಾಷಣೆ ಗಳಿಗೂ, ಮತ್ತಿತರ ವ್ಯವಹಾರಗಳಿಗೂ, ಅಡ್ಡಿಯಾಗುತ್ತದೆಂದು ಅನುಭವಸ್ಥರಾದ ಅವರಿಗೇನು ತಿಳಿಯದೆ? ಮಡದಿಯನ್ನು ಪಕ್ಕ ದಲ್ಲಿ ಕುಳ್ಳಿರಿಸಿಕೊಂಡು ರಾಘು ಆಟ ನೋಡುತಿದ್ದರೂ, ಸಮಯ ದಲ್ಲಿ ಅವನ ಕಣ್ಣುಗಳು ನಾಲ್ಕಾರು ಕಡೆಗಳಿಗೂ ಹಾಯು ತಿದ್ದುವು. ಅವನು ದೃಢ ಮನಸ್ಸಿಲ್ಲದ ಚಂಚಲ ಸ್ವಭಾವದವ ನಾಗಿದ್ದನು. ಆ ದಿನದ ಕಥೆ ಹೀಗಿತ್ತು: ಕಥಾನಾಯಕ ಒಬ್ಬ

ಕುಡುಕ, ಮನಸೋಯಿಚ್ಛೆ ಕುಡಿಯುತ್ತಾನೆ. ಬೂದು ಬಣ್ಣದ ಆ ನೀರನ್ನು ಒಳಕ್ಕೆ ಬಗ್ಗಿಸಿ ಮನೆಗೆ ಬಂದ ಮೇಲೆ ಅವನು ತೂರಾಡುತ್ತಾನೆ. ಅವನ ಮಡದಿ ಸಾಧ್ವಿ. ಪತಿಯ ಚರ್ಯೆ ಯನ್ನು ಕಂಡು ಅವನಿಗೇನೋ ವ್ಯಾಧಿ ಎಂದವಳು ಹಲುಬು ತ್ತಾಳೆ, ಬೆಚ್ಚುತ್ತಾಳೆ. ಕ್ರಮೇಣ ರಹಸ್ಯ ಬಯಲಾಗುತ್ತದೆ. ಕಥಾಸೂತ್ರ ಹೀಗೆ ಸಾಗುತ್ತಲಿದೆ. ಈ ದೃಶ್ಯ ನೋಡಿದಾಗ ಲಕ್ಷ್ಮಿಗೆ ಏನೋ ಒಂದು ವಿಧದ ಭೀತಿ ಮನಸ್ಸಿನಲ್ಲಿ ಭಯಂಕರ ವಾಗಿ ಉತ್ಪನ್ನವಾಯಿತು. ಹಾಗಾದರೆ ತನ್ನ ಪತಿ....? ತಾನು ಚಿಕ್ಕವಳಾಗಿ ಊರಿನಲ್ಲಿದ್ದಾಗ ನಡೆದೊಂದು ಸಂಭವ ಈಗವಳ ನೆನಪಿಗೆ ಬಂದಿತು. ಶಾಮರಾಯರ ಮನೆಯ ಹೊಲೆಯರ ಆಳೊಬ್ಬನು, ಅಳತೆಗೆ ಮೀರಿ ಕುಡಿದು, ಏನೇನೋ ಕೂಗಿಕೊಂಡು ಘಾಸಿಮಾಡುತಿದ್ದನು. ಅವನ ಕಣ್ಣುಗಳೆಲ್ಲ ಕೆಂಪಗಿದ್ದುವು. ಹುಚ್ಚನಂತೆ ಅವನು ವರ್ತಿಸುತಿದ್ದನು. ಯಾವ ಶ್ಯಾನು ಭೋಗ್ನೋ, ನನ್ಕೇಳವಾ' ಎಂದು ಕೂಗಾಡುತಿದ್ದನು. ಲಕ್ಷ್ಮಿಗೆ ಅವನನ್ನು ಕಂಡರೆ ಪ್ರೀತಿ. ಮನೆಗೆ ಅಚ್ಚುಮೆಚ್ಚಿನ ಆಳು ಅವನೇ ಆಗಿದ್ದನು. ಅವನು ಈಗೇಕೆ ಹೀಗೆ ಆಡುತ್ತಾನೆಂದು ಲಕ್ಷ್ಮಿ ಪಕ್ಕದವರಲ್ಲೊಬ್ಬನನ್ನು ಕೇಳಿದುದಕ್ಕೆ "ಅವ ಹೆಂಡ ಕುಡಿದವ್ನೆ ತಾಯಿ" ಎಂದವನು ಉತ್ತರವಿತ್ತನು. ಹೆಂಡ ಎಂದರೇನೆಂಬುದು ಪಾಪ ಅವಳಿಗೆ ಹೇಗೆ ತಿಳಿಯಬೇಕು? "ಹಾಗೆಂದರೇನೊ ಎಂದು ತಿರುಗಿ ಕೇಳಿದುದಕ್ಕೆ" ಅದು ಈಚಲ ಮರದ ರಸವೆಂದೂ, ಮಾದಕ ವಸ್ತುವೆಂದೂ, ಅದನ್ನು ಕುಡಿದಾಗ ಅವನಿಗೆ ಪ್ರಜ್ಞೆ ತಪ್ಪುವುದೆಂದೂ ಅಭ್ಯಾಸವಾದಲ್ಲಿ ಅದನ್ನು ಬಿಡಲು ಸಾಧ್ಯವೇಯಿ ಲ್ಲೆಂದೂ, ತಿಳಿಯ ಬಂದಿತು. ಮೇಲೂ ಅವನು ಹೇಳಿದನು :—
"ತಾಯಿ, ಬೇಕಾದ್ರೆ ನಾಳ್ಗೆ ಅವನ್ನೆ ಕೇಳ್ನೋಡಿ. ಅದ್ಯಾಕೊ ನೆನ್ನೆ ಹಾಗ್ಮಾಡ್ದೆ ಅಂತ. ಅವನೇ ಹೇಳ್ತವ್ನೆ" ಎಂದನು. ಮಾರ ನೆಯ ದಿನ ಲಕ್ಷ್ಮಿ ಅವನನ್ನು ಕಂಡು ಕೇಳುವುದಕ್ಕೆ ಹೆದರಿದಳು.

ಆದರೂ ಧೈರ್ಯಮಾಡಿ "ನಿನ್ನೆ ಏಕೆ ರಂಗ ಹಾಗೆ ಕೂಗಾಡು ತಿದ್ದೆ" ಎಂದು ಕೇಳಿಯೇ ಬಿಟ್ಟಳು. ಅವನಾಗ ಲಕ್ಷ್ಮಿಗೆ ಮುಖ ತೋರಿಸಿ ಮಾತನಾಡಲೂ ಸಾಧ್ಯವಿರಲಿಲ್ಲ. ಅವನು ತಲೆ ಬಗ್ಗಿಸಿಕೊಂಡೇ "ನೆನ್ನೆ ನಾನು ದೊಡ್ಡಯ್ನವ್ರ ಬಯ್ದುಬ್ಟಾ ತಾಯಿ" ಎಂದು ಕೇಳಿದನು. "ಹೌದು ಕಣೋ" ಎಂದು ಲಕ್ಷ್ಮಿ ನಗು ನಗುತ್ತಲೇ ಉತ್ತರವಿತ್ತಳು. ಅವನು ಮುಖ ತಿರುಗಿಸಿಕೊಂಡೇ ಮೌನವಾಗಿ ಕುಳಿತನು. ತನ್ನ ಒಡ ತಿಯ ಬಳಿ ಮಾತನಾಡಲು ಸಹ ಈಗ ನಾಚಿಕೆ. ಹಾಗೂ ಬಿಡದೆ ಲಕ್ಷ್ಮಿ "ಅದೇಕೊ ನಿನ್ನೆ ಹಾಗೆ ಮಾಡಿದೆ" ಎಂದು ಕೇಳಿದ್ದಕ್ಕೆ, ಅವನೆಲ್ಲವನ್ನೂ ವಿವರಿಸಿ ಹೇಳಿದ್ದನು. "ನಾ ಬಲ್ಲಾ ತಾಯಿ. ಎಷ್ಟೊ ಜನ ದೊಡ್ಡ ದೊಡ್ಡವರು ಕುಡಿತವ್ರೆ, ನಿಮ್ಮವ್ರು ಕುಡಿತವ್ರೆ" ಎಂದಾಗ, ಲಕ್ಷ್ಮಿ "ಥೂ" ಎಂದಳು. "ಹಾಗಲ್ಲ ಕಣ್ ತಾಯಿ, ಅವರೆಲ್ಲ ಹೆಂಡ ಕುಡ್ಯಲ್ಲ. ಬ್ರಾಂದಿ, ವ್ಹಿಸ್ಕಿ ಅಂತದೆ. ಅದ್ನೆಲ್ಲ ಸೀಮೇಲೆ ಮಾಡಿ ಮಾಡಿ ಕಳಿಸ್ತವ್ರೆ, ನಾ ಕಾಫಿ ತೋಟ್ದಲಿದ್ದಾಗ ನೋಡಿವ್ನಿ, ಅಂಥಾದ್ನೆ ಅವ್ರು ಕುಡ್ಯದು. ಬಡ್ಡಿಮಗ್ನಮಗಂದು ಅಭ್ಯಾಸ ಮಾಡ್ಬುಟ್ರೆ ಬುಡುದೇ ಯಿಲ್ಲ ಕಣ್ ತಾಯಿ. ದರಿದ್ರದ ಬಡ್ಡಿಮಂದು. ಮನೇನೇ ನಾಸ್ ಮಾಡ್ಬುಡ್ತದೆ"ಎಂದುತ್ತರವಿತ್ತಿದ್ದನು. ತನ್ನ ಪತಿ ಕುಡುಕನೇ?-ಲಕ್ಷ್ಮಿಗೆ ಕಣ್ಣು ಕಟ್ಟಿದಂತಾಯಿತು. ತಲೆಯೆಲ್ಲ ಸುತ್ತಲಾರಂಭಿ ಸಿತು. ಕಣ್ಣುಗಳಿಂದ ಅಶ್ರುವು ಪಳಪಳನೆ ಹೊರಗೆ ಬರಲಾ ರಂಭಿಸಿತು. ತನ್ನ ಎರಡೂ ಕೈಗಳನ್ನು ಆಸನದ ಒರಗುವ ಬೆಂಚಿನ ಹಿಂಭಾಗದಲ್ಲಿ ಇರಿಸಿ, ಮುಖ ಮರೆಮಾಚಿಕೊಂಡು ಅತ್ತಳು. ದುಃಖಾಗ್ನಿ ಅವಳ ಶರೀರದಾದ್ಯಂತ ಆವರಿಸಿ, ಅವಳನ್ನು ಬಹಳವಾಗಿ ಸುಡಲಾರಂಭಿಸಿತು. 'ದೇವರೇ' ಎಂದು ಮನಸ್ಸಿನಲ್ಲಂದುಕೊಂಡಳು. ರಾಘು ಕಕ್ಕಾಬಿಕ್ಕಿಯಾದನು. ಅವಳ ಎರಡೂ ಕೈಗಳನ್ನು ಮೇಲಕ್ಕೆತ್ತಿ ಮುಖಕ್ಕೆ ಮುಖಮಾಡಿ

ಕೊಂಡು, “ಏಕೆ, ಏಕೆ, ಲಕ್ಷ್ಮಿ” ಎಂದು ಪ್ರಶ್ನಿಸಿದನು. ‘ ಬಹಳ ತಲೆನೋವು ’ ಎಂದಿಷ್ಟೇ ಅವಳು ಉತ್ತರಕೊಟ್ಟಳು. ‘ ಹಾಗಾದರೆ ಮನೆಗೆ ಹೋಗೋಣವೇ ’ ಎಂದು ರಾಘು ಪ್ರಶ್ನಿಸಿದ್ದಕ್ಕೆ ತಲೆಯಲ್ಲಾಡಿಸಿದಳು. ಇನ್ನೂ ಅರ್ಧ ಆಟ ಮುಗಿದೇ ಇರಲಿಲ್ಲ. ದಂಪತಿಗಳಿಬ್ಬರೂ ಹೊರಬಂದು ಮನೆ ಸೇರಿದರು. ರಾಘು ನಡೆದ ಸಮಾಚಾರವನ್ನು ತಾಯಿಗೆ ತಿಳಿಸಿದನು. ಒಡನೆ ಹಾಸಿಗೆ ಹಾಸಲಾಯಿತು. ಡಾಕ್ಟರನ್ನು ಕರೆದುಕೊಂಡು ಬರುತ್ತೇನೆಂದು ಗುಂಡೂರಾಯರು ಹೊರಟರು. “ ಏನೂ ಬೇಡಿ ಬನ್ನಿ. ಬರೇ ತಲೆನೋವು ಅಷ್ಟೆ. ನನಗೆ ಆಗಾಗ್ಗೆ ಬರುತ್ತೆ.” ಎಂದು ಅವಳು ಮಾವನನ್ನು ತಡೆದಳು. ಶಾರದಮ್ಮನವರು ಸೊಸೆಯ ತಲೆಗೆ ಅಮೃತಾಂಜನ ತಿಕ್ಕಿದರು. ಗುಂಡೂರಾಯರು ಪಕ್ಕದಲ್ಲೇ ನಿಂತಿದ್ದರು. ಸೊಸೆಗೆ ಒಂದಿಷ್ಟು ಚುಳುಕ್ ಎಂದರೂ ಅವರಿಗೆ ಭಯ; ಅವಳ ಮೇಲೆ ಅಷ್ಟು ಪ್ರೇಮ ಅವರಿಗೆ. ಈಗ ಲಕ್ಷ್ಮಿ ಮೆಲ್ಲನೆ ಎದ್ದು ಮಹಡಿಯ ಮೇಲೆ ಮಲಗಲು ಹೊರಟಳು. ಶಾರದಮ್ಮನವರು “ ಸ್ವಲ್ಪ ತಡೆ : ಇಲ್ಲೆ ಇರು. ಮೆಣಸಿನಸಾರು ಸ್ವಲ್ಪ ಮಾಡುತ್ತೇನೆ. ಒಂದು ತುತ್ತು ತಿಂದು ಹೋಗುವಿಯಂತೆ ” ಎಂದು ಅಡಿಗೆ ಮನೆಯೊಳಗೆ ಹೊಕ್ಕರು. ಲಕ್ಷ್ಮಿಗೆ ಈಗ ಊಟ ಬೇಕಾಗಿರಲಿಲ್ಲ. ಅವಳಿಗೆ ಈಗ ಪ್ರಪಂಚವೇ ಬೇಕಾಗಿರಲಿಲ್ಲ. ಆದರೆ ಅತ್ತೆಯ ಮಾತನ್ನು ಮೀರಬಾರದೆಂದು ಅಲ್ಲೆ ಒರಗಿಕೊಂಡು ಕುಳಿತಳು. ಶಾರದಮ್ಮನವರು ಅರ್ಧ ಘಂಟೆಯಲ್ಲಿ ಮೆಣಸಿನಸಾರು ತಯಾರು ಮಾಡಿದರು. ಬೇಕೂ ಬೇಡದ ಹಾಗೆ ಒಂದೆರಡು ತುತ್ತು ತಿಂದು ಲಕ್ಷ್ಮಿ ಈಗ ಮೇಲೆ ಬಂದು ಮಲಗಿದಳು. ಸ್ವಲ್ಪ ಹೊತ್ತು ಕಳೆದು ರಾಘುವೂ ಬಂದು ಮಲಗಿದನು. “ ಹೇಗಿದೆ ಈಗ ಲಕ್ಷ್ಮಿ ” ಎಂದವನು ಅವಳ ಹಣೆಯ ಮೇಲೆ ಬೆರಳನಿರಿಸಿ ನೋಡಿದಾಗ, ಏನೂ ಇಲ್ಲವೆಂದು ಅವಳು ಉತ್ತರಕೊಟ್ಟಳು. ರಾಘುವಿಗೆ ನಿದ್ದೆ ಹತ್ತಿತು. ಅರ್ಧ

ರಾತ್ರಿಯಾದರೂ ಲಕ್ಷ್ಮಿಗೆ ನಿದ್ದೆ ಹತ್ತಲಿಲ್ಲ. ಬಹಳವಾದ ದುಃಖ ಅವಳನ್ನು ಹಿಡಿದು ಮೆಲ್ಲಮೆಲ್ಲಗೆ ಅವಳು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಅವಳ ಬಿಸಿ ನಿಟ್ಟುಸಿರು ಅವನಿಗೆ ತಾಗಿ, ಅವನನ್ನು ಎಚ್ಚರಗೊಳಿಸಿತು. ರಾಘು ಗಾಬರಿಯಿಂದೆದ್ದು ಕುಳಿತು ಪತ್ನಿಯ ಮುಖವನ್ನು ನೋಡಿದಾಗ, ಬೇಕೆಂದು ಕಣ್ಣು ಮುಚ್ಚಿಕೊಂಡು ಅವಳು ಮಲಗಿದ್ದರೂ, ಅವಳ ಕೆನ್ನೆಯ ಮೇಲೆ ನೀರು ಹರಿವುದನ್ನು ಅವನು ಕಂಡನು. ತಲೆದಿಂಬು ಅವಳ ಕಣ್ಣೀರಿನಿಂದ ನೆನೆದು ಒದ್ದೆಯಾಗಿತ್ತು. 'ಲಕ್ಷ್ಮಿ' ಎಂದು ಅವಳ ಮೈಮೇಲೆ ಕೈಯಿಟ್ಟು, ಮೆಲ್ಲಗೆ ಅವನು ಅಲುಗಾಡಿಸಿದಾಗ ಅವಳು ಎದ್ದು ಕುಳಿತು, ಅವನ ಎರಡೂ ಕೈಗಳನ್ನು ಹಿಡಿದುಕೊಂಡು, ದುಃಖದಿಂದ "ನನ್ನದೊಂದು ಕೋರಿಕೆಗೆ ಬೆಲೆ ಕೊಡುವಿರಾ" ಎಂದು ಕೇಳಿದಳು. "ಹಾಗಂದರೇನೇ" ಎಂದವನು ವಾತ್ಸಲ್ಯದಿಂದ ಅವಳ ತಲೆಯನ್ನು ಸವರುತ್ತ ಕೇಳುತಿದ್ದಂತೆ ಲಕ್ಷ್ಮಿ ತಟಕ್ಕನೆ "ನನ್ನಾಣೆ, ನೀವು ಕುಡಿಯುವುದನ್ನು ನಿಲ್ಲಿಸಬೇಕು" ಎಂದಳು. ರಾಘುವಿಗೆ ಈಗೆಲ್ಲ ಅರ್ಥವಾಯಿತು. ಈ ದಿನ ಆ ಸಿನಿಮಾಕ್ಕೆ ಹೋದುದೇ ತಪ್ಪಾಯಿತೆಂದು ಅವನು ತಿಳಿದುಕೊಂಡನು. ಆದರೂ ಅದನ್ನವನು ಹೊರಗೆ ತೋರ್ಪಡಿಸಿಕೊಳ್ಳದೆ, "ಹುಚ್ಚು ಹುಡುಗಿ ಏನೇನೋ ಮನಸ್ಸಿನಲ್ಲಿ ಚಿಂತೆ ಹತ್ತಿಸಿಕೊಳ್ಳಬೇಡ, ಸುಮ್ಮನೆ ಮಲಗು" ಎಂದು ಹೇಳಿ ಮಲಗಿಕೊಂಡನು. ಮೇಲೂ ಅವನನ್ನು ಮಾತನಾಡಿಸುವ ಧೈರ್ಯ ಮಾಡದೆ ಲಕ್ಷ್ಮಿಯೂ ಮಲಗಿಕೊಂಡಳು.

## ೬೧

ಶಾಮರಾಯರಿಗೆ ಆಗಲೇ ವಯಸ್ಸಾಗುತ್ತ ಬಂದುದರಿಂದ ಮಗ ರಾಮುವಿಗೂ ವಿವಾಹ ಮಾಡಿ, ಕಣ್ತುಂಬ ನೋಡಿ ಆನಂದ

ಪಡಬೇಕೆಂದು ಅವರಿಗೆ ಹಂಬಲ. ಈಗ ಮಗನಿಗೆ ಅವರೆಲ್ಲೂ ಹುಡುಗಿಯನ್ನು ಹುಡುಕಿಕೊಂಡು ಹೋಗಲಿಲ್ಲ. ಏಕೆಂದರೆ ಪಾಳ್ಯದಲ್ಲೆ ಕೃಷ್ಣರಾಯರ ಪುತ್ರಿ ವಿಮಲಳನ್ನು ನಿಷ್ಕರ್ಷೆ ಮಾಡ ಲಾಯಿತು. ಅಳಿಯನಿಗೆ ಮೈಸೂರಿಗೂ ಪತ್ರ ಹೋಯಿತು. ಲಕ್ಷ್ಮಿ ತನ್ನ ತಂದೆಯ ಪತ್ರವನ್ನು ಓದಿನೋಡಿ ಬಹಳ ಹರ್ಷಿತ ಳಾದಳು. ಅವಳಿಗೆ ವಿಮಲಳೆಂದರೆ ಅಪಾರ ಪ್ರೇಮ. ತನ್ನ ಕೂಡಲೇ ಚಿಕ್ಕಂದಿನಿಂದಲೂ ಆಟವಾಡಿ ಬೆಳೆದವಳವಳು. ವಯಸ್ಸಿನಲ್ಲಿ ಲಕ್ಷ್ಮಿಗಿಂತ ಎರಡು ತಿಂಗಳು ಅವಳಿಗೆ ಅಧಿಕ ಅಷ್ಟೆ. ಈಗವಳು ತನ್ನ ಅಣ್ಣನಿಗೆ ವಿಮಲಳನ್ನು ಕೊಟ್ಟು ವಿವಾಹಮಾಡುವುದು, ತನ್ನ ಮನಸ್ಸಿಗೆ ಬಹಳ ಹಿಡಿದಿದೆಯೆಂದು ತಂದೆಗೆ ಪ್ರತ್ಯುತ್ತರ ಬರೆದಳು. ಅಷ್ಟೆ ಅಲ್ಲ. ಲಕ್ಷ್ಮಿ ಈಗ ವಿಮಲಳಿಗೂ ಒಂದು ಪತ್ರ ಬರೆದಳು. ನಿನ್ನನ್ನು ಅತ್ತಿಗೆ ಯನ್ನಾಗಿ ಮಾಡಿಕೊಳ್ಳುವುದಕ್ಕೆ ನಾನು ಬಹಳ ಪುಣ್ಯಮಾಡಿರ ಬೇಕು ಎಂದು ಅದರಲ್ಲಿ ಕಾಣಿಸಿದ್ದಳು. ಶಾಮರಾಯರು ಒಂದೆ ರಡು ತಡವೆ ಮೈಸೂರಿಗೂ ಹೋಗಿದ್ದು ಬಂದರು. ವಿವಾಹ ತೇದಿಯೂ ಹತ್ತಿರ ಬಂದಿತು. ಮನೆಯಲ್ಲಿ ಗುಂಡೂರಾಯ ರೊಬ್ಬರೇ ಇರುವುದೆಂದು ತೀರ್ಮಾನಿಸಲಾಯಿತು. ಏಕೆಂದರೆ ಕಂಪೆನಿ ಹೊಸದಾಗಿ ತೆರೆದಿದ್ದುದರಿಂದ, ಅದರ ಪೂರ್ಣ ಜವಾ ಬ್ದಾರಿಯನ್ನು, ಮತ್ತೊಬ್ಬರಿಗೆ ವಹಿಸಲು ಅವರು ಇಷ್ಟಪಡಲಿಲ್ಲ. ರಾಘು ಪತ್ನಿ ಮತ್ತು ತಾಯಿಯೊಂದಿಗೆ ಪಾಳ್ಯಕ್ಕೆ ಪ್ರಯಾಣ ಬೆಳಸಿದನು. ವಿವಾಹವಾದನಂತರ ತನ್ನ ತವರ ಮನೆಗೆ ಹೋಗು ವುದು ಇದೇ ಪ್ರಥಮ ತಡವೆಯಾದ್ದರಿಂದ, ಲಕ್ಷ್ಮಿಗೆ ಅಪರಿ ಮಿತಾನಂದ. ಮೇಲಾಗಿ ಹೊರಟಿರುವುದು ಅಣ್ಣನ ವಿವಾಹಕ್ಕೆ. ಇನ್ನು ಕೇಳಬೇಕೆ? ಅವಳ ಉತ್ಸಾಹವನ್ನೂ ಆನಂದವನ್ನೂ ಅವಳ ಮುಖವೇ ತೋರಿಸಿಕೊಡುತಿತ್ತು. ಗಾಡಿಯಿಂದ ಕೆಳಗಿಳಿ ದೊಡನೆಯೇ ಸಂಭ್ರಮದ ಸ್ವಾಗತ ಇವರಿಗೆ ಕಾದಿತ್ತು. ಜಾನ

ಕಮ್ಮನವರು ಮಗಳನ್ನು ಕಂಡೊಡನೆ ಹರ್ಷಿತರಾಗುವ ಬದಲು ವ್ಯಸನಪಟ್ಟರು. ಏಕೆಂದರೆ ಅವಳೀಗ ಮೊದಲಿನ ಲಕ್ಷ್ಮಿ ಯಾಗಿರಲಿಲ್ಲ. ಪತಿಯ ವ್ಯಸನದಿಂದ ಅವಳು ತುಸು ಕುಗ್ಗಿ ಹೋಗಿದ್ದಳು. ಕಣ್ಣುಗಳು ಸ್ವಲ್ಪ ಒಳಬಿದ್ದಂತೆ ಕಾಣು ತಿದ್ದುವು. ಕೆನ್ನೆ ಸ್ವಲ್ಪ ಬತ್ತಿತ್ತು. ಅವಳು ಕಿಲಕಿಲನೆ ನಕ್ಕಾಗ ಆ ನಾದ ಮೊದಲು ಕಂಚಿನ ಶಬ್ದದಂತೆ, ಘಣೀರ್ ಎನ್ನುತಿತ್ತು. ಈಗ ಆ ಉತ್ಸಾಹ, ಆನಂದ, ಅವಳಿಗಿರಲಿಲ್ಲ. ಚಿಂತೆ ಅವಳ ಬಲವನ್ನೂ, ಆನಂದವನ್ನೂ, ಕುಗ್ಗಿಸಿತ್ತು. ಲಕ್ಷ್ಮಿ ಹೊರಗೆ ಏನೂ ತೋರ್ಪಡಿಸಿಕೊಳ್ಳದೆ ಸಡಗರದಿಂದಲೇ ಮನೆಯಲ್ಲೆಲ್ಲ ಓಡಾಡುತಿದ್ದಳು. ರಾಮು ವಿಮಲಳನ್ನು ತನ್ನ ಸತಿಯಾಗಿ ಸ್ವೀಕರಿಸಿ, ಕೈಹಿಡಿದನು. ಬಂದ ಅತಿಥಿಗಳೆಲ್ಲರೂ ಹೊರಟು ಹೋದರು. ಶಾರದಮ್ಮನವರೂ ಈಗ ಮೈಸೂರಿಗೆ ತೆರಳಲು ತ್ವರೆಪಡಿಸಲಾರಂಭಿಸಿದರು. ವಿವಾಹವಾದನಂತರ ಮಗಳು ಇದೇ ಬಂದಿರುವುದರಿಂದ ಒಂದು ತಿಂಗಳ ಕಾಲ ತಾವಿಟ್ಟು ಕೊಂಡಿದ್ದು ಕಳುಹಿಸುವುದಾಗಿ, ಶಾಮರಾಯರು ಶಾರದಮ್ಮ ನವರ ಕೂಡ ನುಡಿದರು. ಬರುವಾಗ ಪತಿಯನ್ನು ಕೇಳಲಿಲ್ಲವಲ್ಲಾ ಎಂದು ಶಾರದಮ್ಮನವರು ತುಸು ಯೋಚಿಸಿದರು. ಶಾಮ ರಾಯರು ಏಕೆ ಯೋಚಿಸುತ್ತೀರಿ ? ಎಂದು ಕೇಳಿದುದಕ್ಕೆ, ಶಾರ ದಮ್ಮನವರು ಎಳೆದೆಳೆದು, ಏನೂ ಇಲ್ಲವೆಂದರು. ಅವರ ಮನೋ ಇಂಗಿತವನ್ನರಿತ ಶಾಮರಾಯರು "ಗುಂಡೂರಾಯರನ್ನು ಕೇಳ ಲಿಲ್ಲವೆಂದು ಯೋಚಿಸುತ್ತೀರೇನೋ ? ಅವರ ಮಾತು ಬಿಡಿ. ನಮ್ಮ ವಿಷಯದಲ್ಲೇನೂ ಆಕ್ಷೇಪಿಸುವವರಲ್ಲ" ಎಂದರು. ಸರಿ ; ಒಪ್ಪಿದುದಾಯಿತು. ಲಕ್ಷ್ಮಿಯನ್ನು ಬಿಟ್ಟು ತಾಯಿಯೂ, ಮಗನೂ, ಈಗ ಮೈಸೂರಿಗೆ ತೆರಳಿದರು. ಲಕ್ಷ್ಮಿ ಮಾವನಿಗಾಗಿ ದೊಡ್ಡದೊಂದು ತಿಂಡಿಪೊಟ್ಟಣವನ್ನು ಕಟ್ಟಿಕೊಟ್ಟಳು. ಅವಳು ಪತಿಯ ಕೂಡ "ನನ್ನನ್ನು ಕರೆದುಕೊಂಡು ಹೋಗಲು ನೀವೇ

ಬನ್ನಿ" ಎಂದಳು; ಅವನು ತಲೆಯಲ್ಲಾಡಿಸಿದನು. ಶಾರದಮ್ಮ ನವರು ಸೊಸೆಯ ಕೂಡ "ತಂದೆ ಮನೆಯೆಂದು ತುಂಬ ದಿನ ಇದ್ದು ಬಿಡಬೇಡಮ್ಮ. ನಿನ್ನನ್ನು ಬಿಟ್ಟು ಒಂದು ದಿನ ಅಗಲಿರಲೂ ನಮಗೆ ಕಷ್ಟವಾಗಿ ತೋರುತ್ತದೆ" ಎಂದೆಂದು ಹೊರಬಂದರು. ಲಕ್ಷ್ಮಿ ನಗುನಗುತ್ತಲೇ ಗಾಡಿಯ ಬಳಿ ಬಂದು ನಿಂತಳು. ರಾಘು ಓರೆಗಣ್ಣಿನಿಂದಲೇ ಪತ್ನಿಯನ್ನು ನೋಡುತ್ತ ಗಾಡಿಯೇರಿ ದನು. ಕೆಲಸದ ಒತ್ತಡವೆಲ್ಲ ಮುಗಿದ ಮೇಲೆ ಒಂದು ದಿನ ಜಾನಕಮ್ಮನವರು ಮಗಳನ್ನು ಕುಳ್ಳಿರಿಸಿ "ಏಕೆ ಲಕ್ಷ್ಮಿ, ಇಷ್ಟು ಕಂಗೆಟ್ಟು ಹೋಗಿದ್ದೀಯೆ?" ಎಂದು ಪ್ರಶ್ನಿಸಿದರು. ಏನೂ ಇಲ್ಲವಲ್ಲಾ—ಎಂದವಳು ಉತ್ತರಕೊಟ್ಟಳು. "ನಾನು ನಂಬು ತ್ತೇನೆಯೇ; ಮೊದಲಿನ ಹಾಗೆ ಈಗ ನೀನಿದ್ದೀಯೇನು? ಏಕೆ? ಅಲ್ಲೇನಾದರೂ ನಿನ್ನ ಅತ್ತೆಮಾವಂದಿರು ನಿನ್ನ ಮನಸ್ಸು ನೋಯಿಸುವಂಥ" ಎನ್ನುವಷ್ಟರೊಳಗಾಗಿ, ಲಕ್ಷ್ಮಿ ಮಾತು ತಡೆದು, "ಸುಮ್ಮನೆಲ್ಲ ಸಂದೇಹ ಪಡಬೇಡಮ್ಮ, ಅವರೆಲ್ಲ ಚಿನ್ನ ದಂಥ ಗುಣವುಳ್ಳವರು. ಸೇರಿದ ಹಾಗೆ ಎರಡು ದಿನ ಎರಡನೇ ಆಟ ಸಿನಿಮಾ ನೋಡಲು ಹೋಗಿದ್ದೆ. ನಿದ್ದೆಗೆಟ್ಟುದರ ಕೂಡ ಪ್ರಯಾಣದ ಆಲಸ್ಯವೂ ಸೇರಿಕೊಂಡಿದೆ ಅಷ್ಟೆ" ಎಂದು ತೇಲಿಸಿ ಬಿಟ್ಟಳು. ಜಾನಕಮ್ಮನವರು ಈಗ ಸುಮ್ಮನಾದರು. ತನ್ನ ಪತಿಯ ಕುಂದು ಕೊರತೆಗಳನ್ನು ಮತ್ತೊಬ್ಬರಿಗೆ ತಿಳಿಸಕೂಡ ದೆಂದು ಅವಳು ನಿರ್ಧರಿಸಿದ್ದಳು. ಅವರನ್ನು ಒಳ್ಳೆಯ ಹಾದಿಗೆ ತಂದು ಎಚ್ಚರಗೊಳಿಸುವುದು ತನ್ನ ಕರ್ತವ್ಯವೆಂದೇ ಅವಳು ಭಾವಿಸಿದ್ದಳು. ಆದುದರಿಂದಲೇ ಅವಳು ಹೆತ್ತ ತಾಯಿಯ ಕೂಡಲೂ ತನ್ನ ಪರಿಸ್ಥಿತಿಯನ್ನು ಬಿಚ್ಚಲಿಲ್ಲ. ಪತಿಯನ್ನು ನಿಂದಿಸಲಿಲ್ಲ. ಜಾನಕಮ್ಮನವರ ಬಾಯಿ ದೊಡ್ಡದು. ಅದು ಲಕ್ಷ್ಮಿಗೆ ಚೆನ್ನಾಗಿ ತಿಳಿದಿತ್ತು. ತನ್ನ ಪತಿ ಕುಡುಕನೆಂದು ನಾಲ್ಕಾರು ಜನ ಆಡಿಕೊಂಡಾರು ಎಂದು ಅವಳೀಗ ರಾಘುವಿನ

ನಡತೆಯನ್ನು ತನ್ನ ತಾಯಿಗೂ ತಿಳಿಸಲಿಲ್ಲ. ಪಾಳ್ಯದಲ್ಲಿ ಲಕ್ಷ್ಮಿ ಒಂದು ತಿಂಗಳ ಕಾಲ ಸುಖವಾಗಿಯೇ ಕಳೆದಳು. ಅವಳು ವಿಮಲಳನ್ನು ಅತ್ತಿಗೆಯೆಂದು ಕರೆಯದೆ, ವಿಮಲಳೆಂದೇ ಕರೆಯುತ್ತಿದ್ದಳು. ಏಕೆಂದರೆ ಚಿಕ್ಕಂದಿನಿಂದಲೂ ಹಾಗೆಂದು ಅಂದು ಅವಳಿಗೆ ವಾಡಿಕೆಯಾಗಿ ಹೋಗಿತ್ತು. ಈಗ ಲಕ್ಷ್ಮಿಯನ್ನು ಕರೆದುಕೊಂಡು ಹೋಗಲು ರಾಘುವೇ ಬಂದನು. "ದಸರಾಕ್ಕೆ ಈ ವರ್ಷ ಖಂಡಿತ ಬನ್ನಿ"ರೆಂದು ಅಣ್ಣನಿಗೂ, ಅತ್ತಿಗೆಗೂ, ನಾಲ್ಕು ನಾಲ್ಕು ತಡವೆ ಹೇಳಿ, ತಂದೆತಾಯಿಯರ ಸಮ್ಮತಿ ಪಡೆದು ಪತಿಯ ಕೂಡ ಈಗವಳು ಮೈಸೂರಿಗೆ ಪ್ರಯಾಣ ಮಾಡಿದಳು.

## ೬೨

ದಿನಗಳುರುಳುತಿದ್ದಂತೆ ಲಕ್ಷ್ಮಿಗೆ ತಾಯ್ತನದ ಚಿಹ್ನೆಗಳು ಕಾಣಲಾರಂಭಿಸಿದವು. ಈಗ ಶಾರದಮ್ಮನವರೂ, ಗುಂಡೂರಾಯರೂ, ಹಿಗ್ಗಿಹೋದರು. ಪಾಳ್ಯಕ್ಕೆ ಪತ್ರವನ್ನೂ ಬರೆದರು. ರಾಮು ಒಂದುತಡವೆ ತಂಗಿಯನ್ನು ನೋಡಿಕೊಂಡು ಹೋಗಲು ಮೈಸೂರಿಗೂ ಬಂದಿದ್ದನು. "ವಿಮಲಳನ್ನು ಏಕೆ ಕರೆದುಕೊಂಡು ಬರಲಿಲ್ಲ. ಅವಳಿಗೆ ಮೈಸೂರನ್ನು ತೋರಿಸಬೇಕಾಗಿತ್ತು" ಎಂದವಳು ಅಣ್ಣನ ಕೂಡ ಆಕ್ಷೇಪಿಸಿದಳು. "ದಸರಾಕ್ಕಲ್ಲವೇ ನೀನು ಬರಹೇಳಿದ್ದು, ಖಂಡಿತ ನಾವು ಆಗ ಬರುತ್ತೇವೆ" ಎಂದವನು ನಗುತ್ತ ಉತ್ತರಕೊಟ್ಟನು. ರಾಮು ತಂಗಿಯನ್ನು ನೋಡಿಕೊಂಡು ಊರಿಗೆ ಹಿಂದಿರುಗಿದನು. ಸೊಸೆಯ ಪಾದವು ಸಹ ನೆಲಕ್ಕೆ ತಾಗಬಾರದೆಂದು ಅತ್ತೆ ಮಾವಂದಿರು ಜಾಗರೂಕತೆ ವಹಿಸಲಾರಂಭಿಸಿದರು. ಲಕ್ಷ್ಮಿಯ ಮೇಲೆಯೇ ಅವರುಗಳು ಸದಾ ಕಣ್ಣಿಟ್ಟಿದ್ದರು. "ಎಲ್ಲ ಸುಗಮವಾಗಿ ನಡೆಯಲಿ

ಸ್ವಾಮಿ. ನಿನ್ನ ಸನ್ನಿಧಿಗೆ ಮಗುವಿನ ಸಹಿತ ಲಕ್ಷ್ಮಿಯನ್ನು ಕರೆದುಕೊಂಡು ಬರುತ್ತೇನೆ" ಎಂದು ಶಾರದಮ್ಮನವರು ಮಂತ್ರಾಲಯಕ್ಕೆ ಹರಸಿಕೊಂಡರು. ರಾಘುವಿಗೂ ಈಗ ತಾನು ತಂದೆಯಾಗುವುದರಲ್ಲಿ ಬಹಳ ಆನಂದ. ಮಲಗಿದ್ದಾಗ ಅವನು ಪತ್ನಿಯ ಕೆನ್ನೆಯನ್ನು ಮೆಲ್ಲಗೆ ಚಿವುಟಿ, "ಏನು ಲಕ್ಷ್ಮಿ ನೀನು ಅಪೇಕ್ಷಿಸುವುದು ಗಂಡೋ ಹೆಣ್ಣೋ" ಎಂದು ಕೇಳಿದಾಗ, ಅವಳು ಮೆಲ್ಲಗೆ ನಕ್ಕು ಏನೊಂದುತ್ತರವನ್ನೂ ಕೊಡದೆ ಇರುತಿದ್ದಳು. ಪಾಳ್ಯದಿಂದ ಈಗ ವಾರಾವಾರ ಪತ್ರಗಳು ಬರಲಾರಂಭಿಸಿದುವು. ಪ್ರತಿಯೊಂದು ಪತ್ರದಲ್ಲಿಯೂ ಲಕ್ಷ್ಮಿಯನ್ನು ಜಾಗರೂಕತೆಯಿಂದ ನೋಡಿಕೊಳ್ಳಬೇಕೆಂಬ ಒಕ್ಕಣಿಕೆ ಸೇರಿಸಲಾಗಿದ್ದಿತು. ಶಾರದಮ್ಮನವರು ನಗುತ್ತ ಸೊಸೆಯ ಕೂಡ ಹೇಳುತಿದ್ದರು. "ನೋಡು ಲಕ್ಷ್ಮಿ ಜಾನಕಮ್ಮನವರಿಗೆ ಭಯ ಬಹಳ ಜಾಸ್ತಿ. ಪಾಪ; ಯಾವಾಗಲೂ ಅಷ್ಟೆ. ಹೆಣ್ಣುಮಕ್ಕಳನ್ನು ಕಂಡರೆ ತಾಯಿಗಿರುವಷ್ಟು ಪ್ರೇಮ ಮತ್ತಾರಿಗೂ ಇರುವುದಿಲ್ಲ"ವೆನ್ನುತಿದ್ದರು. ಹೆಂಗಸರು ಗರ್ಭಿಣಿಯಾದಾಗ ನೋಡಲು ಬಲು ಚೆಂದ ಕಾಣುತ್ತಾರೆ. ಪೂರ್ಣ ಚಂದ್ರನಂತೆ ಅವರು ಪ್ರಕಾಶಿಸುತ್ತಾರೆ. ಲಕ್ಷ್ಮಿಯ ದೊಡ್ಡದಾದ ಮುಖ ಈಗ ಮತ್ತಷ್ಟು ದೊಡ್ಡದಾಯಿತು. ಅವಳ ಬಿಳುಪಾದ ದೇಹ ಈಗ ಮತ್ತಷ್ಟು ಬಿಳುಪೇರಿತು. ಅವಳ ಸಣ್ಣದಾದ ಕುಚಗಳು ಈಗ ಸ್ವಲ್ಪ ದೊಡ್ಡದಾಗಿ ಬಲಿತು, ತಾಯ್ತನದ ಪರಿಪಕ್ವತೆಯನ್ನು ತೋರಿಸುತಿದ್ದುವು. ಶಾಮರಾಯರು ಲಕ್ಷ್ಮಿಯನ್ನು ಪ್ರಸವಕ್ಕೆ ಊರಿಗೇ ಕಳುಹಿಸಿಕೊಡಬೇಕೆಂದು ಕೇಳಿಕೊಂಡರು. ಗುಂಡೂರಾಯರು ಅದಕ್ಕೊಪ್ಪಲಿಲ್ಲ. ಕಾಡುಸೀಮೆ. ಅವಳಿಲ್ಲೇ ಇರಲಿ—ಎಂದು ಬಿಟ್ಟರು. ಜಾನಕಮ್ಮನವರು ಮಗಳನ್ನು ತಮ್ಮ ಮನೆಗೇ ಕರೆದುಕೊಂಡು ಬರಬೇಕೆಂದು ಎಣಿಸಿದ್ದರು. ಆದರದು ಈಗ ಸಾಧ್ಯವಾಗಲಿಲ್ಲ. ಪ್ರಸವ ಸಮಯದಲ್ಲಾದರೂ ತಾವೊಂದು

ಹದಿನೈದು ದಿನ ಮೈಸೂರಿನಲ್ಲಿ ಉಳಿಯಬೇಕೆಂದು ತೀರ್ಮಾನಿಸಿ ಕೊಂಡರು. ಗುಂಡೂರಾಯರು ಸಾಮಾನ್ಯ ವ್ಯಕ್ತಿಯೇನೂ ಅಲ್ಲ. ಅವರು ವ್ಯಾಪಾರದ ರಹಸ್ಯಗಳನ್ನೆಲ್ಲ ಸ್ವಲ್ಪ ಸ್ವಲ್ಪ ತಿಳಿದುಕೊಂಡರು. ಯಾವಾಗಲೂ ಕಂಪೆನಿ ನಷ್ಟದಲ್ಲಿ ಓಡುತ್ತ ದೆಂದು ರಾಘು ಲೆಕ್ಕ ತೋರಿಸುತಿದ್ದನು. ಆದರೆ ಇದನ್ನು ಗುಂಡೂರಾಯರು ನಂಬುತ್ತಿರಲಿಲ್ಲ. ಅವನು ಹಣವನ್ನು ಫ್ರೋಲು ಮಾಡುತ್ತಾನೆಂದು ಅವರಿಗೆ ಚೆನ್ನಾಗಿ ತಿಳಿದಿದ್ದಿತು. ಅದು ಹೇಗೆ ನಷ್ಟವಾಗುತ್ತದೆ? ಎಂದು ಅವರು ವಿವರಿಸಿ ಕೇಳಿದರೆ, ಅವನು ಇಲ್ಲದ ಸಲ್ಲದ ಸುಳ್ಳು ಹೇಳಿ, "ಮಾರ್ಕೆಟ್" ಈಗ ಬಹಳ ಮಂದದಲ್ಲಿದೆ ಎನ್ನುತಿದ್ದನು. ಅವರು ಪೋಲಿಸ್ ಉದ್ಯೋಗದಲ್ಲಿದ್ದವರಲ್ಲವೆ? ಸಿ.ಐ.ಡಿ. ಕೆಲಸ ಅವರಿಗೇನು ತಿಳಿಯದೆ? ಲಾಭವೆಲ್ಲವನ್ನೂ ಅವನು ಸರೋಜಳಿಗೆ ತೆಗೆದು ಕೊಂಡು ಹೋಗಿ ಸುರಿಯುತ್ತಾನೆ ಎಂದು ಅವರು ಬಹಳ ವ್ಯಸನ ಪಡುತಿದ್ದರು. "ಲಕ್ಷ್ಮಿಗೆ ಒಂದಿಷ್ಟು ಮೋಸ ಮಾಡಿದರೂ ನೀನು ಮುಂದುವರೆಯಲಾರೆ" ಎಂದು ಅವನ ಕೂಡ ರೇಗಾಡು ತಿದ್ದರು. ಮನೆಯಲ್ಲೆ ಅಮೃತವಿರುವಾಗ ಹೊರಗೆ ಬಚ್ಚಲಿನ ನೀರಿಗೆ ಅವನು ಕೈಹಾಕುತ್ತಾನಲ್ಲಾ ಎಂದವರು ಹಣೆಹಣೆ ಬಡಿದುಕೊಳ್ಳುತಿದ್ದರು. ಆದರೆ ರಾಘು ಬ್ರಾಂದಿ ಅಂಗಡಿಗೆ ಹೋಗುವುದನ್ನು ಮಾತ್ರ ಅವರಿನ್ನೂ ಪತ್ತೆ ಹಚ್ಚಿರಲಿಲ್ಲ.

## ೬೩

ಕೆಳಗಡೆ ಹಾಲಿನಲ್ಲಿದ್ದ ದೊಡ್ಡ ಗಡಿಯಾರ ಢಾಣ್ ಢಾಣ್ ಎಂದು ರಾತ್ರಿ ಹನ್ನೊಂದು ಘಂಟೆ ಹೊಡೆಯಿತು. ರಾಘು ಇನ್ನೂ ಮನೆಗೆ ಬಂದಿರಲಿಲ್ಲ. ಲಕ್ಷ್ಮಿಗೆ ನಿದ್ದೆಯೂ ಹತ್ತಿರಲಿಲ್ಲ. ಹೊಟ್ಟೆಯಲ್ಲಿದ್ದ ಮಗುವಿನ ಚಲನೆಯನ್ನು ಅವಳು

ಆಲಿಸುತ್ತ ಮಲಗಿದ್ದಳು. ಅವಳೀಗ ಏಳು ತಿಂಗಳ ಗರ್ಭಿಣಿ. ತ್ರಿಕೋಣಾಕಾರವಾಗಿ ತನ್ನ ಎರಡೂ ಕೈಗಳನ್ನು ಹಿಂದಕ್ಕೆ ಸರಿಸಿ, ದಿಂಬಿನ ಮೇಲೆ ಇರಿಸಿ, ಅವಳು ಆಕಳಿಸಿದಳು. ಯಾವುದೋ ಒಂದು ಪುಸ್ತಕದಲ್ಲಿ ಗರ್ಭಿಣಿಯರು ಚಿಂತೆ ಹತ್ತಿಸಿಕೊಳ್ಳಬಾರದೆಂದು ಬರೆದಿದ್ದುದನ್ನು ಅವಳು ಓದಿದ್ದಳು. ಆದರೆ ಅದು ಅವಳಿಗೆ ಸಾಧ್ಯವೇಯಿರಲಿಲ್ಲ. ಇಪ್ಪತ್ತುನಾಲ್ಕು ತಾಸುಗಳೂ ಅವಳು ಪತಿಯನ್ನೇ ಕುರಿತು ಚಿಂತಿಸುತಿದ್ದಳು. ಅವನನ್ನು ಹೇಗೆ ದಾರಿಗೆ ತರುವುದು ಎಂದು ಯೋಚಿಸುತಿದ್ದಳು. ಈಗ ಅರ್ಧಘಂಟೆಯೂ ಹೊಡೆಯಿತು. ಅಂದರೆ ಹನ್ನೊಂದುವರೆಯಾಯಿತು. ಹೊರಗಡೆ ಬಾಗಿಲು ತೆಗೆಯುವ ಶಬ್ದ ಈಗ ಕೇಳಿಸಿತು. "ಇಷ್ಟು ಹೊತ್ತಿನವರೆಗೆ ಎಲ್ಲಿಗೆ ಹೋಗಿದ್ದೆ ರಾಘು. ಗರ್ಭಿಣಿ ಹೆಂಗಸು. ಒಬ್ಬಳೇ ಮೇಲೆ ಮಲಗುವುದೊಳ್ಳೆಯದೇ. ಹೊತ್ತು ಮುಂಚೆ ಸ್ವಲ್ಪ ಬಂದರಾಗದೇ, ಚೆನ್ನಾಯಿತು" ಎಂದೆನ್ನುವ ತನ್ನ ಅತ್ತೆಯ ಮಾತೂ ಕಿವಿಗೆ ಬಿದ್ದಿತು. ಲಕ್ಷ್ಮಿ ಈಗ ಮೆಲ್ಲಗೆ ಎದ್ದು ದೀಪವನ್ನು ದೊಡ್ಡದು ಮಾಡಿದಳು. ಗರ್ಭಿಣಿಯಾಗುವುದಕ್ಕೆ ಮೊದಲು ಅವಳು ರಾಘು ಬರುವವರೆಗೆ, ಸ್ವಿಚ್ ಆರಿಸಿ ಕತ್ತಲು ಮನೆಯಲ್ಲೇ ಮಲಗುತಿದ್ದಳು. ಈಗ ಸಣ್ಣದು ಮಾಡಿ ಲ್ಯಾಂಪ್ ಒಂದನ್ನು ಇರಿಸಿಕೊಳ್ಳುತಿದ್ದಳು. ಇಷ್ಟರಲ್ಲಿ ರಾಘು ಕದ ತಟ್ಟಲಾರಂಭಿಸಿದನು. ಲಕ್ಷ್ಮಿ ಬಾಗಿಲು ತೆಗೆದಳು. ಅವನು ಈ ದಿನ ಮಿತಿಮೀರಿ ಕುಡಿದು ಬಂದಿದ್ದನು. ಅವನ ತುಟಿಗಳೂ ಮುಖವೂ ಕಣ್ಣುಗಳೂ ಅದನ್ನು ತೋರಿಸಿ ಕೊಡುತಿದ್ದುವು. ಗರ್ಭಿಣಿಯೆಂಬುದನ್ನೂ ಮರೆತು ಈದಿನ ಅವನು ಅವಳ ಕೂಡ ಒರಟೊರಟಾಗಿ ವರ್ತಿಸಿದನು. ಲಕ್ಷ್ಮಿ ಈದಿನ ನರಕವನ್ನು ಅನುಭವಿಸಿದಳು. ಯಾತನೆಯನ್ನೆಲ್ಲ ಅವಳು ಕಷ್ಟಪಟ್ಟು ತಡೆದುಕೊಳ್ಳಬೇಕಾಯಿತು. ಮೊದಲನೇ ಜಾವ ಕಳೆಯುವವರೆಗೂ ಅವನು ಒಂದು ಮೃಗವಾಗಿದ್ದು,

ಆಮೇಲೆ ಮೆಲ್ಲಮೆಲ್ಲಗೆ ಮಾನವನಾಗಲಾರಂಭಿಸಿದನು. ಬೆಳಗಾಯಿತು. ಅಂದು ಗುರುವಾರ; ಕಂಪೆನಿಗೆ ರಜೆಯದಿನ. ರಾತ್ರಿ ತಾನು ಪತ್ನಿಗೆ ಕಿರುಕುಳ ಕೊಟ್ಟಿದ್ದನ್ನೆಲ್ಲ ರಾಘು ಮರೆತೇ ಬಿಟ್ಟನು. ಆದರೆ ಲಕ್ಷ್ಮಿಗೆ ಮರೆಯುವುದಕ್ಕಾಗುತ್ತದೆಯೇ? ಆ ದಿನ ತಾನು ಪತಿಯ ಕೂಡ ಧೈರ್ಯವಾಗಿ ನಾಲ್ಕು ಮಾತುಗಳನ್ನಾಡುವುದು ತನ್ನ ಕರ್ತವ್ಯವೆಂದು ಅವಳು ಭಾವಿಸಿದಳು. ಬೆಳಗಿನ ಕಾಫಿಯೂ ಆಯಿತು. ಹೊರಗೆ ಹೊರಡಲು ರಾಘು ತನ್ನ ಕೊಠಡಿಯಲ್ಲಿ ಅಲಂಕಾರ ಮಾಡಿಕೊಳ್ಳುತಿದ್ದನು. ಲಕ್ಷ್ಮಿ ಹಾಲಿನಲ್ಲಿದ್ದವಳು ಮಹಡಿಯ ಹಂತಗಳನ್ನು ಮೆಲ್ಲಮೆಲ್ಲಗೆ ಹತ್ತಿ ಮೇಲೆ ಬಂದು ಕೊಠಡಿಯೊಳಗೆ ಪ್ರವೇಶಿಸಿದಳು. ಈಗ ಪತಿಯ ಕೂಡ ಏನು ಮಾತನಾಡುವುದೆಂದು ಅವಳಿಗೆ ಚಿಂತೆ ಹತ್ತಿತು. ಬಾಯಿಂದ ಈಚೆಗೆ ಶಬ್ದಗಳೇ ಹೊರಡಲಿಲ್ಲ. ರಾಘು ಪತ್ನಿ ಕೊಠಡಿಯೊಳಗೆ ಪ್ರವೇಶಿಸಿದುದನ್ನು ತಿರುಗಿನೋಡಿ, ಮತ್ತೆ ತಲೆ ಬಾಚಿಕೊಳ್ಳಲಾರಂಭಿಸಿದನು. ಈಗ ಲಕ್ಷ್ಮಿ ಮೆಲ್ಲಗೆ ಕುಳಿತು ಅವನ ಎರಡೂ ಪಾದಗಳನ್ನು ಹಿಡಿದುಕೊಂಡಳು. ನಾಲ್ಕು ಅಶ್ರುಬಿಂದುಗಳು ತಟಕ್ಕನೆ ಅವಳ ಕಣ್ಣಿಂದ ಹೊರಟು, ಅವನ ಪಾದದ ಮೇಲೆ ಬಿದ್ದುವು. ರಾಘು "ಇದೇನೀ ಅವಾಂತರ" ಎಂದನು. ಲಕ್ಷ್ಮಿ ದುಃಖದಿಂದ "ನೀವೆಲ್ಲ ಈಗ ಮರೆತಿದ್ದೀರಿ! ರಾತ್ರಿ ನೀವು ನಡೆದುಕೊಂಡ ನಡತೆ ಬಹಳ ಹೇಸುವಂಥದು. ನಾನು ಗರ್ಭಿಣಿಯೆಂಬುದನ್ನೂ ಸಹ ನೀವು ಮರೆತಿರಲ್ಲಾ" ಎಂದು ತಡೆದು ತಡೆದು ಅಂದಳು. ರಾಘುವಿಗೆ ಕೋಪ ಉಕ್ಕೇರಿತು. "ಸದಾ ನಿನ್ನ ಗೋಳು ಸರಿಯಾಗಿದೆ. ಹೀಗೆ ಅಳುವುದನ್ನು ಎಲ್ಲಿ ಕಲಿತೆ?" ಎಂದು ಗುಡುಗಿದನು. ಲಕ್ಷ್ಮಿ "ನನ್ನಾಣೆ, ನನ್ನ ಹೊಟ್ಟೆಯಲ್ಲಿರುವ ಮಗುವಿನಾಣೆ, ನೀವು ಸಭ್ಯತನದಿಂದ ನಡೆದುಕೊಳ್ಳಬೇಕು" ಎಂದು ಅಂಗಲಾಚಿ ಬೇಡಿಕೊಂಡಳು. ರಾಘುವಿಗೆ ಈಗ ತಡೆಯಲಾರದಷ್ಟು ಕೋಪ ಬಂದಿತು. "ನಾನು

ಗಂಡಸು, ಏನಾದರೂ ಮಾಡುತ್ತೇನೆ. ನೀನಾರು ಕೇಳುವುದಕ್ಕೆ ?" ಎಂದು ಗಡಸಿನಿಂದಂದನು. "ಪತಿ ಕೆಟ್ಟ ನಡತೆಯಲ್ಲಿ ನಡೆದರೆ ಅದನ್ನು ತಿದ್ದುವುದು ಸತಿಯ ಕರ್ತವ್ಯ. ಪತಿಯ ಕಷ್ಟ ಸುಖಗಳಲ್ಲಿ ಅವಳಿಗೂ ಸಮಭಾಗವಿದೆ. ನೀವೀಗ ತಪ್ಪು ದಾರಿಯಲ್ಲಿ ನಡೆಯುತಿದ್ದೀರಿ. ನಿಮ್ಮನ್ನೀಗ ಎಚ್ಚರಿಸಲು ನನಗೆ ಪೂರ್ಣ ಹಕ್ಕಿದೆ" ಎಂದಳು. ಲಕ್ಷ್ಮಿಯ ಬಾಯಿಂದ ಅವಳನ್ನರಿಯದೆಯೇ ವೇಗವಾಗಿ ಶಬ್ದಗಳುರುಳಿ ರಾಘುವಿನ ಹೃದಯವನ್ನು ಭೇದಿಸಿತು. ತಾನು ತಾಲಿ ಕಟ್ಟಿದ ಒಂದು ಅಲ್ಪ ಹೆಣ್ಣು ತನ್ನನ್ನು ಕುರಿತು ಎದುರು ಮಾತಾಡುತ್ತಾಳಲ್ಲಾ ಎಂದು ಅವನು ತನ್ನನ್ನೇ ಮರೆತು "ಇನ್ನುಮೇಲೆ ನನ್ನೆದುರು ಮಾತಾಡ ಬೇಡ" ವೆಂದು ಫಳೀರ್ ,ಫಳೀರ್, ಎಂದು ಅವಳ ಕೆನ್ನೆಗೆ ಎರಡೇಟು ಅಪ್ಪಳಿಸಿ, ಗುಡುಗುಡು ಎಂದು ಕೆಳಗಿಳಿದು, ಸಿಡುಗುಟ್ಟುತ್ತ ಹೊರಟೇ ಹೋದನು. ಲಕ್ಷ್ಮಿಯ ಮೃದುವಾದ ಕೆನ್ನೆಗಳಲ್ಲಿ ಪತಿಯ ಐದು ಬೆರಳುಗಳೂ ಕಾಣಿಸಿಕೊಂಡು ಅವಳ ಕೆನ್ನೆಗಳು ಕೆಂಪಾದುವು. ಬೆಂಚಿನ ಮೇಲೆ ತಲೆಯಿಟ್ಟು ಕುಳಿತು ಅವಳು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಈ ಸಂಭವ ನಡೆದಾಗ ಗುಂಡೂರಾಯರು ಕೆಳಗಡೆ ಹಾಲಿನಲ್ಲೇ ಇದ್ದರು. ರಾಘು ಸಿಡಿಮಿಡಿ ಗುಟ್ಟುತ್ತ ಹೊರಗೆ ಹೋದುದನ್ನು ಅವರು ಈಕ್ಷಿಸಿದ್ದರು. ಮೇಲೆ ಲಕ್ಷ್ಮಿಯ ಸಣ್ಣದಾದ ಅಳುವಿನ ಧ್ವನಿಯೂ ಅವರಿಗೆ ತುಸು ಕೇಳಿಸಿತು. ಮೊದಲು ಏನೋ ಗಂಡ–ಹೆಂಡಿರ ಜಗಳವಿರಬಹುದೆಂದಂದುಕೊಂಡರು. ಆದರೆ ಮರುಕ್ಷಣದಲ್ಲೇ ಮೇಲೆ ಹೋಗಿ ಸೊಸೆಯನ್ನು ನೋಡಬೇಕೆಂದು ಮನಸ್ಸಾಯಿತು. ಅವರು ಒಂದೊಂದೇ ಹೆಜ್ಜೆ ಹಾಕುತ್ತ ಸದ್ದಿಲ್ಲದೆ ಮಹಡಿ ಮೆಟ್ಟಲುಗಳನ್ನು ಹತ್ತಿದರು. ಲಕ್ಷ್ಮಿ ಇನ್ನೂ ತಲೆತಗ್ಗಿಸಿಕೊಂಡೇ ಕುಳಿತಿದ್ದಳು. ಅವಳೀಗ ಅಳುತ್ತಿರಲಿಲ್ಲ. ಪತಿಯು ಹೊಡೆದ ಎರಡೇಟಿನಿಂದ ಅವಳ ಮನಸ್ಸು ನೋಯಲಿಲ್ಲ. ಆದರೆ ಅವನನ್ನು ದಾರಿಗೆ

ತರುವ ಬಗೆ ಹೇಗೆ ಎಂಬ ಚಿಂತೆ ಹತ್ತಿ, ದಿಕ್ಕುಕಾಣದೆ ಅವಳು ಅಶ್ರುವನ್ನು ಸುರಿಸಿದ್ದಳು. ಚಿಂತಾಸಾಗರದಲ್ಲಿ ಮುಳುಗಿದ್ದ ಅವಳು ಗುಂಡೂರಾಯರು ತನ್ನ ಕೊಠಡಿಯ ಬಾಗಿಲಿನಲ್ಲಿ ನಿಂತಿರುವುದನ್ನೂ ಸಹ ಗಮನಿಸಲಿಲ್ಲ. ಅವಳಿಗೀಗ ಪ್ರಪಂಚವೇ ಮರೆತುಹೋಗಿತ್ತು; ಆಕಾಶವೇ ಕಳಚಿಬಿದ್ದಂತಿತ್ತು. ಲಕ್ಷ್ಮಿ ಎಂಬ ಕೂಗಿನ ಶಬ್ದ ಕಿವಿಗೆ ಬೀಳುತ್ತಲೆ, ತಲೆಯೆತ್ತಿ ನೋಡಿ ಮಾವ ಎದುರಿಗೆ ನಿಂತಿದ್ದುದನ್ನು ಕಂಡು, ಬೇಗನೆದ್ದು ತನ್ನ ಕೆನ್ನೆಯ ಮೇಲೆ ಹರಿದಿದ್ದ ನೀರನ್ನು ಒರಸಿಕೊಂಡಳು. “ ಏಕೆ ಅತ್ತಿದ್ದೀಯೆ ? ” ಎಂದು ಅವರು ಪ್ರಶ್ನಿಸಿಯೇ ಬಿಟ್ಟರು. ಅವಳ ಎದೆ ಈಗ ಡಬ ಡಬ ಹೊಡೆದುಕೊಳ್ಳಲಾರಂಭಿಸಿತು. ಏನೂ ಇಲ್ಲವೆಂದವಳೆಂದರೂ ಅವಳ ಮುಖವೂ ಕಣ್ಣುಗಳೂ ಆಳ ವಾದ ವ್ಯಸನದಲ್ಲಿ ಅವಳು ಮುಳುಗಿದ್ದಾಳೆಂಬುದನ್ನು ತೋರಿಸಿ ಕೊಡುತಿದ್ದುವು. “ ಏನು ನಡೆಯಿತು ? ” ಎಂದು ಗುಂಡೂ ರಾಯರು ಮತ್ತೆ ಪ್ರಶ್ನಿಸಿದಾಗ, ಅವಳು ತಲೆಯನ್ನು ತಗ್ಗಿಸಿ ಅದೇ ‘ ಏನೂ ಇಲ್ಲ ’ವೆಂದಳು. ಈಗ ಗುಂಡೂರಾಯರು ಭರ ಭರ ಕೆಳಗಿಳಿದರು. ಅತ್ತೆ-ಮಾವಂದಿರು ಅಡಿಗೆ ಮನೆಯಲ್ಲಿ ಏನೋ ಮಾತಾಡಿದುದು ಅವಳಿಗೆ ಸರಿಯಾಗಿ ಕೇಳಿಸಲಿಲ್ಲ. ಆದರೆ ಫಲಿತಾಂಶ ಮಾತ್ರ ಐದಾರು ನಿಮಿಷಗಳಲ್ಲೇ ಕಾಣಿಸಿ ಕೊಂಡಿತು. ಶಾರದಮ್ಮನವರು ಕೆಳಗೆ ನಿಂತಲ್ಲಿಂದಲೇ “ ಲಕ್ಷ್ಮೀ, ಲಕ್ಷ್ಮೀ,” ಎಂದು ಕೂಗಿಕೊಂಡರು. ಲಕ್ಷ್ಮಿಗೆ ಈಗ ಧಿಕ್ ಎಂದಿತು. ಏನು ಎಂದು ಕೇಳುವುದಕ್ಕೆ ಆಗದೆ ಬಾಯಿಕಟ್ಟಿ ಕೊಂಡಿತು. ಈಗ ಶಾರದಮ್ಮನವರು ಅಧಿಕಾರವಾಣಿಯಲ್ಲಿ ‘ಲಕ್ಷ್ಮೀ’ ಎಂದು ಮತ್ತೊಮ್ಮೆ ಕೂಗಿದಾಗ, “ ಇದೋ ಬರುತ್ತೇ ನೆ ”ಂದು ಪ್ರತ್ಯುತ್ತರಕೊಟ್ಟು, ಅವಳು ಕೆಳಗಿಳಿಯಲಾರಂಭಿ ಸಿದಳು. “ ಮೆಲ್ಲಗೆ ಇಳಿಯಮ್ಮ ” ಎಂದು ಶಾರದಮ್ಮನವ ರಂದಾಗ, ಈಗ ಅವರ ವಾಣಿಯಲ್ಲಿ ಶಾಂತತೆ ಕರುಣತೆ ತುಂಬಿ

ದ್ದವು. ಅವಳ ತೋಳನ್ನು ಹಿಡಿದುಕೊಂಡು, ವೃಂದಾವನದ ಬಲಭಾಗದ ಜಗುಲಿಯಲ್ಲಿ ಕುಳ್ಳಿರಿಸಿಕೊಂಡು, ಶಾರದಮ್ಮನವರು "ಏನು ನಡೆಯಿತೇ? ಲಕ್ಷ್ಮಿ, ಏಕೆ ಅಳುತಿದ್ದೆ? ಆಗೋ ಹೊಡೆದ ಏಟು, ಬಾಸುಂಡೆ ಎದ್ದಿದೆ." ಎಂದು ಪ್ರಶ್ನೆಯ ಸುರಿಮಳೆಗೈದರು. ಲಕ್ಷ್ಮಿ ಮಾತಾಡದೆ ಮೌನದಿಂದಿದ್ದಳು. ಶಾರದಮ್ಮನವರು ಸೊಸೆಯ ತಲೆ ಸವರುತ್ತ "ನೋಡಮ್ಮ, ನಮ್ಮ ಜೀವವಿರುವವರೆಗೆ ನಿನ್ನ ಮೈಮೇಲಿನದೊಂದು ರೋಮ ಅಲ್ಲಾಡಿದರೂ ನಮಗೆ ತುಂಬ ಸಂಕಟವಾಗುತ್ತದೆ. ನಿನ್ನ ದೊಂದು ಕಂಬನಿ ಕೆಳಗೆ ಬಿದ್ದರೂ ನಮ್ಮ ದೇಹವೆಲ್ಲ ಸುಡ ಲಾರಂಭಿಸುತ್ತದೆ. ನನ್ನ ಕೂಡ ಹೇಳುವುದಕ್ಕೇನೆ ತಾಯಿ, ನಿನಗೆ ಸಂಕೋಚ," ಎಂದರು. ಲಕ್ಷ್ಮಿಯು ತನ್ನ ಪತಿಯು ನಡೆದುಕೊಳ್ಳುವ ವಿಧಾನವನ್ನು ಈಗ ಅತ್ತೆಗೆ, ಚಾಚೂ ತಪ್ಪದೆ ವಿವರಿಸಿ ಹೇಳಿದಳು. ಶಾರದಮ್ಮನವರ ಕಣ್ಣಿನಲ್ಲೂ ಸಹ ಒಂದೆ ರಡು ಹನಿಗಳು ತಟಕ್ಕನೆ ಬಿದ್ದುವು. ಪಾಪ! ಅವರೇನು ಮಾಡುವರು? ಅವರೂ ಅಬಲೆಯಲ್ಲವೆ? ಗುಂಡೂರಾಯರು ಮಾತ್ರ ಹಾಲಿನಲ್ಲಿ ಶತಪಥ ತಿರುಗಲಾರಂಭಿಸಿದರು. ಪತ್ನಿ ಮನೆಗೆ ಬಂದ ಮೇಲೆ ರಾಘು ರಜೆಯ ದಿನಗಳಲ್ಲಿ, ಮನೆಯಲ್ಲೀ ಊಟ ತೀರಿಸುತ್ತಿದ್ದನು. ಈ ದಿನ ಮಧ್ಯಾಹ್ನದ ಊಟಕ್ಕೆ ಅವನು ಬರಲಿಲ್ಲ. ಅವನು ಮನೆಗೆ ಹಿಂದಿರುಗುವ ವೇಳೆಗಾಗಲೇ, ಗುಂಡೂರಾಯರ ಮನೆಯಲ್ಲಿ ಬಲವಾದ ಕಾರ್ಮೋಡ ಕವಿದಿತ್ತು. ಫಳಾರ್, ಫಳಾರ್ ಎಂಬ ಮಿಂಚಿನೊಂದಿಗೆ, ಧಡಾರ್, ಧಡಾರ್ ಎಂದು ಗುಡುಗು ಗರ್ಜನೆಮಾಡುತ್ತ, ಇನ್ನೇನು ಮನೆ ಪ್ರಳಯ ವಾಗುವುದೋ ಎನ್ನುವ ಸ್ಥಿತಿಯಲ್ಲಿತ್ತು. ರಾಘು ಮನೆಗೆ ಕಾಲಿಟ್ಟ ಒಡನೆಯೇ ಗುಂಡೂರಾಯರ ಮೊದಲ ಪ್ರಶ್ನೆ "ನೀನೇನು ಮೃಗವೋ, ಮನುಷ್ಯನೊ?" ಎಂದು ಶಾರದಮ್ಮ ನವರು ಆಲಾಪನೆ ಮಾಡಿದರು. "ಅಲ್ಲ ಕಣೋ, ತುಂಬ

ಗರ್ಭಿಣಿ. ಹೊಡೆಯೋಣವೆಂದರೇನು? ಹೀಗುಂಟೆ, ಇದೂ ನಮ್ಮ ಗ್ರಹಚಾರ" ಎಂದರು. ಗುಂಡೂರಾಯರಿಗೆ ಕೋಪ ಬಂದರೆ ಏನೂ ಗೊತ್ತಾಗುವುದೇ ಇಲ್ಲ. ತಮ್ಮನ್ನು ತಾವೇ ಮರೆಯುವ ವ್ಯಕ್ತಿ ಅವರು. "ಕುಡುಕ ಮುಂಡೇದು, ಬುದ್ಧಿ ಇದ್ದರೆ ತಾನೆ. ಈ ದರಿದ್ರ ನನ್ನ ಹೊಟ್ಟೆಯಲ್ಲಿ ಎಲ್ಲಿ ಹುಟ್ಟಿತೋ ಕಾಣೆ. ಮಕ್ಕಳೇ ನನಗಿಲ್ಲದಿದ್ದಲ್ಲಿ ನಾನೂ ಕುಟ್ಟಪ್ಪನ ಹಾಗೆ ಸ್ವೀಕಾರ ತೆಗೆದುಕೊಳ್ಳುತಲಿದ್ದೆ" ಎಂದು, ಇನ್ನೂ ಏನೇನೊ ಅನ್ನಲು ಬಾಯಿ ತೆರೆದಾಗ, ಶಾರದಮ್ಮನವರು "ಸಾಕು ಸಾಕು, ಬಾಯಿ ಮುಚ್ಚಿ, ಮದುವೆಯಾದ ಮಗನನ್ನು ಹೀಗೂ ಬೈಯುವುದುಂಟೆ? ನಾಚಿಕೆಗೇಡು" ಎಂದು ಆಕ್ಷೇಪಿಸಿದರು. ಗುಂಡೂರಾಯರು ದುರದುರನೆ ನುಂಗಿಬಿಡುವಂತೆ ಪತ್ನಿಯನ್ನು ನೋಡಿದರು. ಅವರ ನೋಟದ ತೀಕ್ಷ್ಣತೆಯನ್ನು ಕಂಡು, ಬಾಳ್ವಿಕೆಯೆಲ್ಲವನ್ನೂ ಪತಿಯ ಕೂಡಲೇ ಸವೆಸಿದ ಶಾರದಮ್ಮನವರೇ ಸ್ವಲ್ಪ ಬೆಚ್ಚಿದರು. ವಿವಾಹವಾದ ಮೇಲೆ ಮಗನನ್ನು ಅವರು ಇದೇ ತಾನೆ ಪ್ರಪ್ರಥಮವಾಗಿ "ಮುಂಡೇದು" ಎಂದು ಬೈದರು. ತನ್ನ ಪತಿಯನ್ನು ಕುರಿತು ಮಾವ ಬೈಯುತಿದ್ದಾಗ, ನಿಂದೆಯ ಮಳೆಯನ್ನು ಸುರಿಸುತ್ತಿದ್ದಾಗ, ಅದನ್ನು ಸಹಿಸದೆ ಲಕ್ಷ್ಮಿ, ಬೇರೊಂದೂ ತೋಚದೆ, ತನ್ನ ಎರಡೂ ಕಿವಿಗಳನ್ನು ಭದ್ರವಾಗಿ ಮುಚ್ಚಿಕೊಂಡಳು.

## ೨೪

ಇಷ್ಟು ರಾದ್ಧಾಂತ ನಡೆಯುತ್ತದೆಂದು ಲಕ್ಷ್ಮಿ ಎಣಿಸಿರಲಿಲ್ಲ. ತನ್ನ ಪತಿಗಾದ ಅವಮಾನ ತನ್ನಿಂದಲೇ ಎಂದು ಅವಳ ಮನಸ್ಸು ಅನ್ನಹತ್ತಿತು. ಇಷ್ಟುದಿನವೂ ತನ್ನ ಪತಿಯ ರಹಸ್ಯವನ್ನು ಅವಳು ಹೊರಗೆಡವಿರಲಿಲ್ಲ. ಆದರೀಗ ಅದು ಬಯಲಾ

ಯಿತು. ರಾತ್ರಿ ಎಂಟು ಘಂಟೆ ಹೊಡೆಯಿತು. ಮನೆಯಲ್ಲಿ ಮಳೆಯೂ ನಿಂತಿತ್ತು. ಅಡಿಗೆ ಈಗ ತಯಾರಾಗಿದ್ದುದರಿಂದ ಶಾರದಮ್ಮನವರು "ರಾಘು, ರಾಘೂ, ಬಾ ಊಟಮಾಡಿಕೊಂಡು ಹೋಗಿ ಮಲಗು" ಎಂದು ಕೂಗಿದರು. ರಾಘು ಯಾವ ಮಾತನ್ನೂ ಆಡದೆ ಮೇಲೆ ಮಲಗಿದ್ದನು. ತಾಯಿ ಕೂಗಿದುದಕ್ಕೆ ಏನು ಎಂದು ಒಂದು ಪ್ರತ್ಯುತ್ತರವನ್ನೂ ಸಹ ಅವನು ಕೊಡಲಿಲ್ಲ. ಗುಂಡೂರಾಯರೊಬ್ಬರೇ ಊಟಕ್ಕೆ ಕುಳಿತರು. ಅವರು ಊಟಮಾಡಲು ಕುಳಿತಿದ್ದರೇ ಹೊರತು, ಅವರಿಗೆ ತಮ್ಮ ಮೈಮೇಲಿನ ಪ್ರಜ್ಞೆ ಇದ್ದಿಲ್ಲವೆಂದೇ ಹೇಳಬೇಕು. ಕೋಪದಿಂದ ಅನ್ನವನ್ನು ಹಿಚುಕಿ, ಹಲ್ಲುಕಡಿಯುತ್ತ, ಅವರು ತುತ್ತು ನುಂಗುತಿದ್ದರು. ' ಸಾರು ಬೇಕೆ, ಮಜ್ಜಿಗೆ ಸಾಕೆ? ಎಂದು ಪತ್ನಿ ಯಾವುದನ್ನು ಕೇಳಿದರೂ, ಎಲ್ಲದಕ್ಕೂ ಹುಂ ಹುಂ ಎನ್ನುತ್ತಿದ್ದರೇ ಹೊರತು, ತಾನೀಗ ಊಟ ಮಾಡುತಿದ್ದೇನೆ, ತನ್ನ ಎಲೆಯಲ್ಲಿ ಅನ್ನವಿದೆ, ಬಡಿಸಲು ಪತ್ನಿ ಮುಂದೆ ಕುಳಿತಿದ್ದಾಳೆ, ಎಂಬ ಅರಿವೇ ಅವರಿಗೆ ಉಂಟಾಗಲಿಲ್ಲ. ಅವರ ಕೋಪ ಅಂಥದು ; ಶಾರದಮ್ಮನವರು ಮತ್ತೊಮ್ಮೆ ರಾಘು ಎಂದು ಕೂಗಿಕೊಂಡರು ; ಆದರವನು ಮಾತಾಡಲೇ ಇಲ್ಲ. ಲಕ್ಷ್ಮಿ ಈಗ ತಾನೆ ಹೋಗಿ ಕರೆಯುವುದಾಗಿ ಮೆಲ್ಲಗೆ ಮೇಲೆ ಹೋದಳು. ತನ್ನ ಕೊಠಡಿಯಲ್ಲಿ ಕತ್ತಲು ಆವರಿಸಿತ್ತು. ಸ್ವಲ್ಪ ಮುಚ್ಚಿದ್ದ ಬಾಗಿಲನ್ನು ತೆಗೆದು ಅವಳು " ಸ್ವಿಚ್ " ಹಾಕಿದಳು. ರಾಘು ಮಲಗಿದ್ದವನು ದುರುಗುಟ್ಟಿಕೊಂಡು ಒಂದು ತಡವೆ ಅವಳನ್ನು ನೋಡಿ, ಬಳಿಕ ಶಾಲು ಎಳೆದು ತುಂಬ ಹೊದೆದುಕೊಂಡನು. ಸಣ್ಣದಾದ ಧ್ವನಿಯಲ್ಲಿ ಲಕ್ಷ್ಮಿ " ನನ್ನದೇನು ತಪ್ಪಿದ್ದರೂ ಕ್ಷಮಿಸಿ, ಈಗ ಊಟಮಾಡಲು ಬನ್ನಿ " ಎಂದು ಮಂಚದ ಮೇಲೆ ಕೈಯಿರಿಸಿಕೊಂಡು ಕೆಳಗೆ ಕುಳಿತಳು. ಲಕ್ಷ್ಮಿ ನಿರಪರಾಧಿನಿ ಎಂದು ರಾಘು ತಿಳಿಯಲಿಲ್ಲ. ಮೇಲಾಗಿ ಅವನಿಗೆ ರೋಷವೇ ಹೆಚ್ಚಿತು.

ತನ್ನ ವಿಷಯವನ್ನು ಅತ್ತೆಮಾವಂದಿರಲ್ಲಿ ಅವಳು ಬೇಕು ಎಂತಲೇ ತಿಳಿಸಿರುವುದಾಗಿ ಅವನು ಎಣಿಸಿಕೊಂಡನು. ಅಬ್ಬಬ್ಬಾ! ಒಂದು ಹೆಣ್ಣಿಗೆ ಇಷ್ಟು ಸಾಹಸವೇ? ಇರಲಿ, ಇವಳಿಗೆ ತಕ್ಕ ಶಿಕ್ಷೆ ಮಾಡುತ್ತೇನೆ. ಇನ್ನು ಮುಂದೆ ಇವಳ ಮುಖದರ್ಶನ ವನ್ನೇ ಮಾಡುವುದಿಲ್ಲ, ಏನು ಮಾಡುತ್ತಾಳೋ ನೋಡೋಣ ಅಂದುಕೊಂಡನು. ಇನ್ನು ಮುಂದೆ ಸರೋಜಳ ಮನೆಯಲ್ಲೇ ಉಳಿಯುವುದೆಂದೂ, ಮನೆಗೆ ತಿರುಗಿ ಬರುವುದೇಯಿಲ್ಲವೆಂದೂ, ಮನಸ್ಸಿನಲ್ಲಂದುಕೊಂಡನು. ಪತ್ನಿಯ ಮುಖದರ್ಶನ ಇನ್ನು ಮಾಡುವುದೇ ಇಲ್ಲ, ಅವಳಿಲ್ಲಾದರೂ ಹಾಳಾಗಲೆಂದುಕೊಂಡು ಮುಖದ ತುಂಬ ಶಾಲು ಎಳೆದುಕೊಂಡನು. ಲಕ್ಷ್ಮಿ ಮತ್ತೆ ಅವನನ್ನು ಕರೆಯುವ ಸಾಹಸ ಮಾಡಲಿಲ್ಲ. ಖಿನ್ನವದನಳಾಗಿ ಅವಳು ಕುಳಿತಿದ್ದಳು. ಕೆಳಗೆ ಶಾರದಮ್ಮನವರು, ಈಗ, ರಾಘು ಎಂದು ಮತ್ತೊಮ್ಮೆ ಕೂಗಿದರು. ಅವನು ಪ್ರತ್ಯುತ್ತರ ಕೊಟ್ಟರೆ ತಾನೆ? "ಲಕ್ಷ್ಮಿ, ಇಲ್ಲಿ ಬಾರಮ್ಮ" ಎಂದು ಕೂಗಿ, ಸೊಸೆ ಕೆಳಗಿಳಿಯುವವರೆಗೂ ಕಾದಿದ್ದು ಈಗ ತಾವೇ ಮೇಲೆ ಹೋದರು. ಮಗನ ಶರೀರವನ್ನು ಹಿಡಿದು ಅಲುಗಾಡಿಸಿ "ಎದ್ದೇಳು ರಾಘು. ಇದೆಲ್ಲಾ ಏನು ಚೆನ್ನೇ ಹೇಳು. ಕೈಹಿಡಿದ ಹೆಂಡತಿಯನ್ನು ಹೊಟ್ಟೆ ಉರಿಸಬಾರದು. ನೀನೀಗ ಊಟಮಾಡದಿದ್ದಲ್ಲಿ ಅವಳೂ ಕೂಡ ಒಂದು ತುತ್ತು ತಿನ್ನಲಾರಳು. ಯಾರ ಮೇಲೆ ನಿನಗಿಷ್ಟು ಕೋಪ? ಅವರಿಗಂತೂ ಒಂದೂ ಗೊತ್ತಾಗುವುದೇ ಇಲ್ಲ. ನಿನ್ನ ಮೇಲೇನು ಅವರಿಗೆ ಹೊಟ್ಟೆಕಿಚ್ಚೇ ಹೇಳು. ಮುಂದೆ ಬಾಳುವವರು ಚೆನ್ನಾಗಿ ಬಾಳಬೇಕು ಎಂದು ಆಸೆ ಪಡುತ್ತಾರೆ ಅಷ್ಟೆ. ಇದೇನು ತಪ್ಪೇ, ಏಳು ಏಳು" ಎಂದವನನ್ನು ಎಬ್ಬಿಸಿ ದರು. ಈಗ ಸುಮ್ಮನೆ ರಂಪಮಾಡಿದರೆ, ಮಾತಿಗೆ ಮಾತು ಬೆಳೆಯುವುದೆಂದು ಅವನು ಎದ್ದು ಕೆಳಗಿಳಿದು ಬಂದನು. ಲಕ್ಷ್ಮಿಯೇ ಪತಿಗೆ ಊಟಕ್ಕೆ ಬಡಿಸಿದಳು. ಒಂದು ಮಾತೂ

ಇಲ್ಲದೆ, ಬೇಕೆ ಸಾಕೆ ಎಂದು ಕೇಳಿದರೆ ಒಂದಕ್ಕೂ ಉತ್ತರ ಕೊಡದೆ, ಮೌನವಾಗಿಯೇ ಅವನು ಊಟ ಮುಗಿಸಿ ಕೈತೊಳೆದ ಮೇಲೆ ಹೋಗಿ ಮಲಗಿದನು. ಶಾರದಮ್ಮನವರು ಸೊಸೆಯನ್ನು ಕುಳ್ಳಿರಿಸಿಕೊಂಡು ತಾವೂ ಊಟಕ್ಕೆ ಕುಳಿತುಕೊಂಡರು. "ರಾತ್ರಿ ಕಳೆದ ಮೇಲೆ ಬೆಳಗಾಗದೆ ಇರುತ್ತದೆಯೇ ಲಕ್ಷ್ಮಿ. ನಿನಗೀಗ ಕತ್ತಲೇ ಕಾಲ. ಭಯಪಡಬೇಡಮ್ಮ, ಎಲ್ಲ ಮುಂದೆ ಸರಿಹೋಗುತ್ತದೆ" ಎಂದು ಊಟದ ಮಧ್ಯೆ ಸೊಸೆಯನ್ನು ಸಮಾಧಾನಪಡಿಸಿದರು. ಲಕ್ಷ್ಮಿಗೆ ಈಗ ಊಟ ಬೇಕಾಗಿರಲಿಲ್ಲ. ಅತ್ತೆಯ ಮನಸ್ಸನ್ನು ನೋಯಿಸಬಾರದೆಂದು ಅವಳು ಬೇಕೂ ಬೇಡದ ಹಾಗೆ ನಾಲ್ಕು ತುತ್ತು ಒಳತಳ್ಳಿದಳು. ಸಣ್ಣದಾದ ನಿಟ್ಟುಸಿರೊಂದನ್ನು ಬಿಟ್ಟು ಈಗವಳು ಮೇಲೆ ಹತ್ತಿ, ತನ್ನ ಕೊಠಡಿಯೊಳಗೆ ಪ್ರವೇಶಿಸಿದಳು. ಲ್ಯಾಂಪ್ ಹಚ್ಚಿ ಸಣ್ಣದು ಮಾಡಿ ಮೇಜದ ಮೇಲಿರಿಸಿ, ಸ್ವಿಚ್ ಆರಿಸಿದಳು. ಹೊದಿಕೆಯನ್ನು ಎಳೆದುಕೊಂಡು ಪತಿಗೆ ಸೇರಿಕೊಂಡೇ ಮಲಗಿದಳು. ಪತ್ನಿಯ ದೇಹವು ತನ್ನ ದೇಹಕ್ಕೆ ತಗಲಿ ಸ್ಪರ್ಶವಾಗುತ್ತಲೇ ರಾಘು, ಒಂದಡಿ ಒತ್ತರಿಸಿ ದೂರಸಂದು ಎಡಭಾಗಕ್ಕೆ ಹೊರಳಿಕೊಂಡನು. ಈಗ ನಿಶ್ಶಬ್ದ, ಯಾವ ಮಾತೂ ಇಲ್ಲ. ಆಚೆ ರಸ್ತೆಯಲ್ಲಿ ಮಾತ್ರ, ಜಟ್ಕಾದವನು ಹೈಹೈ ಎಂದು ಗಾಡಿ ಓಡಿಸುವ ಶಬ್ದವೂ, ಮೋಟಾರ್ ಹಾರನ್ನಿನ ಶಬ್ದವೂ ಕೇಳುತಿತ್ತು. ದೂರದಲ್ಲಿನ ರೇಡಿಯೋ ಶಬ್ದವೂ ಸಹ ತುಸು ಕೇಳುತ್ತಲಿತ್ತು. ಆಗ ಬೆಳದಿಂಗಳಿನ ಕಾಲ. ಲಕ್ಷ್ಮಿ ಮಲಗಿದ್ದಲ್ಲಿಂದಲೇ ಕಿಟಕಿಯ ಕಡೆ ಕಣ್ಣು ಹೊರಳಿಸಿದಳು. ಮಹಡಿಯ ವರಾಂಡಾದಲ್ಲೂ, ಅಡ್ಡ ಗೋಡೆಯ ಮೇಲೂ ಬೆಳದಿಂಗಳು ಚೆಲ್ಲಿ, ಕಾಮನ ಹುಣ್ಣಿಮೆಯನ್ನಾಗಿ ಮಾಡಿತ್ತು. ಕಿಟಕಿಯಿಂದ ತಂಗಾಳಿ ತೆಳ್ಳನೆ ಬೀಸುತಿದ್ದರೂ ಲಕ್ಷ್ಮಿಗೆ ಅದು ಹಿತಕರವಾಗಿರದೆ, ಉರಿಗಾಳಿ ಬೀಸಿದಂತಿತ್ತು. ಪಶ್ಚಿಮದ ದಿಗಂತ ಅವಳು ಮಲಗಿದ್ದಲ್ಲಿಂದಲೇ ತುಸು

ಕಾಣುತಿದ್ದುದರಿಂದ ಮಿನು ಮಿನುಗುತಿದ್ದ ಅನೇಕ ನಕ್ಷತ್ರಗಳು ಅವಳಿಗೆ ಕಾಣಿಸಿಕೊಂಡುವು. ಅವೆಲ್ಲ ತನ್ನನ್ನು ಅಣಕಮಾಡುತ್ತವೆಂದು ಲಕ್ಷ್ಮಿ ಭಾವಿಸಿಕೊಂಡಳು. ತನ್ನದೇನೂ ತಪ್ಪಿಲ್ಲವೆಂದು ನಡೆದ ಸಂಗತಿಯನ್ನು ಪತಿಗೆ ವಿವರಿಸಿ ಹೇಳಬೇಕೆಂದು ಅವಳಿಗೆ ಆಸೆ. ಒಂದೆರಡು ತಡವೆ ಕೆಮ್ಮಿ ಗಂಟಲು ಸರಿಮಾಡಿಕೊಂಡರೂ ಅವಳಿಂದ ಸಾಧ್ಯವಾಗಲಿಲ್ಲ. ಕೊನೆಗೆ ಧೈರ್ಯಮಾಡಿ "ನನ್ನ ಮೇಲೆ ಕೋಪವೇ?" ಎಂದು ಮೆಲುವನಿಯಲ್ಲಿ ಕೇಳಿಯೇ ಬಿಟ್ಟಳು. "ಮಾತಾಡದೆ ಸುಮ್ಮನೆ ಮಲಗುತ್ತೀಯೋ ಹೇಗೆ. ನಿನ್ನ ಪುರಾಣವೊಂದೂ ನನಗೀಗ ಬೇಕಾಗಿಲ್ಲ. ಸದ್ಯ ನೀನೀಗ ಬಾಯಿ ಮುಚ್ಚಿದರೆ ಸಾಕು" ಎಂದವನಂದನು. ಕ್ಷಣಕಾಲ ಲಕ್ಷ್ಮಿ ಸುಮ್ಮನಿದ್ದು ತನ್ನದೇನೂ ತಪ್ಪಿಲ್ಲವೆಂದೂ, ಬೆಳಗ್ಗೆ ಆ ಸಂಭವ ನಡೆದಾಗ, ಮಾವನವರೇ ತನ್ನನ್ನು ಬಂದು ಕೇಳಿದಾಗ, ತಾನು ಏನೊಂದು ಪ್ರತ್ಯುತ್ತರವನ್ನು ಸಹ ಕೊಡಲಿಲ್ಲವೆಂದೂ, ಅತ್ತೆ ಹಿಂಸೆಮಾಡಿ ವಿಷಯಗಳನ್ನು ತಿಳಿದುಕೊಂಡರೆಂದೂ, ಇನ್ನೂ ಏನೇನೋ ಹೇಳಿದಳು. "ನಿಮಗಿಂತ ವಯಸ್ಸಿನಲ್ಲಿ, ಬುದ್ಧಿಯಲ್ಲಿ, ನಾನು ಸಣ್ಣವಳು; ತಿಳಿಯದೇ ಏನಾದರೂ ಅಪರಾಧ ಮಾಡಿರಬಹುದು. ಅಂತಹದಿದ್ದಲ್ಲಿ ನನ್ನನ್ನು ಕ್ಷಮಿಸಿ" ಎಂದು ಬೇಡಿಕೊಂಡಳು. ರಾಘು ಯಾವ ಪ್ರತ್ಯುತ್ತರವನ್ನೂ ಕೊಡಲಿಲ್ಲ. ಲಕ್ಷ್ಮಿಯ ಕ್ಷಮಾ ಯಾಚನೆ, ಕಣ್ಣೀರು ಇವೆಲ್ಲ ಅವನಿಗೆ, ಬಂಡೆಯ ಮೇಲೆ ನೀರ್ಗರೆದಂತೆಯೇ ಆಯಿತು.

## ೨೪

ಈ ಸಂಭವ ನಡೆದನಂತರ ಎಂಟು ದಿನಗಳುರುಳಿ ಹೋದುವು. ರಾಘು ಮನೆಗೆ ಕಾಲಿರಿಸಲೇ ಇಲ್ಲ. ಲಕ್ಷ್ಮಿ ಸಂಜೆಯಾಗುವವರೆಗೂ ಕಾದಿದ್ದು—ಕೋಪ ಇನ್ನೂ ತಣಿಯದೇ ಇರು

ತ್ತಿದೆಯೇ, ಈ ದಿನ ಬರಬಹುದು, ಈ ದಿನ—ಎಂದು ಪತಿಯ ನಿರೀಕ್ಷಣೆಯಲ್ಲೇ ಕಾಲ ಕಳೆಯುತ್ತಿದ್ದಳು. ಮನೆಯಲ್ಲವಳಿಗೆ ಯಾವ ಕುಂದು ಕೊರತೆಯೂ ಇರಲಿಲ್ಲ. ಅತ್ತೆ ಮಾವಂದಿರು ಅವಳನ್ನು ವಿಶೇಷ ಪ್ರೀತ್ಯಾದರಗಳಿಂದ ಕಾಣುತ್ತಿದ್ದರು. ಆದರೆ ಸತಿಗೆ ಇರಬೇಕಾದ ಮುಖ್ಯ ಆಭರಣವಾವುದು? ಆ ರತ್ನ ಈಗ ಸಡಿಲವಾಗಿ, ತಾನು ಧರಿಸಲು ಅಶಕ್ತಳಾಗಿದ್ದೇನಲ್ಲಾ ಎಂದವಳು ಕೊರಗುತ್ತಿದ್ದಳು. ಹಗಲನ್ನು ಅತಿ ಪ್ರಯಾಸದಿಂದ ತಳ್ಳು ತ್ತಿದ್ದಳು. ಸಂಜೆಯಾಯಿತೆಂಪರೆ ಅವಳಿಗೆ ಭಯ ಆವರಿಸು ತ್ತಿತ್ತು. ಇನ್ನೀ ರಾತ್ರಿ ಹೇಗೆ ಕಾಲ ತಳ್ಳುವುದೋ ಎಂದು ದುಃಖಿಸುತ್ತಿದ್ದಳು. ಒಂದೊಂದು ರಾತ್ರಿಯೂ ಒಂದೊಂದು ಯುಗವಾಗಿ ಅವಳಿಗೆ ನಿದ್ದೆ ಹತ್ತುತ್ತಿರಲಿಲ್ಲ. ಅವೇಳೆಯಲ್ಲೆ ಅನೇಕ ದಿನ ಅವನು ಬರುವುದು ವಾಡಿಕೆಯಾಗಿದ್ದುದರಿಂದ ಬರ ಬಹುದೇನೊ ಎಂದು ಆಸೆಯಿಂದಿದ್ದು, ಕೊನೆಗೆ ನಿದ್ರಾದೇವಿ ಯನ್ನು ಆಲಂಗಿಸಿಕೊಳ್ಳುತ್ತಿದ್ದಳು. ಬೆಳಗದ್ದ ಒಡನೆಯೇ ಪತಿಯ ಚಿತ್ರಪಟಕ್ಕೆ ಮಾಲೆಹಾಕಿ "ಸ್ವಾಮಿ, ನನ್ನ ಮೇಲೇಕಿಷ್ಟು ನಿರ್ದಯ. ನಿಮ್ಮ ಮನಸೇನು ಕಲ್ಲೇ, ನನ್ನನ್ನು ಶೋಧಿಸುತ್ತಿದ್ದೀ ರೇನೋ" ಎಂದು ಪ್ರಾರ್ಥಿಸುತ್ತಿದ್ದಳು. ಅವಳ ಕಣ್ಣಿನಿಂದ ನೀರು ಸುರಿದು ಧಾರಾಕಾರವಾಗಿ ಹರಿಯುತ್ತಿತ್ತು. "ದೇವ, ನನ್ನ ಪ್ರಾಣಪಕ್ಷಿ ಹಾರಿಹೋಗಿ ಮತ್ತೊಂದು ಮರದಲ್ಲಿ ಕುಳಿತು ಕೊಳ್ಳಲು ಪ್ರಯತ್ನಿಸುತ್ತಿದೆ. ಅದನ್ನು ನನ್ನ ಬಳಿ ಸೇರಿಸು. ನಿನಗೇನು ಕಣ್ಣಿಲ್ಲವೇ! ನೀನೂ ಕಠೋರನೇ!" ಎಂದು ದೈವ ವನ್ನೂ ಪ್ರಾರ್ಥಿಸುತ್ತಿದ್ದಳು. ತನ್ನ ಅತ್ತೆ-ಮಾವಂದಿರು ಇನ್ನೆಲ್ಲಿ ಕಂಡುಕೊಳ್ಳುವರೋಯೆಂದು ತನ್ನ ಕಂಬನಿಗಳನ್ನು ಬೇಗನೆ ಒರಸಿಕೊಳ್ಳುತ್ತಿದ್ದಳು. ಆಹಾ! ತನ್ನ ಅತ್ತೆ-ಮಾವಂದಿರು ಎಂಥ ಗುಣವುಳ್ಳವರು: ತಾಯಿ ತಂದೆಗಳಿಗೆ ಸಮಾನರಾಗಲ್ಲವೇ ಇದ್ದಾರೆ. ಸ್ವಾಭಾವಿಕವಾಗಿ ಲೋಕ ರೂಢಿಯಂತೆ, ಅತ್ತೆಕಾಟ,

ಮಾನನಕಾಟ, ಎಂದಿರಬೇಕು. ಆ ಕಾಟ ಯಾವುದೂ ಇಲ್ಲ. ಆದರೆ ಈಗ ತನಗೆ? ಒಂದಲ್ಲದಿದ್ದರೆ ಒಂದು ಕೊರತೆಯಿರ ಬೇಕೇನೊ ಎಂದು ಮನಸ್ಸಿನಲ್ಲಿ ಯೋಚಿಸುತಿದ್ದಳು. ಇಷ್ಟು ನಡೆಯಿತೆಂದು ಗುಂಡೂರಾಯರು ಕಂಪೆನಿಗೆ ಹೋಗದೆ ಬಿಡುತ್ತಿರ ಲಿಲ್ಲ. ಮನೆಗೇಕೆ ಬರುವುದಿಲ್ಲವೆಂದು ಅವರು ಮಗನನ್ನು ಕೇಳು ತಿದ್ದರು. ಅವನು ಮಾತಾಡಿಸದಿದ್ದರೂ ತಾವಾಗಿಯೇ ಮಾತು ಕೊಡುತಿದ್ದರು. ಅವರಿಗೇನು ಅವನ ಮೇಲೆ ದ್ವೇಷವೇ? ಕೆಲವು ವೇಳೆ ಅವನು ಪ್ರತ್ಯುತ್ತರವನ್ನೇ ಕೊಡುತ್ತಿರಲಿಲ್ಲ. ಬಹಳ ನಿರ್ಬಂಧ ಮಾಡಿದಾಗ ಈ ದಿನ ಬರುತ್ತೇನೆ ಎನ್ನುತಿದ್ದನು. ಆದರೆ ಮನೆಗೆ ಬರುತ್ತಲೇ ಇರಲಿಲ್ಲ. ಕುಟ್ಟಪ್ಪ ವಾರಕ್ಕೆ ನಾಲ್ಕು ತಡವೆಯಾದರೂ ಗುಂಡೂರಾಯರ ಮನೆಗೆ ಬಾರದೆಯಿರುತ್ತಿರ ಲಿಲ್ಲ. ಲಕ್ಷ್ಮಿಯ ಕೂಡ ಏನೇನಾದರೂ ಮಾತುಕೊಟ್ಟು ಅವಳನ್ನು ನಗಿಸಿ ಹೋಗುವುದು ಅವನಿಗೆ ವಾಡಿಕೆಯಾಗಿದ್ದಿತು. ಈಗ ಸಾಮಾನ್ಯವಾಗಿ ಎರಡು ತಿಂಗಳುಗಳಾದರೂ ಲಕ್ಷ್ಮಿಯ ಮುಖದಲ್ಲಿ ಉತ್ಸಾಹದ ಅಲೆ ಏಳುತಿರಲಿಲ್ಲ. ಅವಳ ನಗುವಿನಲ್ಲಿ ಮೊದಲಿನ ನಾದ ಇದ್ದಿರಲಿಲ್ಲ. ನಿನಗೇನು ಚಿಂತೆ ಎಂದು ಕೇಳುವುದಕ್ಕಾಗುತ್ತದೆಯೇ? ಮೊದಲಿನಂತೆ ಅವಳು ಈಗೇನು ಹುಡುಗಿಯೇ? ಏನೋ ಎಂದೆಂದುಕೊಂಡು ಸುಮ್ಮನಿದ್ದನು. ಆದರೆ ಈಗ ಎಂಟು ದಿನಗಳಿಂದ ಅವಳ ಪರಿಸ್ಥಿತಿ ತೀರ ವಿಕಾರ ಗೊಂಡಿದ್ದಿತು. ಪ್ರಯತ್ನಪಟ್ಟು ನಕ್ಕರೂ ಅವಳಿಂದ ನಗುವುದ ಕ್ಕಾಗುತ್ತಿರಲಿಲ್ಲ. ದುಃಖ, ಚಿಂತೆ ಅವಳನ್ನು ಆವರಿಸಿ ಯಾವ ಮಾತನಾಡುವುದಕ್ಕೂ ಅವಳಿಂದ ಸಾಧ್ಯವಾಗುತ್ತಿರಲಿಲ್ಲ. ಕಾವೇರಿ ಪ್ರವಾಹದಂತೆ ಆ ರಭಸದ ಕಣ್ಣೀರು ಕೆನ್ನೆಯಿಂದ ಹರಿ ದೋಡಿ ಬಂದು, ಜೋಗ್‌ನಲ್ಲಿ ಧುಮುಕುವಂತೆ ಕೆಳಕ್ಕೆ ಧುಮುಕಿ, ಸೀರೆ ಕುಪ್ಪಸವೆಲ್ಲ ನೆನೆದು ಒದ್ದೆಯಾಗಿ ಹೋಗುತ್ತಿತ್ತು. ಕರ ವಸ್ತ್ರ ಕೆಲವು ವೇಳೆ ನೀರಿನಲ್ಲಿ ಅದ್ದಿದಂತೆಯೇ ಇರುತಿತ್ತು.

ಅತ್ತೂ ಅತ್ತೂ ಅವಳ ಕಣ್ಣುಗಳು ಕೆಂಪಾಗಿದ್ದುವು. ತನ್ನನ್ನು ಈ ಪರಿಸ್ಥಿತಿಯಲ್ಲಿ ಯಾರೂ ನೋಡಕೂಡದೆಂದು ಅವಳು ಮೇಲೆ ತನ್ನ ಕೊಠಡಿಯಲ್ಲೇ ಇದ್ದು ಬಿಡುತ್ತಿದ್ದಳು. ಕುಟ್ಟಪ್ಪ ಒಂದು ದಿನ ಲಕ್ಷ್ಮಿಯನ್ನು ನೋಡಿ ದಿಗ್ಭ್ರಾಂತನಾದನು. ಅವಳೇಕೆ ಹೀಗಿದ್ದಾಳೆಂದು ಈ ದಿನ ಶಾರದಮ್ಮನವರನ್ನು ಕೇಳಿಯೇ ಬಿಡಬೇಕೆಂದು ಅವನು ನಿರ್ಧರಿಸಿದನು. ಆದರೆ ಈ ದಿನ ಕುಟ್ಟಪ್ಪ ಬಾಯಿಬಿಚ್ಚುವ ಮೊದಲೇ ಶಾರದಮ್ಮನವರು ಅವನನ್ನು ಕುಳ್ಳಿರಿಸಿ, ನಡೆದ ಸಂಗತಿಯೆಲ್ಲವನ್ನೂ ಅವನಿಗೆ ವಿವರಿಸಿ ಹೇಳಿದರು. ತಡೆಯಲಾರದಷ್ಟು ದುಃಖ ಅವರನ್ನೂ ಆವರಿಸಿ, ಅವರ ಕಣ್ಣಿನಿಂದಲೂ ಹತ್ತಾರು ಹನಿಗಳು ತಟಪಟನೆ ಬೀಳಲಾರಂಭಿಸಿದುವು. ಇವರ ಉತ್ತರಾರ್ಧದ ಮಾತುಕತೆಗಳು ನಡೆಯುತ್ತಿದ್ದಾಗಲೇ ಗುಂಡೂರಾಯರು ಒಳಗೆ ಪ್ರವೇಶಿಸಿ, ರುಮಾಲು ತೆಗೆದು ಮೇಜದ ಮೇಲೆ ಇರಿಸಿ, ಕೋಟು ಕಳೆದು " ಸ್ಟಾಂಡ್ " ನಲ್ಲಿ ಸಿಕ್ಕಿಸಿ, ಈಸಿ ಚೇರ್‌ನಲ್ಲಿ ಕುಳಿತುಕೊಂಡರು. ಆಗ ಸರಿಯಾಗಿ ಮಧ್ಯಾಹ್ನದ ಹನ್ನೆರಡು ಘಂಟೆ ಹೊಡೆಯಿತು. ಕುಟ್ಟಪ್ಪ ಈಗ ಏನೊಂದು ಮಾತನ್ನೂ ಆಡಲಿಲ್ಲ. ಬರುತ್ತೇನೆ ಎಂದು ಕೂಡ ಈ ದಿನ ಹೇಳದೆ ಎದ್ದು ಹೊರಟು ಹೋದನು. ಮಧ್ಯಾಹ್ನ ಊಟ ತೀರಿಸಿ ಗುಂಡೂರಾಯರು ಮೂರು ಘಂಟೆಗೆ ಕಂಪೆನಿಗೆ ಹೋದಾಗ, ತಮಗಿಂತ ಮೊದಲೇ ಕುಟ್ಟಪ್ಪ ಬಂದು ಕುಳಿತು, ರಾಘುವಿನೊಂದಿಗೆ ಮಾತನಾಡುತ್ತಿದ್ದುದನ್ನು ಕಂಡರು. ಕೈಹಿಡಿದ ಮಡದಿಗಿಂತ, ಹೊತ್ತು ಹೆತ್ತು ಲಾಲಿಸಿ ಪಾಲಿಸಿದ ತಾಯ್ತಂದೆಗಳಿಗಿಂತ, ಅವನೇನು ಹೆಚ್ಚು ಹೇಳಿ. ಕುಟ್ಟಪ್ಪನ ಸಂಧಾನದಿಂದ ಗುಂಡೂರಾಯರ ಮನೆಯಲ್ಲಿ ಯಾವ ಪರಿಣಾಮವೂ, ಬದಲಾವಣೆಯೂ ಆಗಲಿಲ್ಲ. ಅವನ ಮಾತಿಗೆ ಬೆಲೆ ಕೊಟ್ಟು ರಾಘು ಮನೆಗೆ ಬರಲೂ ಇಲ್ಲ.

ಇಬ್ಬರ ಜಗಳ ಮೂರನೆಯವನಿಗೆ ಲಾಭವೆನ್ನುತ್ತಾರಲ್ಲವೆ? ರಾಘು ಈಗ ತನ್ನ ಮನೆಗೇ ನಿತ್ಯವೂ ಬರುತಿದ್ದುದನ್ನು ಕಂಡ ಸರೋಜ, ಏನೋ ಇದರಲ್ಲಿ ಸಂಗತಿಯಿದೆಯೆಂದು ಊಹಿಸಿಕೊಂಡಳು. ವಿವಾಹವಾದಮೇಲೆ ವಾರಕ್ಕೆ ಒಂದು ದಿನವೋ, ಇಲ್ಲವೋ ಎರಡು ದಿನವೋ, ಅವನು ಅವಳ ಮನೆಯಲ್ಲಿ ತಂಗುತಿದ್ದನು. ಅನೇಕದಿನ ಅವಳಕೂಡ ಸಲ್ಲಾಪವಾಡಿ, ರಾತ್ರಿ ಹತ್ತು ಘಂಟೆಗೆಲ್ಲ ಮನೆಗೇ ಹಿಂದಿರುಗುತಿದ್ದನು. ಈಗ ಹೊತ್ತಿಗೆ ಮುಂಚೆ "ಮಾರುತಿ ಕಂಪೆನಿಯಲ್ಲಿದ್ದಾಗ್ಯೆ ಬರುತಿದ್ದಂತೆ, ಕ್ರಮವಾಗಿಯೇ ಅವನು ಅವಳ ಮನೆಗೆ ಹಾಜರಾಗುತಿದ್ದನು. ರಾಘು ಮಾರುತಿ ಕಂಪೆನಿಯಲ್ಲಿದ್ದಾಗ ಒಬ್ಬ ಕೆಲಸಗಾರನಾಗಿದ್ದನು. ಈಗವನು ಧಣಿ. ಇಂಥ ಸುಸಂದರ್ಭವನ್ನು ಅವಳು ಕಳೆದುಕೊಂಡಾಳೇ? ಮೊದಲು ಏನ್ರೀ, ಬನ್ರೀ, ಹಾಗೇನ್ರೀ, ಹೀಗೇನ್ರೀ ಎಂದು ಅಣಕ ಮಾಡುತಿದ್ದವಳು, ಈಗ ಆದರದಿಂದ, ಸ್ವಾಮಿ, ಚಿತ್ತ, ಕೃಪೆ ಮುಂತಾದ ವಾಕ್ಯಗಳನ್ನು ಉಪಯೋಗಿಸಲಾರಂಭಿಸಿದಳು. ಒಂದು ರಾತ್ರಿ ಅವನ ತೋಳ್ತೆಕ್ಕೆಯಲ್ಲಿ ಸಿಕ್ಕಿದ್ದಂತೆಯೇ ಅವನಿಂದ ವಿಷಯಗಳೆಲ್ಲವನ್ನೂ ಸಂಗ್ರಹಿಸಿಕೊಂಡಳು. ಬೆಳಗ್ಗೆ, ಅವನೇಳುವುದಕ್ಕೆ ಮುಂಚೆಯೇ ಎದ್ದು, ಸ್ನಾನಕ್ಕೆಂದು ಬಿಸಿನೀರು ಇಡುವಳು. ಅವನು ಸ್ನಾನ ಮಾಡುತಿದ್ದಾಗಲೇ ಬಂದು "ಬೆನ್ನು ಉಜ್ಜಿಕೊಡಲೇ" ಎಂದು ಕೇಳಿ, ಬೆನ್ನು ಉಜ್ಜಿಕೊಡುತಿದ್ದಳು ರುಚಿರುಚಿಯಾಗಿ ಕಾಫಿ ತಿಂಡಿಗಳನ್ನೂ ತಯಾರು ಮಾಡುತಿದ್ದಳು. "ನೀವಿಬ್ಬರೂ ಒಂದು ದಿನ ಮೋತೀಲಾಲ್ ಟಾಕೀಸಿಗೆ ಹೋಗುತಿದ್ದುದನ್ನು ಕಂಡೆ. ಆಗಲೇ ನಾನು ನಿಮ್ಮ ಪತ್ನಿಯನ್ನು ನೋಡಿದ್ದು. ಅವಳ ಮುಖ ನೋಡಿದೊಡನೆಯೇ ಬಲು ಬಜಾರಿ, ಗಂಡುಬೀರಿ ಎಂದು ತಿಳಿದುಕೊಳ್ಳಬಹುದು" ಎಂದು ಅವನ ಕಿವಿ ಕಚ್ಚಿದಳು. ಈಗವರು ಮೊದಲಿನ ಮಾಮೂಲಿನಂತೆ ಜೋಡಿ

ಯಾಗಿ ಸಿನಿಮಾವಿಗೆ ಹೋಗಲೂ ಪ್ರಾರಂಭಿಸಿದರು. ತನ್ನ ಕಿವಿಯ ಓಲೆಯಲ್ಲಿ ಎಣ್ಣೆ ತುಂಬಿದೆಯೆಂದು ಅದನ್ನು ರಿಪೇರಿ ಮಾಡಿಸಿಕೊಂಡಳು. ಈಗಿನ ಕಾಲದಲ್ಲಾರೂ ಒಂದು ಹರಳಿನ ಮೂಗುನತ್ತು ಇಡುವುದಿಲ್ಲೆಂದು, ಅದನ್ನು ಮಾರಿ ಮೂರು ಹರಳು ಹಾಕಿದ ಹೊಸ ಬೇಸರಿಯೊಂದನ್ನು ಕೊಂಡಳು. "ಎರಡೆಳೆ ಇದ್ದಾಗೆ ಸಾಕು, ಮಾಡಿಸಿಕೊಡ್ತೀರಾ" ಎಂದು ವಿನಯವಾಗಿ ಕೇಳಿ, ಎರಡೆಳೆ ಚಿನ್ನದ ಸರ ಹಾಕಿಸಿಕೊಂಡಳು. ವಾಕಿಂಗ್ ಹೊರಟರೆ ಕೈಯಲ್ಲಿ ರಿಸ್ಟ್‌ವಾಚ್ ಇಲ್ಲದಿದ್ದಲ್ಲಿ ಏಕೋ ಬಿಕೋ ಅನ್ನಿಸುತ್ತದೆ ಎಂದು, ಪುಟ್ಟದಾದ ಲೇಡೀಸ್ ವಾಚೊಂದನ್ನು ಕಟ್ಟಿಕೊಂಡಳು. ಸುತ್ತಲೂ ಸಣ್ಣ ಸಣ್ಣ ಬಿಳೀ ಹರಳುಗಳು, ಮಧ್ಯೆ ನೀಲಿಕಲ್ಲು ಸೇರಿಸಿದ, ಸೊಗಸಾದ ಉಂಗುರವೊಂದನ್ನು ಎಡದ ಕೈಯಿನ ಎರಡನೇ ಬೆರಳಿಗೆ ಹಾಕಿಸಿಕೊಂಡಳು. ಚಪ್ಪಲಿ ಬಹಳ ಹಳೆಯದಾಯಿತೆಂದು, ಮೊಸಳೆ ಆಕಾರದ ಹೊಸ ಚಪ್ಪಲಿಗಳನ್ನು ಕೊಂಡು ಮೆಟ್ಟಿದಳು. ಅವಳೀಗ ಹತ್ತಿ ಬಟ್ಟೆಯನ್ನು ಉಡುವುದೇ ಇಲ್ಲವೆಂದು ಪ್ರತಿಜ್ಞೆಮಾಡಿಕೊಂಡಳು. ಅಸಲ್ ಕೊಳ್ಳೇಗಾಲ, ಮೈಸೂರು ಸಿಲ್ಕ್‌ನಿಂದ ಹೊಲಿಸಿದ ಕುಪ್ಪಸ, ಕಂಚಿ, ಬೆನಾರಸ್ ಸೀರೆಗಳನ್ನು ಉಡಲಾರಂಭಿಸಿದಳು.

## ೬೬

ಮೈಸೂರಿನ ಎಲ್ಲೋ ಒಂದು ಭಾಗದಲ್ಲಿ ಕೆಲವರಿಗೆ ಕಾಲರಾ ವ್ಯಾಧಿ ಕಾಣಿಸಿಕೊಂಡಿತು. ಕ್ರಮೇಣ ಅದು ನಗರದ ಎಲ್ಲೆಲ್ಲೂ ವ್ಯಾಪಿಸಿಕೊಂಡಿತು. ಅಧಿಕಾರಿಗಳು ತೀವ್ರವಾಗಿ ಅದನ್ನು ತಡೆಗಟ್ಟಲು ಕಂಕಣಕಟ್ಟಿಕೊಂಡರು. ಹಾಗೂ ದಿನವೊಂದಕ್ಕೆ ಹತ್ತು ಹದಿನೈದು ಮಂದಿಯನ್ನು ಆ ವ್ಯಾಧಿ ಆಹುತಿ ತೆಗೆದುಕೊಳ್ಳುತಿತ್ತು. ಲಕ್ಷ್ಮಿಯನ್ನು ಒಡನೆ ಊರಿಗೆ ಕಳಿಸು

ಕೊಂಡು ಬರಬೇಕೆಂದು, ಜಾನಕಮ್ಮನವರು ಪತಿಗೆ ಒತ್ತಾಯಪಡಿಸಿದರು. ಇದಕ್ಕೆ ಮೊದಲು ಶಾಮರಾಯರು ಮೈಸೂರಿನಲ್ಲಿ ಕಾಲರಾ ವ್ಯಾಧಿ ಹರಡಿದೆಯೆಂಬ ಸುದ್ದಿ ಕೇಳಿ ಮನೆಯಲ್ಲೆಲ್ಲರೂ ದಿಗಿಲು ಪಡುತ್ತಿರುವುದಾಗಿಯೂ, ಆದುದರಿಂದ ಮಗಳನ್ನು ಖಂಡಿತ ಕಳುಹಿಸಿಕೊಡಬೇಕೆಂದೂ, ಗುಂಡೂರಾಯರಿಗೆ ಪತ್ರವೊಂದನ್ನು ಬರೆದರು. ಅದಕ್ಕವರು ಈಗ ಭಯಪಡಬೇಕಾದ್ದಿಲ್ಲವೆಂದೂ, ಈವಾಗ ವ್ಯಾಧಿ ಕೊಂಚ ಕೊಂಚವಾಗಿ ತಣಿಯುತ್ತ ಬರುತ್ತಿದೆಯೆಂದೂ, ಅದಲ್ಲದೆ ಒಂಟಿಕೊಪ್ಪಲ್ ಪ್ರದೇಶದಲ್ಲಿ ಈ ವ್ಯಾಧಿ ಯಾರಿಗೂ ಕಾಣಿಸಿಕೊಂಡಿಲ್ಲವೆಂದೂ ಪ್ರಸ್ತುತ ತಾವಿಲ್ಲಿಗೆ ಬರಬೇಕಾಗಿಲ್ಲವೆಂದೂ, ಪ್ರತ್ಯುತ್ತರ ಕೊಟ್ಟರು. ಈಗ ಮೈಸೂರಿನಲ್ಲಿ ಕಾಲರಾ ವ್ಯಾಧಿಯನ್ನು ನಿರ್ಮೂಲಗೊಳಿಸಲು, ಸರ್ವಪ್ರಯತ್ನಗಳನ್ನೂ ಅಧಿಕಾರಿಗಳು ದಕ್ಷತೆಯಿಂದ ಮುಂದುವರಿಸುತಿದ್ದರು. ಇದರಿಂದಾಗಿ ಎಲ್ಲಾ ಸಾರ್ವಜನಿಕ ಸಂಸ್ಥೆಗಳನ್ನೂ ಒಂದು ತಿಂಗಳ ಕಾಲ ಮುಚ್ಚಬೇಕೆಂದು ಸರ್ಕಾರದವರ ಆಜ್ಞೆಯಾಯಿತು. ಸಹಸ್ರಾರು ಹೋಟಲುಗಳು, ಅಂಗಡಿಗಳೂ, ಕಾರ್ಖಾನೆಗಳೂ, ಈ ಆಜ್ಞೆ ಪ್ರಕಾರ ಬಾಗಿಲು ಮುಚ್ಚಿಕೊಂಡುವು. ಹೀಗಾಗಿ " ಸುಗಂಧ " ಕಂಪೆನಿಯೂ ಬಾಗಿಲು ಮುಚ್ಚಿಕೊಂಡಿತು. ಈಗ ರಾಘುವಿಗೆ ಕೆಲಸವಿಲ್ಲದ ಹಾಗಾಯಿತು. ಏನಾದರೂ ಸರಿ, ಮನೆಗೆ ಹೋಗುವುದೇಯಿಲ್ಲವೆಂದು ಅವನು ನಿರ್ಧರಿಸಿದನು. ಒಂದು ತಿಂಗಳ ಕಾಲವೂ ಸುಮ್ಮನೆ ಹೇಗೆ ಕಾಲ ತಳ್ಳುವುದೆಂದು ಅವನು ಯೋಚಿಸಲಾರಂಭಿಸಿದನು. ಈಗ ಎಲ್ಲಿಗಾದರೂ "ಟೂರ್" ಹೊರಡುವುದೆಂದು ಅವನು ದೃಢಪಡಿಸಿಕೊಂಡನು ಅವನ ನಾಲ್ಕಾರು ಮಿತ್ರರುಗಳು ಆ ಸಲಹೆಯನ್ನು ಅನುಮೋದಿಸಿದರು. ಎಲ್ಲಿಗೆ ಹೊರಡುವುದೆಂದು ಬಿಸಿ ಬಿಸಿ ಚರ್ಚೆಯಾಯಿತು. ಬೊಂಬಾಯಿಗೆ ಹೋಗಿದ್ದು ಬರುವುದೆಂದು ಬಹುಮತದಿಂದ ನಿರ್ಣಯವಾಯಿತು. ಈ ಗೊತ್ತುವಳಿಯೆಲ್ಲ ಸ್ವೀಕೃತವಾದುದು

ಸರೋಜಳ ಮನೆಯಲ್ಲೇ. ಸರೋಜ ಈ ಸುಸಂಧಿಯನ್ನು ಏಕೆ ಕಳೆದುಕೊಳ್ಳಬೇಕೆಂದು ತಾನೂ ಬರುವೆನೆಂದಳು. ರಾಘು ಒಪ್ಪಿಗೆಯನ್ನಿತ್ತನು. ದೂರದ ಪ್ರಯಾಣ ಮಾಡುವಾಗ ಒಂದು ಹೆಣ್ಣು, ಅದರಲ್ಲೂ ಒಬ್ಬ ದಾಸಿ, ಜೊತೆಯಲ್ಲಿದ್ದರೆ, ಆ ಪ್ರಯಾಣ ಬಹಳ ಆನಂದಕರವಾಗಿರುತ್ತವಲ್ಲವೆ? ನಾಲ್ಕಾರು ಮಿತ್ರರುಗಳೂ ಹೊರಡುವುದರಿಂದ ಖರ್ಚೆಲ್ಲವನ್ನೂ ರಾಘುವೇ ಹಾಕಬೇಕಾಗಿದ್ದಿತು. ಕೈಯಲ್ಲಿ ರೊಕ್ಕ ಹಣವು ಇಲ್ಲದುದರಿಂದ ಈಗ ರಾಘು ಬಡ್ಡಿಗೆ ಎರಡು ಸಾವಿರ ರೂಪಾಯಿ ಸಾಲ ತೆಗೆದುಕೊಂಡನು. ಏನೋ ಅವಸರದ ಕೆಲಸದ ನಿಮಿತ್ತ ತಾನು ಬೊಂಬಾಯಿಗೆ ಹೋಗಿರುವುದಾಗಿ ತನ್ನ ಮನೆಯವರಿಗೆ ತಿಳಿಸಿಬಿಡೆಂದು, ತನ್ನ ಕೆಲಸಗಾರನೊಬ್ಬನ ಕೂಡ ಹೇಳಿ, ಅವನು ಮಿತ್ರರುಗಳೊಂದಿಗೆ, ಸರೋಜಳೊಂದಿಗೆ, ರೈಲೇರಿದನು. ನೋವಿನ ಮೇಲೆಯೇ ಪೆಟ್ಟು ಬಿದ್ದಂತೆ, ತನ್ನ ಪತಿಯು ಮತ್ತೊಬ್ಬಳನ್ನು ಕರೆದುಕೊಂಡು ಉಲ್ಲಾಸ ಪ್ರಯಾಣ ಮಾಡಿರುವನೆಂಬ ಸುದ್ದಿ ಕೇಳಿ, ಲಕ್ಷ್ಮಿ ಮತ್ತಷ್ಟು ದುಃಖಿಸಿದಳು. ನನ್ನ ಮೇಲೆ ಅವರಿಗೇನಿಷ್ಟು ಕೋಪ, ನಾನೇನು ಅಪರಾಧವನ್ನು ಮಾಡಿದೆ. ಬುದ್ಧಿ ಹೇಳಿದುದೂ ಒಂದು ತಪ್ಪೇ–ಎಂದು ಹಲವು ಬಗೆಯಿಂದಂದುಕೊಂಡಳು. ಗಂಡಸರೇ ಹಾಗೇನೋ, ಕಲ್ಲೆದೆಯವರು, ಕಟುಕರು, ಎಂದು ಗಂಡುವರ್ಗಕ್ಕೇ ಛೀಮಾರಿ ಹಾಕಿದಳು. "ಪ್ರಸವವಾಗಲಿ ಸುಮ್ಮನಿರಮ್ಮ, ನಾವೂ ದಕ್ಷಿಣ ಭಾರತವನ್ನೆಲ್ಲ ಸುತ್ತಿ, ಕ್ಷೇತ್ರಾಟನ ಮಾಡಿಕೊಂಡು ಬರೋಣ" ಎಂದು ಸೊಸೆಗೆ ಗುಂಡೂರಾಯರು ಸಮಾಧಾನ ಹೇಳಿದರು. ಲಕ್ಷ್ಮಿಗೆ ಪತಿಯು ತನ್ನನ್ನು ಬಿಟ್ಟು ಹೊರಟು ಹೋದುದಕ್ಕೇನೂ ಚಿಂತೆಯಾಗಲಿಲ್ಲ. ಆದರೆ ಕೈ ಹಿಡಿದ ಮಡದಿ ತಾನಿರುವಾಗ, ಮತ್ತೊಬ್ಬಳನ್ನು ಕರೆದುಕೊಂಡು ಹೋದರಲ್ಲಾ ಎಂದೇ ಅವಳಿಗೆ ಚಿಂತೆ. ದುಃಖಿಸುವುದು, ಕಣ್ಣೀರು ಬಿಡುವುದು, ವಿನಹ

ಅಬಲೆಯಾದ ಅವಳಿಗೆ ಬೇರೊಂದನ್ನು ಮಾಡಲೂ ಸಹ ಸಾಧ್ಯ ವಿರಲಿಲ್ಲ. ಬೈಯದಿದ್ದ ಶಾರದಮ್ಮನವರೂ ಈಗ ಮಗನನ್ನು ಬೈಯಲಾರಂಭಿಸಿದರು. ಬರಲಿ ಅವನು, ಮಾಡುತ್ತೇನೆ ಯೆಂದರು. ಲಕ್ಷ್ಮಿ ಏನು ಪಾಪ ಮಾಡಿದ್ದಳೋ! ಅವಳು ಅನುಭವಿಸದ ಸುಖವನ್ನು ಸರೋಜ ಈಗ ಅನುಭವಿಸುತಿದ್ದಳು. ಬೊಂಬಾಯಿನ ಭವ್ಯ ಹೋಟಲೊಂದರಲ್ಲಿ ಅವಳು ರಾಘುವಿನ ಕೂಡ ಪ್ರಣಯವಾಟವಾಡಿ, ಹದಿನೈದು ದಿನಗಳು ಉಲ್ಲಾಸ ದಿಂದಿದ್ದು, ಬೀದಿ ಬೀದಿ ಸುತ್ತಿ, ಕಣ್ಣಿನ ತೃಪ್ತಿ ಪಡುವಷ್ಟು ನೋಡಿ ಆನಂದಿಸಿ, ಈಗವನ ಕೂಡ ಮತ್ತೆ ಮೈಸೂರಿಗೆ ಹಿಂದಿರುಗಿದಳು.

## ೬೭

ಲಕ್ಷ್ಮಿ ತನ್ನ ಊರಿಗೆ ಬರುವುದಿಲ್ಲವೆಂದು ನಿರ್ಧಾರವಾದ ಮೇಲೆ, ಪ್ರಸವಕ್ಕೆ ಮೊದಲು ಅವಳನ್ನು ನೋಡಿಕೊಂಡು ಬರ ಬೇಕೆಂಬ ಆಸೆ ವಿಮಲಳಿಗುಂಟಾಯಿತು. ಪತಿ ರಾಮು ಇದಕ್ಕೆ ಅಡ್ಡ ಬಂದಾನೇ? ಮುಂಚಿತವಾಗಿಯೇ ರಾಮು ಮೈಸೂರಿಗೆ ಪತ್ರ ಬರೆವನು. ಲಕ್ಷ್ಮಿ ಅಣ್ಣನ ಪತ್ರವನ್ನು ಓದಿನೋಡಿ ಬಹಳ ವ್ಯಸನಪಟ್ಟಳು. ಅವರೇಕೆ ಈಗ ಬರುತ್ತಾರೊ? ಮುಖ ಕೊಟ್ಟು ಈಗ ಮಾತಾಡಲು ನನ್ನಿಂದ ಸಾಧ್ಯವಿದೆಯೇ?—ದೇವರೇ ಎಂದಂದುಕೊಂಡಳು. ವಿಮಲ ಇದುವರೆಗೂ ಮೈಸೂರನ್ನು ನೋಡಿರಲಿಲ್ಲ. ಪಾಪ, ಅವಳಿಗೆ ಬಹಳ ಆಸೆಯಿದ್ದಿರಬೇಕು ನೀನೇಕೆ ಹೀಗಿದ್ದೀಯೆ?—ಎಂದು ಅವರೇನಾದರೂ ಕೇಳಿದರೆ, ಏನುತ್ತರ ಕೊಡುವುದು ಎಂದವಳು ಚಿಂತಿಸಿದಳು. ಆದರೆ ಈಗ ಬರಬೇಡಿ ಎಂದು ಪತ್ರ ಬರೆಯಲಿಕ್ಕಾಗುತ್ತದೆಯೇ? ಗಂಟುಪೊಟ್ಟಳದೊಂದಿಗೆ ರಾಮುವೂ, ವಿಮಲಳೂ ಒಂದು ದಿನ "ಅನ್ನಪೂರ್ಣದ" ಮಹಾದ್ವಾರವನ್ನು ಪ್ರವೇಶಿಸಿಯೇ ಬಿಟ್ಟರು.

ಅಣ್ಣನೂ, ಅತ್ತಿಗೆಯೂ, ಗಾಡಿಯಿಂದಿಳಿಯುತಿದ್ದಾಗಲೇ ಕಿಟಕಿಯಿಂದ ನೋಡಿದ ಲಕ್ಷ್ಮಿ–ಹೊಸ ದಂಪತಿಗಳು, ಜೋಡಿ ಚೆನ್ನಾಗಿದೆ,–ಎಂದಂದುಕೊಂಡಳು. ಈಗ ಬಂದವರನ್ನು ಸ್ವಾಗತಿಸಲು ಬಾಗಿಲ ಬಳಿ ಬಂದು ನಿಂತಳು. ಸೌಖ್ಯವೇ ಲಕ್ಷ್ಮಿ?—ಎಂದಂದುಕೊಂಡು ವಿಮಲ ಒಳಗೆ ಬಂದಳೇ ಹೊರತು ಸೌಖ್ಯದ ಚಿಹ್ನೆಯನ್ನು ಲಕ್ಷ್ಮಿಯ ಮುಖದಲ್ಲಿ ಅವಳು ಕಾಣಲಿಲ್ಲ. ಲಕ್ಷ್ಮಿ ಏಕೆ ಹೀಗಿದ್ದಾಳೆಂದು ದಂಪತಿಯರಿಬ್ಬರೂ ಮೆಲ್ಲ ಮೆಲ್ಲಗೆ ಮಾತಾಡಿಕೊಂಡರು. ಲಕ್ಷ್ಮಿ ತಾನು ಚಿಂತೆಯಲ್ಲಿ ಇಲ್ಲದವಳೆಂದು ತೋರಿಸಲು ಎಷ್ಟೇ ನಟನೆ ಮಾಡಲು ಪ್ರಯತ್ನಪಟ್ಟರೂ ಅವಳಿಂದ ಅದು ಸಾಧ್ಯವಾಗಲಿಲ್ಲ. ರಾಮು ಮನೆಗೆ ಬಂದ ಮೇಲೆ ಗುಂಡೂರಾಯರು ಕಂಪೆನಿಗೆ ಹೋಗಿ "ಈಗಲಾದರೂ ಬಾ, ಮಹರಾಯ. ಪಾಳ್ಯದಿಂದ ನಿನ್ನ ಮೈದುನ ಮತ್ತು ಅವನ ಪತ್ನಿ ಬಂದಿದಾರೆ. ನಮ್ಮನ್ನು ಗೋಳುಹುಯ್ಯಿಸಿಕೊಂಡುದು ಸಾಕು. ಇನ್ನು ಪಾಪ, ಪಾಳ್ಯಕ್ಕೂ ಸುದ್ದಿ ಮುಟ್ಟಿ, ಅವರೂ ವ್ಯಸನ ಪಟ್ಟು ಹಾಳಾಗುವುದು ಬೇಡ" ಎಂದು ಕೇಳಿಕೊಂಡರು. ಆದರವನು ಬರಲೇಯಿಲ್ಲ. ಮನೆಯಲ್ಲಿನ ತಿಕ್ಕಾಟವನ್ನೆಲ್ಲ ರಾಮು ಗ್ರಹಿಸಿಕೊಂಡನು. ಶಾರದಮ್ಮನವರು ಮರೆಮಾಚದೆ ತಮ್ಮ ಮಗನ ನಡತೆಯನ್ನೆಲ್ಲ ಅವನಿಗೆ ವಿವರಿಸಿದರು. ರಾಮುವೂ ಈ ದಿನ ಕಂಪೆನಿಗೆ ಹೋದನು. "ಚೆನ್ನಾಗಿಲ್ಲ ಭಾವ ನಿಮಗೆ. ನೋಡಿದ ಜನ ಹೇಸುತ್ತಾರೆ." ಎಂದನು. ಇವರ ಬೋಧನೆಗಳಿಗೆಲ್ಲ ಕಿವಿಗೊಡುವುದಕ್ಕೆ ರಾಘು ಮಾನವನಾಗಿದ್ದರೆ ತಾನೆ? ಮೈಸೂರೆಲ್ಲ ಸುತ್ತಿ ಓಡಾಡಿ ಬರಬೇಕೆಂದು ಹೊರಟ ವಿಮಲ, ಲಕ್ಷ್ಮಿಯ ಪರಿಸ್ಥಿತಿಯನ್ನು ನೋಡಿ ಎಲ್ಲಿಗೂ ಹೊರಡುವುದಕ್ಕೆ ಮನಸ್ಸಿಲ್ಲದೆ, ಎರಡು ದಿನ ಮನೆಯಲ್ಲಿಯೇ ಕಾಲಕಳೆದುಬಿಟ್ಟಳು. ಅವಳು ಎಲ್ಲಿಗೆ ಹೋಗಲೂ ಇಷ್ಟಪಡಲಿಲ್ಲ. "ಬೇರೆಲ್ಲಿಗೂ ಬೇಡ ವಿಮಲ. ದೇವಿ ದರ್ಶನ ಮಾತ್ರ ಪಡೆದು ಬರೋಣ ಬಾ"

ಎಂದು ಪತಿಯಂದುದಕ್ಕೆ, ಮನಸ್ಸಿಲ್ಲದ ಮನಸ್ಸಿನಿಂದ ಕೊನೆಯ ದಿನ ಅವಳು ಚಾಮುಂಡಿ ಬೆಟ್ಟ ಹತ್ತಿ ಕೆಳಗಿಳಿದಳು. ಗುಂಡೂ ರಾಯರು ರಾಮುವಿನಕೂಡ ಮನೆಯಲ್ಲೆಲ್ಲ ಹೋಗಿ ದಿಗಿಲುಪಡಿಸ ಬೇಡ ರಾಮು, ಎಲ್ಲ ಮುಂದೆ ಸರಿಹೋಗುತ್ತೆ. ನಾವು ಲಕ್ಷ್ಮಿ ಯನ್ನು ಮಗಳಂತೆ ನೋಡಿಕೊಳ್ಳುತಿದ್ದೇವೆ. ಯಾವಾಗಲೂ ಹೀಗೇ ಇರುತ್ತದೆಯೇ. ಏನೋ ಅವನಿಗೆ ಕೆಟ್ಟಕಾಲ " ಅಂದರು. ವಿಮಲ ಲಕ್ಷ್ಮಿಯನ್ನು ಬಿಗಿದಪ್ಪಿ " ನಿನ್ನ ಅದೃಷ್ಟ ಕಣೇ ಲಕ್ಷ್ಮಿ ಏನೂ ಹೆಚ್ಚಿಗೆ ಭಯಪಡಬೇಡ. ಮಂತ್ರಾಲಯಕ್ಕೆ ಹರಸಿಕೊ. ನಾವೆಲ್ಲ ಒಂದಡವೆ ಒತ್ತಟ್ಟಗೆ ಹೋಗಿದ್ದು ಬರೋಣ " ಎಂದು ಸಮಾಧಾನ ಹೇಳಿದಳು. ವಿಮಲಳ ಕಣ್ಣಿನಿಂದ ನೀರು ಧಾರೆ ಧಾರೆಯಾಗಿ ಹರಿಯ ತೊಡಗಿತು. ಈಗ ದಂಪತಿಗಳಿಬ್ಬರೂ ಊರಿಗೆ ಹಿಂದಿರುಗಿದರು. " ಗಂಡ-ಹೆಂಡಿರ ಮನಸ್ತಾಪ ನಾಳೆ ಎಲ್ಲ ಸರಿಹೋಗುತ್ತೆ. ಇನ್ನು ನೀನು ಮನೆಯಲ್ಲಿ ಹೋಗಿ ಅಮ್ಮನಿಗೆ ಕಿವಿ ಚುಚ್ಚಬೇಡ. ಅವಳು ಬಹಳ ಸಂಕಟಪಡು ತ್ತಾಳೆ " ಎಂದು ರಾಮು ಪತ್ನಿಗೆ ದಾರಿಯಲ್ಲಿ ಬರುವಾಗಲೇ ಗಾಡಿಯಲ್ಲಿ ಹೇಳಿದ್ದನು. ಆದರೆ ವಿಮಲಳ ಬಾಯಿ ಸುಮ್ಮಗಿರು ತ್ತದೆಯೇ? ಅವಳು ಲಕ್ಷ್ಮಿಯ ಪರಿಸ್ಥಿತಿಯನ್ನೆಲ್ಲ ಅತ್ತೆಗೆ ಒಂದಿಷ್ಟೂ ಬಿಡದೆ ಒಪ್ಪಿಸಿಬಿಟ್ಟಳು. ಇನ್ನೂ ಮುಂದುವರೆದು " ಮಾವನವರನ್ನು ಕಳುಹಿಸಿ ಪ್ರಸವಕ್ಕೆ ಇಲ್ಲಿಗೇ ಕರೆಸಿಕೊಂಡು ಬಿಡಿ, ಅತ್ತೆ ಸುಮ್ಮನೆ ಅಲ್ಲಿ ಚಿಂತೆ ಹತ್ತಿಹತ್ತಿ ಮುಪ್ಪಾಗುವುದು ಬೇಡ. ನಾವೆಲ್ಲ ಇದೇವೆ. ಏನಾದರೂ ಸಮಾಧಾನ ಹೇಳಿ ಸ್ವಲ್ಪ ಶಾಂತಿಗೆ ತರಬಹುದು. ಅವರಿಗೆ ಯಾವಾಗ ಮನಸ್ಸಾಗು ತ್ತದೆಯೊ ಆಗ ಕರೆದುಕೊಂಡು ಹೋಗಲಿ " ಎಂದಳು. ಜಾನ ಕಮ್ಮನವರು ಹೋ ಎಂದು ಅತ್ತುಬಿಟ್ಟರು. " ನನಗೆ ಅವಳ ಮುಖ ನೋಡಿದಾಗಲೇ ಗೊತ್ತು. ರಾಮು ಮದುವೆಯಲ್ಲೇ ನಾನು ಕೇಳಿದೆ. ಏನೂ ಇಲ್ಲವೆಂದು ಬಿಟ್ಟಳು. ಪೆಚ್ಚ ಹುಡುಗಿ!

ಇಲ್ಲೇ ಹೇಳಿದ್ದರೆ, ನಾವೇನಾದರೂ ಅವನಿಗೆ ಬುದ್ಧಿವಾದ ಹೇಳ ಬಹುದಾಗಿದ್ದಿತು. ನನ್ನ ಕಂದನಿಗೆ ಈ ಗತಿಯೇ" ಎಂದು ಪ್ರಲಾಪಮಾಡತೊಡಗಿದರು. "ಅವರಿಗೆ ಬುದ್ಧಿವಾದ ಹೇಳು ವುದು ಹೊಳೆಯಲ್ಲಿ ಹುಣಿಸೆಹಣ್ಣು ತೇಲಿ ಬಿಟ್ಟಹಾಗೆ ಕಣಮ್ಮ" ಎಂದು ರಾಮು ಪ್ರತ್ಯುತ್ತರವಿತ್ತನು.

## ೨೮

ಈಗ ಶಾಮರಾಯರು ಗಾಡಿ ಕಟ್ಟಿಸಿಕೊಂಡು ಹೊರಟರು. ಗರ್ಭಿಣಿಯೆಂದು ಗಾಡಿಯಲ್ಲಿ ಮೆತ್ತೆಯನ್ನು ಹಾಸಿ ಎರಡು ಮೂರು ಒರಗು ದಿಂಬುಗಳನ್ನೂ ಹಾಕಿಕೊಂಡು, ಅವರು ಪ್ರಯಾಣ ಬೆಳೆಸಿದರು. "ಖಂಡಿತ ಕರೆದುಕೊಂಡು ಬನ್ನಿ. ಇನ್ನು ಬಿಟ್ಟು ಬರಬೇಡಿ." ಎಂದು ಜಾನಕಮ್ಮನವರು ಹತ್ತಾರು ತಡವೆ ಹೇಳಿ ಕಳುಹಿಸಿದರು. ಅವರ ಮನೋಭೀಷ್ಟ ಈಗ ನೆರವೇರಿತು. ಲಕ್ಷ್ಮಿಯನ್ನು ಪ್ರಸವಕ್ಕೆ ಇಲ್ಲಿಗೇ ಕರೆದುಕೊಂಡು ಬರಬೇಕೆಂದು ಮೊದಲೇ ಅವರು ನಿರ್ಧರಿಸಿದ್ದರು. ಆದರೆ ಅದು ಸಾಧ್ಯವಾಗಲಿಲ್ಲ. ಈಗ ಬಿಡುವುದಿಲ್ಲ, ಹೇಗಾದರೂ ಮಾಡಿ ಕರೆದುಕೊಂಡು ಬರುತ್ತಾರೆ ಎಂದು ಮನಸ್ಸಿನಲ್ಲಂದು ಕೊಂಡರು. ಆದರೆ ದೃಷ್ಟಿಮಾತ್ರ ಬೇರೆ. ಮೊದಲು ಅವರು ಇಲ್ಲಿಗೆ ಬರಮಾಡಿ ಕೊಳ್ಳ ಬೇಕೆಂದಿದ್ದುದು ಪ್ರಸನ್ನ ಲಕ್ಷ್ಮಿಯನ್ನು. ಇನ್ನು ಒಂದೆರಡು ದಿನಗಳಲ್ಲಿ ತಾವು ಕಾಣುವುದು ಭಾಗ್ಯಹೀನ ಲಕ್ಷ್ಮಿಯನ್ನು, ವ್ಯತ್ಯಾಸವಿಷ್ಟೆ. ಅಣ್ಣನು ಬಂದು ಹೋದಮೇಲೆ ಊರಿಂದ ಇನ್ನು ತನ್ನ ತಾಯಿಯೋ, ತಂದೆಯೋ, ಖಂಡಿತ ಬರುತ್ತಾರೆಂದು ಲಕ್ಷ್ಮಿ ನಿರ್ಧರಿಸಿದ್ದಳು. ಅವಳು ಎಣಿಸಿದ್ದಂತೆಯೇ ಈಗ ನಡೆಯಿತು. ಶಾಮರಾಯರು ಲಕ್ಷ್ಮಿಯ ಮನೆಗೆ ಕಾಲಿಟ್ಟರು. ಮಗಳ ಸ್ಥಿತಿಯನ್ನು ಕಂಡು ಅವರಿಗೆ ಬಹಳ ದುಃಖ ಆವರಿಸಿತು.

ಆದರೆ ಅವರು ಗಂಡಸು. ಹೆಣ್ಣಿನಂತೆ ಅವರು ಇನ್ನು ಅಳುವುದಕ್ಕಾಗುತ್ತದೆಯೇ? ಗುಂಡೂರಾಯರ ಕೂಡ ತಾವು ಮಗಳನ್ನು ಕರೆದುಕೊಂಡು ಹೋಗಲು ಬಂದಿರುವುದಾಗಿ ತಿಳಿಸಿದರು. ಶಾರದಮ್ಮನವರು ಏನೊಂದುತ್ತರವನ್ನೂ ಕೊಡಲೇಯಿಲ್ಲ. ಶಾಮರಾಯರು ತಾವೇ ಕಂಪನಿಗೆ ಹೋಗಿ ರಾಘುವನ್ನು ಕಂಡು ಬರುವುದಾಗಿ ತಿಳಿಸಿದರು. ಅಂತೆಯೇ ಅವರು ಅಳಿಯನನ್ನು ಕಂಡು "ಏನೋ ಈಗ ನಿಮಗೆ ಕಾಲ ಸರಿಯಾಗಿಲ್ಲ, ಅಷ್ಟೆ. ಯಾರೇನು ಮಾಡುವುದು ಹೇಳಿ? ಲಕ್ಷ್ಮಿಯನ್ನು ಈಗ ಕಳುಹಿಸಿ ಕೊಡಿ. ಆಮೇಲೆ ಬೇಕಾದರೆ ಕರೆಯಿಸಿಕೊಳ್ಳುವಿರಂತೆ" ಎಂದು ಕೇಳಿಕೊಂಡರು. ರಾಘು ಹೆಚ್ಚಿಗೆ ಮಾತೊಂದೂ ಆಡದೆ "ಮನೆಯಲ್ಲಿ ಹಿರಿಯರನ್ನು ಕೇಳಿ ಕರೆದುಕೊಂಡು ಹೋಗಬಹುದು" ಎಂದುತ್ತರವಿತ್ತನು. ಗುಂಡೂರಾಯರಿಗೆ ಸೊಸೆಯನ್ನು ಕಳುಹಿಸಲು ಸ್ವಲ್ಪವೂ ಇಷ್ಟವಿಲ್ಲ. ಆದರೆ ಶಾಮರಾಯರು ಊರಿನಲ್ಲಿದ್ದರೆ ಲಕ್ಷ್ಮಿಗೆ ತುಸು ಚಿಂತೆ ಕಡಿಮೆಯಾಗಬಹುದೆಂದೂ, ಪ್ರಸವ ನಡೆದರೆ ರಾಘುವಿನ ಮನಃಸ್ಥಿತಿಯೂ ಬದಲಾಯಿಸಬಹುದೆಂದೂ ಅಭಿಪ್ರಾಯಪಟ್ಟರು. ಲಕ್ಷ್ಮಿಗೆ ಊರಿಗೆ ಹೋಗುವುದಕ್ಕಿಂತ ಇಲ್ಲಿರುವುದೇ ಬಹಳ ಸಮ್ಮತಿಯಿದ್ದಿತು. ಇಲ್ಲಾದರೂ ಒಂಟಿಯಾಗಿರಬಹುದು. ಊರಿನಲ್ಲಿ ನಾಲ್ಕು ಜನಕ್ಕೆ ಮುಖ ತೋರಿಸುವ ಬಗೆ ಹೇಗೆ ಎಂದು ಯೋಚಿಸುತ್ತಿದ್ದಳು. ಆದರೆ ಅವಳ ಯೋಚನೆಯೇನೂ ಈಗ ನಡೆಯಲಿಲ್ಲ. ಕುಟ್ಟಪ್ಪ "ಜೀಪ್‌ನಲ್ಲಿ ಹೋಗಬಹುದಲ್ಲಾ, ಗಾಡಿಗಿಂತ ಜೀಪ್ ಒಳ್ಳೆಯದಲ್ಲವೇ" ಎಂದಾಗ, ಶಾಮರಾಯರು "ಅದೇನೋ ಸರಿ. ಈಗ ಬೆಳಸಿನ ಕಾಲ. ಅಕ್ಕಪಕ್ಕದಲ್ಲಿ ಬಿಡಲು ಸಾಧ್ಯವಿಲ್ಲ. ದಾರಿಯಲ್ಲೇ ಸಾಗಬೇಕು. ಜೀಪ್‌ಗಿಂತ ಈಗ ಗಾಡಿಯೇ ಉತ್ತಮ" ಎಂದುತ್ತರವಿತ್ತರು. ಗುಂಡೂರಾಯರು "ನನಗೇನೂ ಈಗ ಚಿಂತೆಯಿಲ್ಲ, ಕಾಡುಸೀಮೆ: ವೈದ್ಯ ಸಹಾಯ ಕಡಿಮೆಯಲ್ಲಾ

ಎಂದು ಯೋಚಿಸುತ್ತೇನೆ ಅಷ್ಟೆ" ಎಂದರು. ಅದಕ್ಕೆ ಶಾಮ ರಾಯರು ಪ್ರತ್ಯುತ್ತರ ಕೊಡುತ್ತ "ಇದಕ್ಕೇಕೆ ಚಿಂತೆ ಬಿಡಿ. ನಮ್ಮೂರಿನ ಸೂಲಗಿತ್ತಿಯರು ಇಲ್ಲಿನ ನುರಿತ ಡಾಕ್ಟರುಗಳಿಗಿಂತಲೂ ಕಣ್ಣಿಟ್ಟು ನೋಡಿಕೊಳ್ಳುತ್ತಾರೆ. ಹಳ್ಳಿಗಳಲ್ಲೆಲ್ಲ ಈಗ ಪ್ರಸವವಾಗುವುದಿಲ್ಲವೇ? ಎಲ್ಲರೂ ಪಟ್ಟಣಕ್ಕೆ ಓಡಿ ಬಂದಾರೇ?" ಎಂದರು. ಶಾರದಮ್ಮನವರು ಸೊಸೆಯನ್ನು ಕುಳ್ಳಿರಿಸಿಕೊಂಡು "ಮನಸ್ಸಿಗೆ ಏನೂ ಚಿಂತೆ ಹತ್ತಿಸಿಕೊಳ್ಳಬೇಡ ಲಕ್ಷ್ಮಿ. ಒಂದು ತಿಂಗಳು ಕಳೆದು ನಾನೂ ಬರುತ್ತೇನೆ. ಧೈರ್ಯವನ್ನು ಎಂದಿಗೂ ಕೈ ಬಿಡ ಬೇಡಮ್ಮ" ಎಂದು ಬೋಧಿಸಿದರು. ಲಕ್ಷ್ಮಿ ದೇವರ ಮನೆಗೆ ಹೋಗಿ ಪ್ರದಕ್ಷಿಣೆ ಸುತ್ತಿ ನಮಸ್ಕಾರ ಮಾಡಿ, ಅತ್ತೆ ಮಾವಂದಿರಿಗೂ ನಮಸ್ಕರಿಸಿದಳು. ಶಾಮರಾಯರು ಈಗ ಮಗಳೊಂದಿಗೆ ರೈಲೇರಿ ಮೈಸೂರನ್ನು ಬಿಟ್ಟರು.

## ೨೯

ಲಕ್ಷ್ಮಿ ಈಗ ತನ್ನ ತವರುಮನೆ ಬಂದು ಸೇರಿದಳು. ಜಾನಕಮ್ಮನವರ ದುಃಖ ಹೇಳತೀರದು. ಹೀಗುಂಟೆ ಎಂದು ಅಂಗಲಾಚುತಿದ್ದರು. ಲಕ್ಷ್ಮಿಗೆ ಎತ್ತನೋಡಿದರೂ ಕತ್ತಲು ಕವಿದಂತೆಯೇ ಕಾಣುತಿತ್ತು. ಮನೆಯಲ್ಲಿ ಅವಳಿಗೆ ಆರೈಕೆ ಮಾಡುವವರೇನೂ ಕಡಿಮೆಯಾಗಿರಲಿಲ್ಲ. ಅವಳು ಆಟವಾಡಿದ ಮನೆ, ಓಡಾಡಿದ ಮನೆ, ಓಡಾಡಿದ ತೋಟ, ಆ ವೃಂದಾವನ, ಈಗೆಲ್ಲ ಅವುಗಳು ಸಂತಸವನ್ನುಂಟುಮಾಡಲಿಲ್ಲ. ವಿಮಲಳು ದಿನವೊಂದಕ್ಕೆ ನೂರು ತಡವೆಯಾದರೂ, ಲಕ್ಷ್ಮಿ ಲಕ್ಷ್ಮಿ ಎಂದು ಏನೇನಾದರೂ ಮಾತುಕೊಟ್ಟು, ಅವಳ ಮನಸ್ಸಿನ ಭಾರವನ್ನು ತಗ್ಗಿಸಲು ಪ್ರಯತ್ನಿಸುತಿದ್ದಳು. ಲಕ್ಷ್ಮಿ ಈಗ ಮನೆ ಬಿಟ್ಟು

ಎಲ್ಲಿಗೂ ಕದಲುತ್ತಿರಲಿಲ್ಲ. ಮೈಸೂರಿನಿಂದ ಮಾತ್ರ ವಾರಾ ವಾರ ತಪ್ಪದೆ ಮಾವನಿಂದ ಪತ್ರ ಬರುತಿದ್ದುವು. ಅವಳು ಅನೇಕ ವೇಳೆ ತನ್ನ ಅತ್ತೆ-ಮಾವಂದಿರನ್ನು ನೆನೆದುಕೊಳ್ಳು ತಿದ್ದಳು. ಎಂಥ ಕರುಣ ಹೃದಯ ಅವರದು. ಪಾಪ! ಅವರನ್ನು ಬಿಟ್ಟು ಬಂದುದೇ ತಪ್ಪಾಯಿತೆಂದಂದುಕೊಳ್ಳುವಳು. ಧೈರ್ಯ ಮಾಡಿ ಪತಿಗೆ, ಕಂಪೆನಿ ವಿಳಾಸ ನಮೂದಿಸಿ, ಲಕ್ಷ್ಮಿ ನಾಲ್ಕಾರು ಪತ್ರಗಳನ್ನು ಬರೆದಳು. ಆದರೆ ರಾಘು ಯಾವುದಕ್ಕೂ ಪ್ರತ್ಯುತ್ತರ ಕೊಡಲಿಲ್ಲ. ಶಾಮರಾಯರು ಸಹ ಅಳಿಯನಿಗೆ ಒಂದೆರಡು ಪತ್ರ ಗಳನ್ನು ಬರೆದರು. ಆದರೆ ಅವನ ಮನಸ್ಸು ಮಾತ್ರ ಸ್ವಲ್ಪವೂ ಕರಗಲೇ ಇಲ್ಲ. ಅದು ಕಲ್ಲಿನಂತೆಯೇ ಇದ್ದಿತು. ಲಕ್ಷ್ಮಿ ಮನೆ ಬಿಟ್ಟು ಹೊರಟ ಮೇಲೆ ಗುಂಡೂರಾಯರಿಗೆ ಮನಸ್ಸೇ ಸರಿ ಇಲ್ಲದ ಹಾಗಾಯಿತು. ಬಲಿಷ್ಠವಾದ ದೇಹವನ್ನು ಅವರು ಪಡೆದಿದ್ದರೂ ಈಗ ನಿತ್ರಾಣ ಆವರಿಸಿ, ಅವರನ್ನು ಶಕ್ತಿ ಹೀನರನ್ನಾಗಿ ಮಾಡಿತ್ತು. ತಲೆ ಬಹಳ ನೋವೆಂದು ಒಂದು ದಿನ ಅವರು ಹಾಸಿಗೆ ಹಾಸಿ ಮಲಗಿದರು. ಆ ದಿನವೇ ಅವರಿಗೆ ಸ್ವಲ್ಪ ಜ್ವರವೂ ಬಂದಿತು. ಏನೋ ಎಂದು ಅವರು ಅಜಾಗ್ರತೆ ಯಾಗಿಯೇ ಇದ್ದು ಬಿಟ್ಟರು. ಈಗ ಪ್ರತಿನಿತ್ಯವೂ ಅವರಿಗೆ ಜ್ವರ ಬರುತಿದ್ದು ಹಾಸಿಗೆಯನ್ನು ಬಿಟ್ಟೇಳುವುದಕ್ಕೆ ಅವರಿಂದಾಗು ತ್ತಿರಲಿಲ್ಲ.

## ೨೦

ವ್ಯಾಪಾರ ಮಾಡಿ ಲಾಭಗಳಿಸಲು ಎಲ್ಲರೂ ಪ್ರಯತ್ನಪಡು ತಿದ್ದರೆ, ರಾಘು ಮಾತ್ರ ನಷ್ಟಕ್ಕೆ ಇದ್ದುದನ್ನೆಲ್ಲ ಕಳೆದುಕೊಳ್ಳುತಿ ದ್ದನು. ಹಾಗೆಂದ ಮಾತ್ರಕ್ಕೆ ಅವನು ಮಾಡುತಿದ್ದ ವ್ಯಾಪಾರ ದಲ್ಲಿ ಲಾಭವಿಲ್ಲವೆಂದಲ್ಲ. ದುಂದುಗಾರಿಕೆಯಿಂದ ಅವನು ನಷ್ಟ

ಕ್ಕೊಳಗಾಗುತಿದ್ದನು. ಕುಡಿತ, ಮೆರೆತದಲ್ಲಿ ಅವನು ಲೀನನಾಗಿ ಹೊರಗೂ ಸಾಲತೆಗೆಯಲು ಪ್ರಯತ್ನಿಸುತಿದ್ದನು. ಮೊದಲು ಐನೂರು, ಆಮೇಲೆ ಐನೂರು. ಬೊಂಬಾಯಿಗೆ ಹೋಗುವಾಗ ತೆಗೆದಿದ್ದ ಸಾಲವನ್ನು ಸ್ವಲ್ಪವನ್ನೂ ಅವರು ತೀರಿಸಿರಲಿಲ್ಲ. ಸಂಖ್ಯೆ ಕ್ರಮೇಣ ದಿನ ದಿನಕ್ಕೆ ಹೆಚ್ಚುತ್ತ ಬಂದಿತು. ಚಕ್ರ ಬಡ್ಡಿ, ಚಾಲ್ತಿಬಡ್ಡಿಗೆಂದು ಕೊಟ್ಟು ಕೊಟ್ಟು ಸುಲಿದು ತಾವು ಮುಂದಕ್ಕೆ ಬರುವ ಸಾಹುಕಾರರುಗಳು ಅವನು ಕೇಳಿದಾಗಲೆಲ್ಲ ಸಾಲ ಕೊಟ್ಟು ಅವನಿಂದ “ಪ್ರಾಂಸರಿ ನೋಟು” ಬರೆಯಿಸಿ ಕೊಳ್ಳುತಿದ್ದರು. ತಂದೆ ಹಾಸಿಗೆ ಬಿಟ್ಟು ಏಳುವುದಿಲ್ಲವೆಂದ ಮೇಲೆ ಇನ್ನೂ ಮನೆಗೆ ಬಾರದಿರುವುದು ಸರಿಯಲ್ಲವೆಂದು, ಈಗ ವನು ಮನೆಗೆ ಬರುತಿದ್ದನು. ಗುಂಡೂರಾಯರನ್ನು ಆಸ್ಪತ್ರೆಗೆ ಸಾಗಿಸಿ ಬೆಡ್‌ನಲ್ಲಿಡುವುದೇ? ಅಥವಾ ಪ್ರೈವೇಟ್ ಡಾಕ್ಟರ ಮೂಲಕ ಇಲ್ಲೇ ಚಿಕಿತ್ಸೆ ನಡೆಸುವುದೇ ಎಂಬ ಚರ್ಚೆಯಾಯಿತು. ಶಾರದಮ್ಮನವರ ಸೂಚನೆಯಂತೆ ಡಾಕ್ಟರ್ ವಿಜಯರಾಘವ ನನ್ನು ಕರೆತರಲಾಯಿತು. ಅವರು “ಟೈಫಾಯ್ಡ್” ಎಂದರು. ಈಗ ಎಲ್ಲರೂ ಬೆಚ್ಚಿದರು. ಶುಶ್ರೂಷೆ ನಡೆಯ ಹತ್ತಿತು. ರಾಘು ಈಗ ಮೊದಲಿನ ಕೋಪವನ್ನೆಲ್ಲ ಮರೆತು, ತಂದೆಯ ಬಳಿಯಲ್ಲೇ ಇದ್ದು, ಡಾಕ್ಟರಿಗೆ ಬೇಕಾದ ಸಲಕರಣೆಗಳನ್ನೆಲ್ಲ ಒದಗಿಸಲಾರಂಭಿಸಿದನು. ಆದರೆ ಗುಂಡೂರಾಯರಿಗೆ ಗುಣ ವಾಗಲಿಲ್ಲ. ಯಮನ ಕರೆ ಅವರಿಗೆ ಬಂದಿತ್ತು. ಹಾಸಿಗೆ ಹಿಡಿದು ಮಲಗಿದ ಇಪ್ಪತ್ತೊಂದನೇ ದಿನದಲ್ಲಿ ಅವರು ಕಣ್ಣು ಮುಚ್ಚಿದರು. ಶಾರದಮ್ಮನವರು ಹೋಯೆಂದು ಕಣ್ಣೀರು ಸುರಿಸಿದರು. ದಶರಥ ರಾಜನು ಮಗನ ಚಿಂತೆಯಿಂದ ಪ್ರಾಣ ತೆತ್ತಂತೆ, ಗುಂಡೂರಾ ಯರು ಸೊಸೆಯ ಚಿಂತೆಯಿಂದ ಅಸುವನ್ನು ನೀಗಿದರು. ಪಾಳ್ಯಕ್ಕೂ ಪತ್ರ ಹೋಯಿತು. ಲಕ್ಷ್ಮಿ ಬಿಕ್ಕಿ ಬಿಕ್ಕಿ ಅತ್ತಳು. ತನ್ನನ್ನು ಕಂಡರೆ ಪ್ರಾಣ ಬಿಡುತಿದ್ದ ಮಾವ; ಸಾಯುವಾಗ

ಅವರ ಬಳಿಯಲ್ಲಿ ತಾನಿರಲಿಲ್ಲವಲ್ಲಾ ಎಂದತೀವ ವ್ಯಸನಪಟ್ಟಳು. ಕೊನೆಯ ಘಳಿಗೆಯಲ್ಲಾದರೂ ಅವರ ಮುಖದರ್ಶನ ಪಡೆದು ಬರುವ ಎಂದರೆ ಈಗದಕ್ಕೂ ಸಾಧ್ಯವಿರಲಿಲ್ಲ. ಏಕೆಂದರೆ ಈಗ ವಳಿಗೆ ಎಂಟು ತಿಂಗಳು ನಡೆಯುತ್ತ ಇದೆ. ಇನ್ನೇನು ಪ್ರಸವ ಸಮಯ. ಮನೆ ಹೊಸ್ತಿಲನ್ನ ದಾಟಿ ಈಚೆಗೆ ಕಾಲಿಡಲೂ ಅವ ಳಿಂದ ಸಾಧ್ಯವಿರಲಿಲ್ಲ. ಶಾಮರಾಯರು ಅವಸರ ಅವಸರವಾಗಿ ಮೈಸೂರಿಗೆ ಪ್ರಯಾಣಮಾಡಿದರು. ಗುಂಡೂರಾಯರ ಅಂತಿಮ ಕ್ರಿಯೆಗಳಲ್ಲಿ ಅವರೂ ಭಾಗವಹಿಸಿಕೊಂಡರು. ಆ ಎತ್ತರದ ದೇಹ ಘಂಟೆಗಳ ಲೆಕ್ಕದಲ್ಲಿ ಸುಟ್ಟು ಬೂದಿಯಾಯಿತು. ಕ್ರಿಯಾ ದಿಗಳು ಮುಗಿಯುವವರೆಗೂ ಶಾಮರಾಯರು ಮೈಸೂರಿನಲ್ಲೆ ಉಳಿದರು. ರಾಘು ಈಗ ಪುರೋಹಿತರ ಬಂದಿಯಾಗಿ ಅವರು ಹೇಳಿದ ಹಾಗೆಲ್ಲ ಮಾಡುತಿದ್ದನು. ಅವನು ಕಚ್ಚೆಹಾಕಿದುದು ಇದು ಎರಡನೆಯ ತಡವೆ. ಮೊದಲನೆಯ ಬಾರಿ ತನ್ನ ವಿವಾ ಹಕ್ಕೆ, ಈಗ ಅಪ್ಪನ ಕರ್ಮಕ್ಕೆ. ಶ್ರಾದ್ಧ ಕರ್ಮಗಳೆಲ್ಲ ಮುಗಿದ ಮೇಲೆ ಅಳಿಯನಿಗೆ ಬುದ್ಧಿ ಹೇಳಿ, ಶಾರದಮ್ಮನವರನ್ನು ಸಮಾ ಧಾನಪಡಿಸಿ, ಶಾಮರಾಯರು ಊರಿಗೆ ಹಿಂದಿರುಗಿದರು. ಶಾರದ ಮ್ಮನವರು ಈಗ ತಲೆ ಬೋಳಿಸಿ ಕೆಂಪು ಸೀರೆಯುಟ್ಟರು. ಅವರು ವಯಸ್ಸು ಕಳೆದ ಹೆಂಗಸಾದರೂ, ಒಂದು ಕೂದಲು ಸಹ ಅವ ರಿಗೆ ನರೆತಿರಲಿಲ್ಲ, ಈಗ ಅವರ ದುಃಖ ಹೇಳತೀರದು. ಲಕ್ಷ್ಮಿಯ ಮೂಲಾನಕ್ಷತ್ರದ ದೋಷ ತಮ್ಮ ಪತಿಗೆ ಬಡಿದು ಅವರು ಮೃತ ರಾದರೆಂದು ಬಾಯಿಬಿಟ್ಟೇ ಅವರನ್ನುತಿದ್ದರು ಮಣ್ಣುತಿನ್ನುವ ಕೆಲಸ ಮಾಡಿಕೊಂಡುದಾಯಿತು. ಮೂಲಾನಕ್ಷತ್ರವಲ್ಲದಿದ್ದರೆ ತಮ್ಮ ಪತಿ ಸಾಯುತ್ತಲೇಯಿರಲಿಲ್ಲ ಎಂದು ಗೊಣಗುತಿದ್ದರು. ರಾಘುವನ್ನೂ ಸಹ ಅವರು ನಿಂದಿಸುತಿದ್ದರು. ಅವನು ಒಳ್ಳೆಯ ನಡತೆಯಲ್ಲಿದ್ದಿದ್ದಲ್ಲಿ ಶ್ರೀನಿವಾಸರಾಯರೇ ಹೆಣ್ಣು ಕೊಡುತಿದ್ದರು. ಎಲ್ಲಿ ಹುಡುಕಿದರೂ ಆಗವನಿಗೆ ಹುಡುಗಿಯನ್ನು ಕೊಡಲು

ಯಾರೂ ಮುಂದೆ ಬರಲಿಲ್ಲವಲ್ಲಾ ಎಂದು, ಆಗಿನ ಸಂದರ್ಭ ಅವರಿಗೆ ನೆನಪಿಗೆ ಬರುತಿತ್ತು. ಲಕ್ಷ್ಮಿಯನ್ನು ನಿಂದಿಸುವುದರ ಲ್ಲೇನೂ ಪ್ರಯೋಜನವಿಲ್ಲವೆಂದುಕೊಳ್ಳುತಿದ್ದರು.

## ೭೧

ಲಕ್ಷ್ಮಿಗೆ ಹೊಟ್ಟೆನೋವು ಪ್ರಾರಂಭವಾಯಿತು. ತಡಿಕೆ ಕಟ್ಟಿ ಪೂರ್ವದ ಸಾಲಿನಲ್ಲಿ ಸ್ಥಳವನ್ನೆಲ್ಲ ಸಿದ್ಧಪಡಿಸಿದ್ದರು. ಜಾನಕಮ್ಮನವರು ಮನೆ ತುಂಬ ಓಡಾಡುತಿದ್ದರು. ವಿಮಲಳೂ ಅತ್ತಿಂದಿತ್ತ ಸುತ್ತುತಿದ್ದಳು. ಅವಳಿಗೂ ಒಂದು ದಿನ ಈ ಸಡಗರವೆಲ್ಲ ಕಾದಿರುತ್ತವಲ್ಲವೆ? ಜಾನಕಮ್ಮನವರು ಸಹಾಯಕ್ಕೆ ಮಲ್ಲಿಯನ್ನು ಕರೆದುಕೊಂಡಿದ್ದರು. ಅವಳು ಕುಂಬಾರಿತಿಯಾದರೂ ಊರವರೆಲ್ಲ ಯಾವಾಗಲೂ ಸಹಾಯಕ್ಕೆ ಮಲ್ಲಿಯನ್ನೇ ಕರೆದುಕೊಳ್ಳುತಿದ್ದರು. ಅವಳಿಗೆ ಅನುಭವ ಜಾಸ್ತಿ. ಜಾನಕಮ್ಮನವರು ಮೊದಲನೇ ಪ್ರಸವವೆಂದು ಬಹಳ ಗಾಬರಿಯಿಂದ ವರ್ತಿಸುತಿದ್ದಾಗ ಮಲ್ಲಿ, "ಸುಮ್ನಿರಿ, ಜಾನ್ಕವ್ವ. ಯಾತಕ್ಕೆ ಭಯಪಟ್ಟರಿ!" ಎನ್ನುತಿದ್ದಳು. ಅವಳು ಕೈಯಲ್ಲಿ ಚಾಕು, ನೂಲು, ಇನ್ನೂ ಏನೇನೋ ಹಿಡಿದಿದ್ದಳು. ಲಕ್ಷ್ಮಿಗೆ ಯಾತನೆಯನ್ನು ತಡೆಯಲಾಗಲಿಲ್ಲ. ಅವಳು ಗಟ್ಟಿಯಾಗಿಯೇ "ಅಮ್ಮಾ ಅಮ್ಮಾ" ಎಂದು ಕೂಗಲಾರಂಭಿಸಿದಳು. ರಾಮು ಗಡಗಡನೆ ನಡುಗಲಾರಂಭಿಸಿದನು. ಶಾಮರಾಯರು ಶತಪಥ ತಿರುಗುತಿದ್ದರು. ಇಂಥ ಸಂದರ್ಭದಲ್ಲಿ ಗಂಡಸರಿಂದ ಏನಿದೆ ಹೇಳಿ. ತುಸು ಸಮಯ ಕಳೆದ ಮೇಲೆ "ಕ್ವಾ, ಕ್ವಾ, ಕ್ವಾ" ಎಂಬ ಶಬ್ದ ಕೇಳಿ ಬಂದಿತು. ವಿಮಲ ಒಳಗಿನಿಂದ ಓಡಿ ಬಂದು ಪತಿಯ ಕೂಡ, "ಗಂಡೂಂದ್ರೆ" ಎಂದು ನಗುತ್ತ ನುಡಿದಳು. ಎಲ್ಲರ ಮುಖದಲ್ಲೂ ಈಗ ಹರ್ಷವುಕ್ಕೇರಿತು.

ಪ್ರಸವ ವೇದನೆಯಿಂದ ಮಗು ಜನಿಸಿದ ಮೇಲೆ ಅರ್ಧ ಘಂಟೆಯ ವರೆಗೂ ಲಕ್ಷ್ಮಿಗೆ ಎಚ್ಚರವೇ ಇಲ್ಲ. ಆದರೆ ಮಲ್ಲಿ ಏನು ಸಾಮಾನ್ಯ ವ್ಯಕ್ತಿಯೇ? ಅವಳು ಸರಭರ ಕೆಲಸಮಾಡಿದಳು. ಏನೇನೋ ಮಾಡಿ ಲಕ್ಷ್ಮಿ ಕಣ್ಣು ಬಿಡುವಂತೆ ಮಾಡಿದಳು. ಅವಳು ನಗುನಗುತ್ತಲೇ ಜಾನಕಮ್ಮನವರಿಂದ ತಾಂಬೂಲ ಸ್ವೀಕ ರಿಸಿ, ಮತ್ತೊಂದು ತಡವೆ ಬರುತ್ತೇನೆಂದು ಹೇಳಿ ಹೊರಟು ಹೋದಳು. ಲಕ್ಷ್ಮಿ ಈಗ ಭಾವ ಪ್ರಪಂಚಕ್ಕೆ ಮೆಲ್ಲಮೆಲ್ಲಗೆ ಬರುತಿದ್ದಳು. ಮಗುವಿನ ಕ್‌ವಾ, ಕ್‌ವಾ ಶಬ್ದ ಕಿವಿಗೆ ಬಿದ್ದು, ತಾನೊಂದು ಮಗುವನ್ನು ಹೆತ್ತಿದ್ದೇನೆಂದು ಈಗವಳಿಗೆ ಅರಿ ವಾಯಿತು. ಮೆಲ್ಲಗೆ ಅವಳು ಪಕ್ಕಕ್ಕೆ ಹೊರಳಿದಳು. ಆಹಾ! ಪಿಲಿಪಿಲಿ ಕಣ್ಣುಬಿಟ್ಟು ಒದ್ದಾಡುತ್ತ, ಕೃಷ್ಣ ವಿಗ್ರಹದಂತೆ, ಮುದ್ದಾದ ಆ ಮಗುವನ್ನು ನೋಡಿ ಅವಳಿಗಾದ ಆನಂದ ಅಷ್ಟಿಷ್ಟಲ್ಲ. ಅದರ ದೇಹದ ಮೇಲೆ ಮೆಲ್ಲ ಮೆಲ್ಲಗೆ ಕೈಯಾಡಿ ಸುತ್ತ ಅವಳು ಸಂತಸಪಟ್ಟಳು. ಪುತ್ರೋತ್ಸವ ಸುಗಮವಾಗಿ ನಡೆಯಿತೆಂದು, ಪಾಳ್ಯದಿಂದ ಬಂದ ಪತ್ರವನ್ನು ಓದಿನೋಡಿ, ಶಾರದಮ್ಮನವರು ಹಿಗ್ಗಿಹೋದರು. ಅವನಿಗೂ ಮನಸ್ಸಿನಲ್ಲಿ ಅಪರಿಮಿತಾನಂದವೇ? ಈಗ ಶಾರದಮ್ಮನವರು "ನೀನು ಮೊದಲು ಹೋಗಿ ಮಗುವನ್ನು ನೋಡಿಕೊಂಡು ಬಾ. ನೀನು ಬಂದ ಮೇಲೆ ನಾನೊಂದು ಎಂಟು ದಿನ ಇದ್ದು ಬರುತ್ತೇನೆ" ಎಂದರು. ರಾಘುವಿಗೆ ಈಗ ಪಾಳ್ಯಕ್ಕೆ ಹೋಗಲು ಸ್ವಲ್ಪ ಸಂಕೋಚವೇ. ಆದರೆ ಮಕ್ಕಳ ಪಾಶ ಅವನನ್ನು ಬಿಡುತ್ತದೆಯೇ? ಅವನೆಷ್ಟೇ ದುಷ್ಟಟವುಳ್ಳವನಾಗಿದ್ದರೂ ಅವನೂ ಮಾನವ ತಾನೆ? ಮಾನವನಿಗಿರಬೇಕಾದ ಗುಣಗಳು ಅವರಲ್ಲೂ ಇದ್ದೇ ಇರುತ್ತದಲ್ಲವೇ? ಮಗುವನ್ನು ನೋಡಬೇಕೆಂಬ ಆಸೆ ಅವನಿ ಗಧಿಕವಾಯಿತು. ಬರುತ್ತೇನೆಂದು ಕೂಡ ಪತ್ರ ಬರೆಯದೆ ಅವನು ಪಾಳ್ಯಕ್ಕೆ ನಡೆದನು. ರಾಘು ಬಂದದ್ದನ್ನು ಕಂಡು

ಎಲ್ಲರಿಗೂ ಆನಂದವಾಯಿತು. ವಿಮಲ ಒಳಗೆ ಓಡಿಹೋಗಿ ಲಕ್ಷ್ಮಿಯ ಕೂಡ "ನಿನ್ನ ಪತಿದೇವರು ಬಂದಿದಾರೆ ಕಣೇ" ಎಂದು ಹೇಳಿದಳು. ಲಕ್ಷ್ಮಿಗೆ ಈಗ ಸ್ವರ್ಗವೇ ಕೈಗೆ ಸಿಕ್ಕಿದ ಹಾಗಾಯಿತು. "ಸುಮ್ಮನೆ ಏಕಮ್ಮಾ ಚಿಂತೆ ಹತ್ತಿಸಿ ಕೊಳ್ಳು ತ್ತೀಯೆ? ಮಗು ಅಂತ ಒಂದು ಆದ ಒಡನೆ ಅವನು ಇಲ್ಲಿಗೆ ಓಡಿಬರುತ್ತಾನೋ ಇಲ್ಲವೋ ನೋಡು" ಎಂದು ಒಂದು ದಿನ ತಂದೆಯಂದಿದ್ದ ಮಾತು ಅವಳಿಗೀಗ ನೆನಪಾಯಿತು. ರಾಘು ಹೊಸ್ತಿಲ ಬಳಿ ಕುಳಿತು ಮಗುವನ್ನು ನೋಡ ಹತ್ತಿದನು. ಅಬ್ಬಾ! ಎಷ್ಟು ದಿನದ ಮೇಲೆ ಪತಿ ತನ್ನನ್ನು ಈಗ ಸಲಿಗೆಯಿಂದ ಮಾತನಾಡಿಸುತಿದ್ದಾರೆ. ತಾನು ಕಾಣುವುದೆಲ್ಲ ಸ್ವಪ್ನವೋ ಎಂದವಳು ಭಾವಿಸಿದಳು. ಹಳೆಯ ಮನಸ್ತಾಪಗಳೆಲ್ಲ ಈಗ ವರಿಗೆ ಮರೆತುಹೋಯಿತು. ಅವಳು ನಗು ನಗುತ್ತಲೇ "ನೋಡಿ ಮಗು ನಿಮ್ಮ ಹಾಗಿದೆ" ಎಂದಳು. ಅವನು "ಇಲ್ಲ ಇಲ್ಲ, ನಿನ್ನ ಹಾಗೆ" ಎಂದನು. ಕುಟ್ಟಪ್ಪನ ಸಂಧಾನ, ಶಾಮರಾಯರ ಹಿತೋಕ್ತಿ, ಶಾರದಮ್ಮನವರ ಬುದ್ಧಿವಾದ ಇವೆಲ್ಲ ಈಗ ಎಲ್ಲಿ? ಅವರವರೇ ಈಗ ರಾಜಿಯಾದರು. ಶಾಮರಾಯರು-ಹನ್ನೆರಡನೇ ದಿನ ನೀರು ಹಾಕಿದ ಮೇಲೆ ನೀವು ಮೈಸೂರಿಗೆ ಹೋಗುವಿರಂತೆ ಎಂದರು. ಅಲ್ಲಿ ಕಂಪೆನಿ ಬಿಟ್ಟಿದ್ದರೆ ಏನಾಗುತ್ತದೋ ಎಂಬ ಭೀತಿ ಅವನಿಗೆ. ಆದರೆ ಒಂದು ದಿನವಾದರೂ ಮಗುವನ್ನು ಮುದ್ದಿಟ್ಟುಹೋಗಬೇಕೆಂದು ಅವನಿಗೆ ಬಹಳ ಆಸೆ. ಲಕ್ಷ್ಮಿಯೂ ಪತಿಯ ಕೂಡ "ಇನ್ನು ನಾಲ್ಕೈದು ದಿನಕ್ಕೇನಂತೆ? ಇದ್ದು ಹೋಗಿ" ಎಂದಿದ್ದಳು. ಆ ಹನ್ನೆರಡನೇ ದಿನವೂ ಬಂದಿತು. ಲಕ್ಷ್ಮಿಗೆ ನೀರು ಹಾಕಿದುದಾಯಿತು. ರಾಘು ಆಮೇಲೂ ನಾಲ್ಕುದಿನ ತಂಗಿದ್ದನು. ಅವನೀಗ ಪತ್ನಿಯನ್ನೂ, ಮಗುವನ್ನೂ ಬಿಟ್ಟು ಕದಲುತ್ತಲೇ ಇರಲಿಲ್ಲ. ಲಕ್ಷ್ಮಿಯ ಕೂಡ ಅವನು ವಿನೋದವಾಗಿ ಮಾತಾಡುತಿದ್ದನು. ಅತ್ತೆಮಾವಂದಿರ ಅನು

ಮತಿ ಪಡೆದು, ಲಕ್ಷ್ಮಿಯ ಕೂಡ ಹೋಗಿ ಬರುತ್ತೇನೆಂದು ಹೇಳಿ ಅವನೀಗ ಮೈಸೂರಿಗೆ ಪ್ರಯಾಣಮಾಡಿದನು.

## ೭೨

ಶಾರದಮ್ಮನವರಿಗೆ ಈಗ ಲಕ್ಷ್ಮಿಯ ಮೇಲೆ ಕೋಪವಿದ್ದಿರಲಿಲ್ಲ. "ಅವರವರ ಹಣೆಬರಹ. ಆಯುಷ್ಯ ಮುಗಿದರೆ ತೀರಿತು. ಎಲ್ಲರೂ ಹೋಗಲೇ ಬೇಕು"—ಎಂದು ಸಮಾಧಾನಪಟ್ಟುಕೊಳ್ಳುತಿದ್ದರು. ಮಗ ಬಂದ ಮೇಲೆ ತಿಂಡಿ ತಯಾರು ಮಾಡಿಕೊಂಡು ತಾವೂ ಪಾಳ್ಯಕ್ಕೆ ಹೋಗಿ, ಎಂಟು-ಹತ್ತುದಿನ ಇದ್ದು ಬಂದರು. ಈಗ ರಾಘುವಿಗೆ ಬಹಳ ಸಾಲವೇರಿತ್ತು. ಮಾರ್ವಾಡಿ ಸೇಠುಗಳಿಂದ ಅವನು ಬಹಳ ಹಣವನ್ನು ತೆಗೆದಿದ್ದನು. ಕಂಪೆನಿಯ ಲಾಭ ಬಡ್ಡಿ ಕಟ್ಟುವುದಕ್ಕೇ ಸಾಲುತ್ತಿರಲಿಲ್ಲ. ವ್ಯಾಪಾರಮಾಡುವ ಇಲ್ಲಿನ ಮಾರ್ವಾಡಿ ಸೇಠುಗಳೇನು? ಕಾಗೆಗಳ ಹಾಗೆ; ಜೀವ ಸಹಿತವೇ ಸುಲಿದು ಬಿಡುತ್ತಾರೆ. ಒಂದು ದಿನ ಬಡ್ಡಿ ಕಟ್ಟಲು ಸಹ ಅವನ ಕೈನಲ್ಲಿ ಹಣವಿಲ್ಲದೆ, ಏನೋ ಯೋಚನೆಮಾಡಿ ಅವನು ಸರೋಜಳ ಮನೆಗೆ ನಡೆದನು. ಸರೋಜಳ ಕೂಡ ಅವನು "ಬಹಳ ಕಷ್ಟದಿಂದೇನೆ ಸರೋಜ. ನಿನ್ನ ಚಿನ್ನದ ಸರ ಸ್ವಲ್ಪಕೊಡು. ಬ್ಯಾಂಕ್‌ನಲ್ಲಾದರೂ ಗಿರವಿಯಿಟ್ಟು ಹಣ ಕಟ್ಟುತ್ತೇನೆ. ಎರಡು ವಾರದೊಳಗಾಗಿ ಹೇಗಾದರೂ ಮಾಡಿ ನಿನಗೆ ವಾಪಸ್ ಕೊಡುತ್ತೇನೆ" ಎಂದನು. ಅವಳೇನು ಹುಚ್ಚಿಯೆ? ರಾಘು ಪಾಳ್ಯಕ್ಕೆ ಹೋಗಿ ಬಂದುದು, ಈಗ ತನ್ನಲ್ಲಿಗೆ ಸರಿಯಾಗಿ ಬಾರದಿರುವುದು, ಇದನ್ನೆಲ್ಲ ಅವಳು ಗಮನಿಸಿಯೇ ಇದ್ದಳು. ಎಷ್ಟೆಂದರೂ ತಾನು ಸೂಳೆ. ರಾಘು ತನಗೆ ಎಷ್ಟೇ ಅಭಯ ವಿತ್ತರೂ ಸತಿಯನ್ನು ತೊರೆಯುವುದುಂಟೇ? ಏನೋ ನಾಲ್ಕು ನಾಲ್ಕು ದಿವಸದ ಜಗಳ. ಇನ್ನೊಂದೆರಡು ಮಕ್ಕಳಾದ ಮೇಲೆ

ಅವನು ತನ್ನನ್ನು ಹಾಳಿಸುವನೇ ? ಏನೋ ನಡೆದಷ್ಟು ದಿನಲಾಭ. ಅವಳು ಇಂಥದುದರಲ್ಲೆಲ್ಲ ಏಮಾರುವ ಹಾಗಿರಲಿಲ್ಲ. ತಾನೀಗ ಸರ ಕೊಟ್ಟರೆ ಅವನು ಮರಳಿ ಕೊಡುವನೆಂಬ ನಂಬಿಕೆ ಹೇಗೆ ? ಅವನು ಮನೆಗೆ ಬರುತ್ತಾನೆಂದಾದರೂ ನಂಬುವ ಬಗೆ ಹೇಗೆ ? ಆಮೇಲೆ ಯಾವ ಕೋರ್ಟಿಗೆ ಹೋಗಿ ತನ್ನ ನಗ ಕೊಡಿಸಿಕೊಡಿ ಎಂದು ಫಿರ್ಯಾದು ಮಾಡುವುದು ? ಇದನ್ನೆಲ್ಲ ಈಗವಳ್ಳು ಯೋಚಿಸಿ, ನಿಷ್ಠೂರವಾಗಿ ಅವನ ಕೂಡ ಮಾತನಾಡಬಾರದೆಂದು, ಸ್ನೇಹಿತೆಯರ ಕೂಡ ನಾನೀದಿನ ಕನ್ನಂಬಾಡಿ ಕಟ್ಟೆಗೆ ಹೋಗಿ ಬರುತ್ತೇನೆ. ನಾಳೆ ನೀವು ಸರ ತೆಗೆದುಕೊಂಡು ಹೋಗುವಿರಂತೆ" ಎಂದಳು. ನಿಜವೆಂದು ನಂಬಿ ರಾಘು ಹಿಂದಿರುಗಿದನು. ಈಗವಳು ರಾಘು ಮಾಡಿಸಿಕೊಟ್ಟಿದ್ದ ನಗ ನಟ್ಟುಗಳೆಲ್ಲವನ್ನೂ ಕಳೆದು ಪೆಟ್ಟಿಗೆಯಲ್ಲಿಟ್ಟು ಭದ್ರಮಾಡಿದಳು. ಮಾರನೆಯ ದಿನ ರಾಘು ಬಂದಾಗ, ಅಳುವಂತೆ ಅವಳು ನಟನೆ ಮಾಡುತ್ತ, "ನೋಡಿ, ನಿನ್ನೆ ಸರ ಹೇಗೆ ಹೋಯ್ತು ಎನ್ನುವುದೇ ನನಗೆ ಗೊತ್ತಾಗಲಿಲ್ಲ. ಕೊಂಡಿಯೇನಾದರೂ ಕಳೆದು ಹೋಯ್ತೋ ಏನೋ ಯಾರು ಬಲ್ಲರು." ಎಂದುತ್ತರ ಕೊಟ್ಟಳು. ರಾಘು ಈಗ ಎಲ್ಲವನ್ನೂ ಗ್ರಹಿಸಿಕೊಂಡನು. ತಡೆಯಲಾರದಷ್ಟು ಕೋಪ ಉಕ್ಕೇರಿಬಂದಿತು. "ನನ್ನ ಸಂಪಾದನೆಯನ್ನೆಲ್ಲ ನಿನಗೆ ಸುರಿದಿದ್ದೇನಲ್ಲಾ, ನನ್ನ ಕಷ್ಟದಲ್ಲೀಗ ಸ್ವಲ್ಪ ಭಾಗವಹಿಸಲು ನೀನು ಸಮ್ಮತಪಡಲಿಲ್ಲವಲ್ಲವೇ ? ಇನ್ನು ನಿನ್ನ ಮುಖ ದರ್ಶನವನ್ನೂ ಮಾಡುವುದಿಲ್ಲ" ವೆಂದು ಹೊರಬಂದನು. ಸರೋಜ ಒಳಗೊಳಗೆ ನಕ್ಕಳು. ನೀನು ಇಲ್ಲದಿದ್ದಲ್ಲಿ ನನಗೇನು ನಷ್ಟವಾಯಿತು. ಮೈಸೂರಿನಲ್ಲಿ ನನಗೆ ಆಳೇ ಸಿಕ್ಕುವುದಿಲ್ಲವೇ ?— ಎಂದುಕೊಂಡಳು.

## ೭೩

ರಾಘುವಿಗೀಗ ಕಷ್ಟಕಾಲ ಪ್ರಾರಂಭವಾಯಿತು. ವಿಧಿ ಈಗವನನ್ನು ಶೋಧಿಸಹತ್ತಿತು. ಹೆಚ್ಚು ನರಳದೆಯೇ ಶಾರದಮ್ಮ ನವರೂ ಈಗ ತೀರಿಕೊಂಡರು. ರಾಘು ತಲೆಯಮೇಲೆ ಕೈಹಾಕಿ ಕುಳಿತುಕೊಂಡನು. ಲಕ್ಷ್ಮಿ ಒಂದು ತಿಂಗಳ ಬಾಣಂತಿಯಾಗಿ ದ್ದರೂ ಮಾವ ಸಾಯುವಾಗ ಮುಖವನ್ನು ನೋಡಲಾಗಲಿಲ್ಲ, ಈಗ ಅತ್ತೆಯ ಮುಖದರ್ಶನವನ್ನಾದರೂ ಪಡೆಯೋಣವೆಂದು-ಮಗುವಿನ ಸಹಿತ ಗಂಡನ ಮನೆಗೆ ಬಂದೇಬಿಟ್ಟಳು. ಜಾನಕಮ್ಮ ನವರೂ, ಶಾಮರಾಯರೂ, ಹದಿನೈದು ದಿನ ಮೈಸೂರಲ್ಲೇ ಉಳಿದಿದ್ದು, ಕರ್ಮಾದಿಗಳೆಲ್ಲ ಮುಗಿದ ಮೇಲೆ ಅಳಿಯನಿಗೆ ಬುದ್ಧಿವಾದ ಹೇಳಿ, ಹಿಂದಿರುಗಿದರು. ಮನಸ್ಸನ್ನು ಎಷ್ಟೇ ಬಿಗಿಮಾಡಿದರೂ ಬ್ರಾಂದಿ ಅಂಗಡಿಗೆ ಹೋಗುವುದನ್ನು ಮಾತ್ರ ನಿಲ್ಲಿಸಲು ರಾಘುವಿನಿಂದ ಸಾಧ್ಯವಾಗಲಿಲ್ಲ. ಆ ಚಟ ಜನ್ಮವ್ಯಾಧಿಯಂತೆ ಅವನಿಗೆ ಹತ್ತಿಕೊಂಡಿತ್ತು. ರಾಘುವಿನ ಮನೆಯಲ್ಲಿ ದಾರಿದ್ರ್ಯ ದಿನ ದಿನಕ್ಕೆ ಹೆಚ್ಚು ಹೆಚ್ಚು ತಾಂಡವವಾಡುತಿತ್ತು. ಎಷ್ಟೋ ದಿನ ತನ್ನ ಮನೆಯ ಪರಿಸ್ಥಿತಿಯನ್ನು ಕಂಡು ರಾಘು ಅತ್ತುಬಿಡುತಿದ್ದನು. ಲಕ್ಷ್ಮಿ ಊರಿಂದ ಬರುವಾಗ ಏನೇನೋ ಆಕಾಶ ಕೋಟೆ ಕಟ್ಟಿದ್ದಳು. ಆದರೆ ಅದೀಗ ಕಾರ್ಯದಲ್ಲಿ ಸಾಧ್ಯವಾಗಲಿಲ್ಲ. ಅವಳು ತನ್ನ ಮುದ್ದಾದ ಮಗುವನ್ನು ರಮೇಶ ಎಂದು ಕರೆಯಲಾರಂಭಿಸಿದಳು. ದಿನಗಳುರುಳುತಿದ್ದುವು. ಸಾಲಗಾರರ ಉಪದ್ರವವನ್ನು ರಾಘುವಿನಿಂದ ಸಹಿಸಲು ಈಗ ಸಾಧ್ಯವಾಗಲಿಲ್ಲ. ಸಾಲಕ್ಕೆ ವಾಸದ ಮನೆಯನ್ನೇ ಕೊಟ್ಟುಬಿಡುವುದೆಂದು ಅವನು ತೀರ್ಮಾನಿಸಿದನು. ಲಕ್ಷ್ಮಿಯ ಕಣ್ಣುಗಳಲ್ಲಿ ನೀರು ಉಕ್ಕಿ ಬಂದಿತು. ಊರಿಗಾದರೂ ಪತ್ರ ಬರೆಯೋಣ, ಅಪ್ಪನಾದರೂ ದಾರಿ ತೋರಿಸಿಕೊಟ್ಟಾರು ಎಂದಳು. ಆದರೆ ಮಾನ ರಾಘುವಿಗೆ ಅತಿಯಾಗಿ ಬಾಧಿಸುತಿತ್ತು. ಹಣ ಸಹಾಯ ಮಾಡಿ

ಕೊಡಿ ಎಂದು ಮಾವನನ್ನೂ ಮೈದುನನ್ನೂ ಕೇಳಲು ಸಂಕೋಚಪಟ್ಟು, ಕುಟ್ಟಪ್ಪನು ಬೇಡ ಬೇಡವೆಂದರೂ, ಸೇರಿನ ಸಾಲಕ್ಕೆ ಮನೆಯನ್ನೇ ಕಟ್ಟಿಬಿಟ್ಟನು. ಲಕ್ಷ್ಮಿ ತನ್ನ ಮನೆಯ ಪರಿಸ್ಥಿತಿಗಾಗಿ ಅತೀ ವ್ಯಸನ ಪಟ್ಟಳು. ಅದೆಂಥ ಭಾರಿ ಮನೆ! ಅತ್ತೆ ಮಾವಂದಿರಿದ್ದಿದ್ದರೆ ಹೀಗಾಗುತ್ತಿತ್ತೆ ಎಂದು ಮರುಗಿದಳು. ಈಗ ಇಪ್ಪತ್ತೈದು ರೂಪಾಯಿನ ಬಾಡಿಗೆ ಮನೆಯೊಂದರಲ್ಲಿ ಅವಳು ವಾಸಿಸಬೇಕಾಯಿತು. ಆ ಮನೆಯಲ್ಲಿದ್ದ ಸಾಮಗ್ರಿಗಳೆಲ್ಲವನ್ನೂ ಇರಿಸಿಕೊಳ್ಳುವುದಕ್ಕೇ ಈ ಬಾಡಿಗೆ ಮನೆಯಲ್ಲಿ ಸ್ಥಳ ಹಿಡಿಸುತ್ತಿರಲಿಲ್ಲ. ದೊಡ್ಡ ದೊಡ್ಡ ಬೀರುಗಳು, ಪೆಟ್ಟಿಗೆ, ಭಾರೀ ಚಿತ್ರಪಟಗಳು, ಇವನ್ನೆಲ್ಲ ರಾಘು ಮಾರಿಹಾಕಿದನು. ಇಂಥ ಸಾಮಾನುಗಳೆಲ್ಲವನ್ನೂ ಇನ್ನಿವರು ಮಾಡಿಸುವುದುಂಟೆ? ಇನ್ನು ಇವರಿಂದ ಕೊಳ್ಳಲಾಗುತ್ತದೆಯೇ? ಎಂದು ಲಕ್ಷ್ಮಿ ಬಹಳ ಮರುಕಪಟ್ಟಳು. ಶಾಮರಾಯರು ಮನೆಮಾರಿದುದಕ್ಕೆ ಆಕ್ಷೇಪಿಸಿ ಪತ್ರ ಬರೆದರು. ಪಾಳ್ಯದಿಂದ ಈಗ ರಾಮುವೂ ಬಂದನು. ಸಿರಿ ಬಂದಲ್ಲಿ ಯಾರನ್ನೂ ಕೇಳದೆಯೇ ತಾನಾಗಿಯೇ ಬರುವುದಂತೆ. ಅದು ಹೋಗುವಾಗಲೂ ಸಹ ಯಾರನ್ನೂ ಕೇಳುವುದಿಲ್ಲವಂತೆ. ಯಾರೊ ಹಿರಿಯರು ಅಂದಿದ್ದ ಒಂದು ಮಾತು ಈಗ ರಾಮುವಿಗೆ ನೆನಪಿಗೆ ಬಂದಿತು. ಮೊದಲು ಗುಂಡೂರಾಯರ ಮನೆ ಹೇಗಿತ್ತು; ಈಗ ಲಕ್ಷ್ಮಿ ಮನೆಯಲ್ಲಿರುವಾಗ ನಾನೊಬ್ಬ ಲಕ್ಷ್ಮಿ ಇಲ್ಲಿರುವುದೇಕೆಂದು ಬಹುಶಃ ಧನಲಕ್ಷ್ಮಿ ಹೊರಟುಹೋಗಿದ್ದಿರಬೇಕು. ರಾಮು ಎಲ್ಲವನ್ನೂ ವಿಚಾರಿಸಿಕೊಂಡನು. ಇಷ್ಟು ಸಾಲ ಇವರಿಗೆ ಹೇಗೆ ಏರಿತೆಂಬುದೇ ಅವನಿಗೆ ಬಗೆ ಹರಿಯದ ಪ್ರಶ್ನೆಯಾಗಿ ಉಳಿಯಿತು. ಎಲ್ಲವೂ ಪವಾಡದಂತೆಯೇ ನಡೆದು ಹೋಗಿತ್ತು. ರಾಮು ಈಗ ಊರಿಗೆ ಹಿಂದಿರುಗಿದನು. ಮೈಸೂರಿನ ವಿದ್ಯಮಾನಗಳನ್ನೆಲ್ಲ ಕೇಳಿ ಮನೆಯಲ್ಲಿ ಎಲ್ಲರೂ ವ್ಯಸನಪಟ್ಟರು. ರಾಘುವಿನ ಸಾಲ ಇನ್ನೂ ಬೇಕಾದಷ್ಟಿದೆಯೆಂದು ಕೇಳಿ ಎಲ್ಲರೂ

ಭಯಪಟ್ಟರು. “ಗುಂಡೂರಾಯರು ತೀರಿ ಹೋಗಿ ಎಂಟು ತಿಂಗಳು ತಾನೆ ಆಯಿತು. ಇಷ್ಟು ಸಾಲ ಹೇಗೆ ಏರಿತು” ಎಂದು ಜಾನಕಮ್ಮನವರು ಪ್ರಶ್ನಿಸಿದರು. ರಾಮು ಅದಕ್ಕೆ ಉತ್ತರ ಕೊಡುತ್ತ “ಹಾಗಲ್ಲಮ್ಮ, ಅಲ್ಲಿ ನಡೆದದ್ದು, ಗುಂಡೂರಾಯರು ಸತ್ತ ಮೇಲೆಯೇ ಈ ಸಾಲ ಉಂಟಾಗಲಿಲ್ಲ. ಕಂಪೆನಿ ಏರ್ಪಟ್ಟ ಮೇಲೆ ಅಂದಿನಿಂದಲೂ ಭಾವ ಹಣ ಸಾಲ ತೆಗೆಯುತ್ತಲೇ ಇದ್ದರು. ತಂದೆಗೆ ಮಾತ್ರ ಇದನ್ನವರು ತಿಳಿಯಪಡಿಸುತ್ತಿರಲಿಲ್ಲ. ಹಣವನ್ನೆಲ್ಲ ಪ್ಲೋಲು ಮಾಡುತ್ತಿದ್ದರು. ಭಾವ ಬೊಂಬಾಯಿಗೆ ಹೋಗಿದ್ದಾಗ, ಆಮೇಲೆ ಸಾವಿರ ಸಾವಿರ ಸಂಖ್ಯೆಯಲ್ಲಿ ಸಾಲ ತೆಗೆಯುತಿದ್ದರಂತೆ. ಕ್ರಮೇಣ ಇದು ಗುಂಡೂರಾಯರಿಗೆ ತಿಳಿದು ಅವರು ಸರಿಪಡಿಸಬೇಕೆನ್ನುವಷ್ಟರಲ್ಲಿ ತೀರಿಕೊಂಡರಂತೆ. ಕುಟ್ಟಪ್ಪ ನನಗೆಲ್ಲ ವಿವರವನ್ನೂ ಹೇಳಿದನು” ಎಂದನು. ಇಷ್ಟೆಲ್ಲ ಕಥಾಂತರ ಮುಗಿದಮೇಲೂ ರಾಘುವಿನ ಸಾಲ ಮುಗಿಯಲಿಲ್ಲ. ಅವನ ದುರದೃಷ್ಟಕ್ಕೋ ಏನೋ ಕಂಪೆನಿ ಈಗ ನಷ್ಟದಲ್ಲಿಯೇ ಓಡಲಾರಂಭಿಸಿತು. ತಂದೆಯಿದ್ದಾಗ ಕಂಪೆನಿಯಿಂದ ಹೆಚ್ಚು ಲಾಭ ದೊರಕುತ್ತಿದ್ದಾಗ, ಅವರು ಲೆಕ್ಕ ಕೇಳಿದರೆ ಸುಳ್ಳು ಹೇಳಿ, ಅವನು ನಷ್ಟದಲ್ಲಿದೆ ನಷ್ಟದಲ್ಲಿದೆ ಎನ್ನುತಿದ್ದನು. ಈಗ ಅವನ ಮಾತೇ ಸತ್ಯವಾಗಿ ತನ್ನ ಕೈಕೆಳಗಿನ ಕೆಲಸಗಾರರುಗಳಿಗೆ ಅವನು ಸಂಬಳ ಕೊಡಲು ಸಾಧ್ಯವಾಗಲಿಲ್ಲ. ಎರಡು ತಿಂಗಳ ಬಾಕಿ ಉಳಿಯಿತು. ಹುಚ್ಚಾಪಟ್ಟೆ ಅವರೆಲ್ಲರೂ ಕೂಗಾಡಲಾರಂಭಿಸಿದರು. ಈಗ ತಾನೇನು ಮಾಡಬೇಕೆಂಬ ಯೋಚನೆ ಅವನಿಗೆ ಹತ್ತಿತು. ಪತ್ನಿಯ ನಗ ನಟ್ಟು ಎಲ್ಲವನ್ನೂ ಈಗ ಮಾರಿದುದಾಯಿತು. ಬಿರುಕು ಬಹಳ ಬಿಟ್ಟದ್ದಿತು. ಇದರಿಂದೆಲ್ಲ ಅದನ್ನು ಮುಚ್ಚಲು ಸಾಧ್ಯವಾಗಲಿಲ್ಲ. ಕೊನೆಗೆ ಮನೆಯನ್ನು ಮಾರಿದಂತೆ “ಸುಗಂಧ” ಕಂಪೆನಿಯನ್ನೇ ಮಾರಿಬಿಡಬೇಕೆಂದು ಅವನು ನಿರ್ಧರಿಸಿದನು. ಈಗ ಲಕ್ಷ್ಮಿಪತಿಯನ್ನು ಕೇಳದೆಯೇ

ಅವಸರವಾಗಿ ಬರಬೇಕೆಂದು ತಂದೆಗೆ ಪತ್ರ ಬರೆದಳು. ತಂದೆಯೂ ಮಗನೂ, ಈಗ ಪಾಳ್ಯದಿಂದ ಹೊರಟು ಮೈಸೂರನ್ನು ಬಂದು ಸೇರಿದರು. ಕಾಲ ಮಿಂಚಿ ಹೋಗಿತ್ತು. ರಾಘು ಮಾತು ಕತೆಯೆಲ್ಲವನ್ನೂ ನಿಬಂಧನೆ ಮಾಡಿ ಮುಗಿಸಿದ್ದನು. ಆ ಮಹಾ ಪೂರವನ್ನು ಈಗ ತಡೆಯಲು ಇವರೆಲ್ಲರಿಗೂ ಸಾಧ್ಯವಾಗಲಿಲ್ಲ. ಅದಕ್ಕೆ ಮುಂಚಿತವಾಗಿಯೇ ವಾಸಿಮಾಡಬೇಕಾಗಿತ್ತು. ನದಿಗೆ ಸಾಮಾನ್ಯ ದಿನಗಳಲ್ಲಾದರೆ ನೀರು ತಡೆದು ಅಡ್ಡ ಗೋಡೆ ಹಾಕಬಹುದು. ತುಂಬಿದ ಪ್ರವಾಹ ಬಂದಾಗ ಸಾಧ್ಯವಾಗುತ್ತದೆಯೇ ? ತನ್ನ ಕಷ್ಟದಲ್ಲಿ ಮತ್ತಿತರರ ಸಹಾಯ ಪಡೆಯಲು, ಅದೂ ಬಂಧುವರ್ಗದವರಿಂದ, ರಾಘು ಇಷ್ಟಪಡಲಿಲ್ಲ. ಅದೊಂದು ವಿಧದ ದೊಡ್ಡಸ್ತಿಕೆ, ಬಿಗುಮಾನ ಅವನಲ್ಲಿ ಮನೆಮಾಡಿಕೊಂಡಿತ್ತು. ಈಗವನು " ಸುಗಂಧ " ಕಂಪೆನಿಯನ್ನೂ ಮಾರಿ ಬಿಟ್ಟನು. ಈಗ ಅವನ ಸಾಲವೆಲ್ಲ ಪೂರ್ಣ ತೀರಿತು. ಅವನ ಕೈನಲ್ಲಿ ಮುನ್ನೂರು ರೂಪಾಯಿಗಳೂ ಉಳಿಯಿತು. ಲಕ್ಷ್ಮಿ ವ್ಯಸನದಿಂದ ಕುಗ್ಗಿ ಹೋದಳು. ಹಾಸಿಗೆಯಲ್ಲಿ ಮಗುವನ್ನು ಮಲಗಿಸಿಕೊಂಡು ಯಾವಾಗಲೂ ಅವಳು ಕಣ್ಣೀರು ಸುರಿಸುತಿದ್ದಳು.

## ೭೪

ತಂದೆಯೂ, ಮಗನೂ ಈಗ ಕುಟ್ಟಪ್ಪನ ಕೂಡ ಮಂತ್ರಾಲೋಚನೆ ನಡೆಸಿದರು. ಇವನು ಯಾರ ಮಾತನ್ನೂ ಕೇಳುವುದಿಲ್ಲವಲ್ಲಾ ಎಂದು ಅತೀ ವ್ಯಸನ ಪಟ್ಟರು. ಶಾಮರಾಯರು ಎರಡು ವಿವಾಹ ಮಾಡಿ ಮುಗಿಸಿದ್ದುದರಿಂದ ಅವರೇ, ಅವರಿಂದ ಇವರಿಂದ, ಸಾಲ ಪಡೆದಿದ್ದರು. ಬೇರೆ ವ್ಯಾಪಾರವನ್ನಾದರೂ ಮಾಡೆಂದು ಹೇಳಿ, ಅವನಿಗೆ ಸ್ವಲ್ಪ ಹಣವನ್ನಾದರೂ ಒದಗಿಸಿ

ಕೊಡೋಣವೆಂದರೆ ಈಗದೂ ಸಾಧ್ಯವಾಗಿರಲಿಲ್ಲ. ಊರಿನಲ್ಲಿ ಅವರಿಗೆ ಒಳ್ಳೆಯ ಹೆಸರಿದ್ದಿತು. ಹೇಗಾದರೂ ಮಾಡಿ ಸಾಲ ಪಡೆಯಬಹುದು! ಆದರೆ ಮೈಸೂರಿನಂಥ ದೊಡ್ಡ ಪಟ್ಟಣದಲ್ಲಿ ಒಂದು ಚಿಕ್ಕ ವ್ಯಾಪಾರವನ್ನು ಮಾಡಲೂ ಸಾವಿರಗಟ್ಟಲೆ ಮೂಲ ಧನ ಹಾಕಬೇಕು. ವಾಸಕ್ಕೆ ದೊಡ್ಡದೊಂದು ಮನೆ, ವ್ಯಾಪಾರ ಮಾಡಲು ಬಾಡಿಗೆ ಇಲ್ಲದೆಯೇ ಸ್ವಂತ ಮನೆ, ಇಷ್ಟೆಲ್ಲ ಇದ್ದು ಲಾಭಗಳಿಸದವನು, ಇನ್ನು ಬಾಡಿಗೆ ಕೊಟ್ಟು, ವಿಚಕ್ಷಣೆಯಿಂದ ವ್ಯಾಪಾರ ಮಾಡುತ್ತಾನೆಂದು ಅವನನ್ನು ನಂಬುವ ಬಗೆ ಹೇಗೆ? ಅವನಿಗಲ್ಲದಿದ್ದರೂ ಮಗಳ ಮುಖವನ್ನು ನೋಡಿ ಹೇಗಾದರೂ ಒಂದು ದಾರಿ ಮಾಡಬೇಕು. ಈ ಸಂದರ್ಭದಲ್ಲಿ ಕುಟ್ಟಪ್ಪ ಒಂದು ಸಲಹೆ ಸೂಚಿಸಿದನು. ಅದೇನೊ ಅವರಿಗೆ ಹಿಡಿದಿರ ಬೇಕು. ಈಗ ರಾಮುವನ್ನೂ ಹಿಂದೆ ಮಾಡಿಕೊಂಡರು. ಕುಟ್ಟಪ್ಪನೂ, ಶಾಮರಾಯರೂ, ಧನಪಾಲ ಶೆಟ್ಟರ ಮನೆಗೆ ನಡೆದರು. ನಡೆದ ಸಂಗತಿಯೆಲ್ಲವನ್ನೂ ಶೆಟ್ಟರಿಗೆ ಕುಟ್ಟಪ್ಪ ವಿವರಿಸಿದನು. ಅವರಿಂದ ಸಹಾಯ ಕೋರಿದನು. “ಬಾಳಿ ಬದುಕಿದ ಮನೆ, ನೀವು ಕಡೆಗಣಿಸಬಾರದು” ಎಂದನು. ಶೆಟ್ಟರ ಮಾತೇನೂ ಈಗ ಹೆಚ್ಚಿಗೆ ನಡೆಯುವ ಹಾಗಿರಲಿಲ್ಲ. ವ್ಯಾಪಾರ ವಹಿವಾಟುಗಳಲ್ಲೆಲ್ಲ ಕೋದಂಡನೇ ಈಗ ಮುಂದಾಗಿದ್ದನು. ಆದರೂ ಶೆಟ್ಟರು ಅಭಿಮಾನವನ್ನು ಬಿಟ್ಟುಕೊಡಲಿಲ್ಲ. ಅರ್ಧ ಹಣ ತಾವು ಕೊಡುವುದಾಗಿಯೂ, ಮಿಕ್ಕರ್ಧ ಶಾಮರಾಯರೇ ಹಾಕಬೇಕೆಂದೂ, ಆದರೆ ತಮ್ಮ ಅನುಮತಿಯಿಲ್ಲದೆ ಯಾವುದಕ್ಕೂ ರಾಘು ಕೈ ಹಾಕಕೂಡದೆಂದೂ, “ಲೈಸನ್ಸ್” ತಮ್ಮ ಹೆಸರಿನಲ್ಲೇ ಇರಬೇಕೆಂದೂ, ಲಾಭದಲ್ಲಿ ಅರ್ಧರ್ಧ ಹಂಚಿಕೊಳ್ಳಬಹುದೆಂದೂ, ನುಡಿದರು. “ಈಗ ರಾಘುವನ್ನು ಕರೆದುಕೊಂಡು ಬನ್ನಿ ಅವನ ಕೂಡ ಮಾತಿದೆ” ಎಂದರು. ಶಾಮರಾಯರೂ, ಕುಟ್ಟಪ್ಪನೂ, ಏನೇನೆಲ್ಲ ಹೇಳಿದರೂ ಈ ವ್ಯಾಪಾರಕ್ಕೆ ರಾಘು

ಒಪ್ಪಲಿಲ್ಲ. ಮತ್ತೆ ಅದೇ ಕೋದಂಡನಲ್ಲಿಗೆ ಹೋಗುವುದೇ! ಛಿ, ಎಂಥ ಅವಮಾನ ಎಂದವನೆಣಿಸಿದನು. "ಮತ್ತೆ ಮುಂದಿನ ದಾರಿ ಹೇಗೆ" ಎಂದು ಶಾಮರಾಯರು ಪ್ರಶ್ನಿಸಿದಾಗ, ರಾಘು ಏನೊಂದುತ್ತರವನ್ನೂ ಕೊಡದೆ, ಮೌನವಾಗಿ ಕುಳಿತನು. "ಈವಾಗ ದೊಡ್ಡಸ್ತಿಕೆಯೆಲ್ಲ ನೋಡಲು ಸಾಧ್ಯವಿಲ್ಲ. ಅಪ್ಪ ಹೇಳಿದ ಹಾಗೆ ಮಾಡಿ" ಎಂದು ಲಕ್ಷ್ಮಿ ಅಂದಾಗ, ಅವನು ಅವಳನ್ನು ನುಂಗಿಬಿಡುವಂತೆ ದುರುಗುಟ್ಟಿಕೊಂಡು ನೋಡಿದನು. ಈ ವ್ಯಾಪಾರವೆಲ್ಲ ನನ್ನಿಂದ ಸಾಧ್ಯವೇಯಿಲ್ಲವೆಂದು ಬಿಟ್ಟನು. ನಾನು ಬೇರೆ ಏರ್ಪಾಡುಮಾಡುತ್ತೇನೆ ಎಂದನು. ಇನ್ನೆಲ್ಲಿ ಇವನು ಉಳಿದಿರುವ ಗದ್ದೆಯನ್ನೂ ಮಾರಿ ತಣ್ಣನೆ ಕುಳಿತುಕೊಳ್ಳುತ್ತಾನೋ ಎಂದು, ತಂದೆಯೂ, ಮಗನೂ ಬಹಳ ಭಯಪಟ್ಟರು. ಹೇಳಿದ ಮಾತು ಕೇಳದಿದ್ದಮೇಲೆ ಇನ್ನು ವಿಧಿಯಿದ್ದಂತಾಗಲಿ, ಲಕ್ಷ್ಮಿ ಇನ್ನೆಷ್ಟು ಕಷ್ಟಪಡಬೇಕೋ ಎಂದು ಮರುಗುತ್ತ, ಕೊರಗುತ್ತ, ಅವರೀರ್ವರೂ ಪಾಳ್ಯಕ್ಕೆ ಬಂದು ಸೇರಿದರು. ಹೆಚ್ಚು ಕಟ್ಟಿಕೊಳ್ಳದೆ ಚಿಕ್ಕ ವ್ಯಾಪಾರ ಮಾಡಬೇಕೆಂದು ರಾಘುವಿಗೆ ಆಸೆ. ಮೊದಲಿನ ಹಾಗೆ ಬಡ್ಡಿಗೆ ಗಿಡ್ಡಿಗೆ ತೆಗೆಯಲು ಅವನು ಇಷ್ಟಪಡಲಿಲ್ಲ. ಈ ಬಡ್ಡಿ ವ್ಯವಹಾರ ಅವನ ಜೀವನವನ್ನೇ ಹಾಳು ಮಾಡಿತ್ತು. ಮೇಲಾಗಿ ಸಾಲಕೊಡುವವರು ಎಲ್ಲರಿಗೂ ಸಾಲ ಕೊಡುತ್ತಾರೆಯೋ ? ಅವರಿಗೇನು ತಿಳಿಯದೆ ? ಮನೆಮಠ, ಆಸ್ತಿಪಾಸ್ತಿ, ಅವರವರ ವ್ಯವಹಾರ ಇವೆಲ್ಲವುಗಳನ್ನೂ ಅವರು ಗಮನಿಸಿಕೊಳ್ಳುತ್ತಾರೆ. ಈಗವನು ತನ್ನ ಮಿತ್ರರುಗಳನ್ನಾರನ್ನಾದರೂ ಹಿಡಿದು ಕಾರ್ಯನಡೆಸಬೇಕೆಂದು ನಿರ್ಧರಿಸಿದನು. ಮೈಸೂರಿನಲ್ಲಿ ಅವನಿಗೆ ಮಿತ್ರರ ಬಳಗವೇನೂ ಕಡಿಮೆಯಾಗಿರಲಿಲ್ಲ. ಆದರೆ ಅವನಿಗೆ ಕಷ್ಟದಲ್ಲಿ ಸಹಾಯಮಾಡಲು ಯಾರೂ ಮುಂದೆ ಬರಲಿಲ್ಲ. ಸಜ್ಜನರ ಮಿತ್ರತ್ವವಿದ್ದಲ್ಲಿ ಯಾರಾದರೂ ಮುಂದೆ ಬರುತಿದ್ದರು. ರಾಘುವಿನ ಮಿತ್ರರುಗಳೆಲ್ಲರೂ ಸಾಮಾನ್ಯ

ವಾಗಿ ಬ್ರಾಂದಿಕೋರರೇ. ಇದ್ದುದನ್ನೆಲ್ಲ ದೋಚಲು ಪ್ರಯತ್ನಿಸುವವರೇ. ರಾಘುವಿಗೆ ಈಗತಾನೆ ಪ್ರಪಂಚ ಹೇಗಿದೆಯೆಂಬ ಅರಿವಾಯಿತು. ಮಾವನಿಗೆ, ಅವರು ಸೂಚಿಸಿದ ಸಲಹೆಗೆ ಒಪ್ಪಿ, ಶೆಟ್ಟರಕೂಡ ಸೇರ್ರೋಣವೆಂದರೆ, ಅವಕ್ಕೂ ಈಗ ಕಾಲ ಮೀರಿ ಹೋಗಿತ್ತು. ಮೊದಲು ಶೆಟ್ಟರು ಕರೆಯಿಸಿದ್ದಾಗ ಅವರ ಆಜ್ಞೆಯನ್ನು ಅವನು ಉಲ್ಲಂಘಿಸಿದ್ದನು. ಈಗ ಯಾವ ಮುಖದಿಂದ ಅವರಲ್ಲಿಗೆ ಹೋಗುವುದು ? ಮಾವನಿಗೆ ಪತ್ರ ಬರೆಯುವ ಬಗೆಯಾದರೂ ಹೇಗೆ ?

೭೫

ದಿನಗಳುರುಳುತಿದ್ದುವು. ರಾಘುವಿನ ಮನಸ್ಸಿನಲ್ಲಿ ಭಯಂಕರವಾದದ್ದೊಂದು ಯೋಚನೆ ಉತ್ಪನ್ನವಾಯಿತು. ದಿನ ಕಳೆದಂತೆ ಅದು ಮೊಳೆತು, ಬೆಳೆಯುತ್ತ ಬಂದಿತು. ಮಾನವರಲ್ಲಿ ಎರಡು ವಿಧ. ಕಷ್ಟಕಾಲಗಳಲ್ಲಿ ಧೈರ್ಯಗೆಡದೆ, ಎದೆಗುಂದದೆ, ಕಾರ್ಯೋನ್ಮುಖರಾಗುವವರೊಂದು ಪಂಗಡ. ತಿಂಗಳಿಗೆ ಬರೇ ನಾಲ್ವತ್ತು-ಐವತ್ತು ರೂಪಾಯಿ ಸಂಬಳ ತೆಗೆದು ನಾಲ್ಕಾರು ಹೆಣ್ಣುಮಕ್ಕಳಿಗೆ ವಿವಾಹ ಮಾಡಿ, ಬಾಳ್ವೆಕೆಯನ್ನು ನಡೆಸುವವರೆಷ್ಟೋ ಮಂದಿಯನ್ನು ನೀವು ನೋಡಿಲ್ಲವೆ ? ಈ ದಿನದ ಹೊಟ್ಟೆಪಾಡು ಮುಗಿಯಿತು, ನಾಳೆಗೆ ಹೇಗೆ ಕಾಲ ತಳ್ಳುವುದು ಎಂಬ ಯೋಚನೆಯಿದ್ದರೂ, ಹುಂ, ಸರಿ ನೋಡೋಣ, ಎನ್ನುವವರೆಷ್ಟು ಮಂದಿ ಇದ್ದಾರೆ. ಕಷ್ಟದಲ್ಲೇ ತೊಳಲುತ್ತಿರುವವರಿಗೆ ಮೇಲ್ಮೇಲೆ ಕಷ್ಟವೊದಗಿದರೂ, ಅದನ್ನವರು ಸಹಿಸಿಕೊಳ್ಳುತ್ತಾರೆ. ಆದರೆ ಸುಖದ ಸಾಮ್ರಾಜ್ಯದಲ್ಲಿ ತೇಲುತಿದ್ದವರ ಮಾತು ಬೇರೆ. ಅವರಿಗೇನಾದರೂ ಭಾರಿ ಏಟು ಬಿದ್ದಲ್ಲಿ ಅದರ ಯಾತನೆಯನ್ನು ಅವರು ಸಹಿಸಿಕೊಳ್ಳಲಾರರು. ರಾಘು

ಸಾಮಾನ್ಯವಾಗಿ ಊಟ ಬಟ್ಟೆಗೆ ನೇರವಾಗಿ, ತಕ್ಕಮಟ್ಟಿಗೆ ಅನುಕೂಲಸ್ಥಿತಿಯಲ್ಲಿದ್ದವನು. ಎರಡು-ಎರಡೂವರೆ ವರ್ಷಗಳ ಕಾಲ ದೊಡ್ಡ ಕಂಪೆನಿಯೊಂದರ ಯಾಜಮಾನ್ಯವನ್ನು ವಹಿಸಿದ್ದವನು. ಅವನೀಗ ದಿವಾಳಿಯಾಗಿದ್ದಾನೆ. ಕಷ್ಟದಲ್ಲೂ ಎರಡು ವಿಧವಿದೆ. ಎಷ್ಟೇ ನಾವು ಸುಖಿಗಳಾಗಿ ಬಾಳಬೇಕೆಂದು ಪ್ರಯತ್ನಿಸುತಿದ್ದರೂ, ದುಡಿಯುತಿದ್ದರೂ ನಮ್ಮ ಪ್ರಯತ್ನಕ್ಕೆ ಮೀರಿ ಒದಗುವದೊಂದು ವಿಧದ್ದು. ಆದರೆ ಮತ್ತೊಂದು ವಿಧದ್ದೋ ಹಾಗಲ್ಲ. ಅದನ್ನು ನಾವಾಗಿಯೇ ನಮ್ಮ ದುಷ್ಕರ್ಮ, ದುರ್ಬುದ್ಧಿಯಿಂದ ತಂದುಕೊಳ್ಳುವುದು. ರಾಘು ಈ ಎರಡನೇ ವಿಧಕ್ಕೆ ಸೇರಿದವನು. ಮಿಗೆಯಾದ ತಾಳ್ಮೆ, ಸಹನೆ, ಅವನಿಗಿದ್ದಿದ್ದಲ್ಲಿ, ತನಗೀಗ ಒದಗಿದ ಗಂಡಾಂತರವನ್ನು ಅವನು ತಪ್ಪಿಸಿಕೊಳ್ಳಬಹುದಾಗಿದ್ದಿತು. ಅವನ ಎರಡು ಮನೆಗಳು ಅವನ ಕೈಯಿಂದ ಜಾರಿಹೋದರೂ, ಗದ್ದೆ ಮಾತ್ರ ಉಳಿದಿತ್ತು. ವರ್ಷದ ಜೀವನಕ್ಕೆ ಹೇಗೂ ಭತ್ತ ಬರುತ್ತದೆ. ಮೇಲಿನ ಖರ್ಚಿಗೆ ಅವನೆಲ್ಲಾದರೂ ಸೇರಿಕೊಂಡು, ನಾಲ್ವತ್ತು-ಐವತ್ತು ರೂಪಾಯಿ ಸಂಪಾದನೆ ಮಾಡಿದರೆ ಸಾಕು. ಜೀವನ ದಾಟಿ ಹೋಗುತ್ತದೆ. ಅಷ್ಟೇನೂ ಕಷ್ಟಪಡಬೇಕಾಗಿಲ್ಲ. ಆದರೆ ಹಾಗೆ ನಡೆಯಲು ರಾಘುವಿನಿಂದ ಸಾಧ್ಯವಾಗಿರಲಿಲ್ಲ. ಕಷ್ಟದಲ್ಲಿ ಧೃತಿಗೆಡದೆ ಇರಲು ಅವನದು ಪೊಳ್ಳು ಹೃದಯ. ಅವನ ಮನಸ್ಸೀಗ ಒಡೆದು ಚೂರು ಚೂರಾಗಿತ್ತು. ಅನುಕೂಲ ಸ್ಥಿತಿಯಲ್ಲಿದ್ದ ತಾನು, ಮತ್ತೊಬ್ಬರ ಬಳಿಗೆ ಹೋಗಿ ಹೇಗೆ ಚಾಕರಿ ಮಾಡುವುದು? ಇನ್ನು ಇದಕ್ಕಿಂತ ಹೆಚ್ಚಿನ ಅವಮಾನವಾಗಬೇಕೆ? ಮತ್ತೊಬರ ಬಳಿ ಕೈಕಟ್ಟಿ ಸೇವಾವೃತ್ತಿಗೈವುದೆಂದರೆ, ಅದೂ ತಾನು ಹುಟ್ಟಿ ಬೆಳೆದ ಒಂದೂರಿನಲ್ಲಿಯೇ-ಅವನಿಂದ ಸಾಧ್ಯವಿರಲಿಲ್ಲ. ಅನುಭವಿಸಿದರೆ ತಾನೆ ಕಷ್ಟ ಗೊತ್ತಾಗುತ್ತದೆ. ಚಂಚಲ ಮನಸ್ಕನಾದ ಅವನು ಈಗೆಲ್ಲಾದರೂ ತಾನು, ದೇಶಾಂತರ ಹೊರಟು ಹೋಗಬೇಕೆಂದು ನಿರ್ಧರಿಸಿದನು. ಕೆಲವು

ವೇಳೆ ಮಡದಿಯ ಮುಖವನ್ನೂ, ಮಗುವಿನ ಕಿರುನಗೆಯನ್ನೂ ಕಂಡು, ಹಾಗೆಮಾಡಬಾರದೆಂದಂದುಕೊಳ್ಳುತಿದ್ದನು. ಕೈಯ ಲ್ಲಿದ್ದ ಹಣಕಾಸುಗಳೆಲ್ಲ ಈಗ ಮುಗಿಯುತ್ತ ಬಂದುವು. ಅವನು ತನ್ನ ಯೋಚನೆಯಂತೆ ನಡೆಯುವುದೋ ಬೇಡವೋ ಎಂದು ಕೂಗಾಡುತಿದ್ದನು. ಮಗುವನ್ನು ಆಡಿಸುವಾಗ, ಅದರ ಕೆನ್ನೆಗೆ ಮುತ್ತುಸುರಿಸೆ, ಅದು ಹೇಹ್ಹೇ ಎಂದು ನಕ್ಕಾಗ "ಅಯ್ಯೋ, ಕಂದ. ನಾನು ನಿನ್ನನ್ನು ಬಿಟ್ಟು ಹೇಗೆ ಹೋಗಲಿ. ಅದು ನನ್ನಿಂದಾಗದು" ಎಂದು ಅತ್ತುಬಿಡುತಿದ್ದನು. ಪತ್ನಿ ಇನ್ನೆಲ್ಲಿ ನೋಡುವಳೋ ಎಂಬ ಭಯದಿಂದ ಒಡನೆ ಕಣ್ಣೀರನ್ನು ಒರಸಿ ಕೊಳ್ಳುವನು. "ಲಕ್ಷ್ಮಿ, ನನ್ನಿಂದ ನಿನಗೇನೂ ಪ್ರಯೋಜನ ವಿಲ್ಲದ ಹಾಗಾಯಿತೇ. ನಾನೇನು ಮಾಡಲಿ? ನನ್ನನ್ನು ನೀನು ಕೈಹಿಡಿದು ಒಂದಿಷ್ಟು ಸುಖವನ್ನೂ ಅನುಭವಿಸಲಿಲ್ಲವಲ್ಲಾ, ಸದಾ ಕಣ್ಣೀರಿನಿಂದಲ್ಲವೇ ಕಾಲ ಕಳೆದೆ" ಎಂದು ಪರಿತಪಿಸುತಿದ್ದನು. ಈಗವನಿಗೆ ಪದೇ ಪದೇ ತಂದೆ ತಾಯಿಗಳ ನೆನಪಾಗುತಿತ್ತು. ತನ್ನ ಏಳಿಗೆಗಾಗಿ ಅವರೆಷ್ಟು ಬುದ್ಧಿವಾದ ಹೇಳುತಿದ್ದರೂ ಅವರ ಮಾತು ಕೇಳಿ ನಡೆದಿದ್ದರೆ? "ಛಿ, ಛಿ ನಾನಿನ್ನಿರಬಾರದು ಸಾಯ ಬೇಕು" ಎನ್ನುತಿದ್ದನು. ಆದರೆ ನಾವು ಎಣಿಸಿಕೊಂಡಂತೆ ಸಾವು ಬರುತ್ತದೆಯೇ? ಅದು ಬರುವಾಗ ಯಾರನ್ನೂ ಕೇಳದೆ ತಾನಾಗಿಯೇ ಬರುತ್ತದೆ. ನಾವೆಣಿಸಿಕೊಂಡಂತೆಲ್ಲ ಅದು ಬರು ವುದಿಲ್ಲ. ನಾವಾಗಿ ಬೇಕಾದರೆ ಅದರ ಬಳಿಗೆ ಹೋಗಬಹುದು ಅಷ್ಟೇ. ರಾಘುವಿಗೆ ಈಗ ಸಾವು ಕಾದಿರಲಿಲ್ಲ. ಉಪದ್ರವ ಕಾದಿತ್ತು ಅಷ್ಟೆ. ದೇಶಾಂತರ ಹೊರಟು ಹೋಗುವುದನ್ನು ಬಿಟ್ಟು ಬೇರೆ ಯಾವ ಮಾರ್ಗವೂ ಈಗವನಿಗೆ ತೋಚಲಿಲ್ಲ. ಚಿಕ್ಕಂದಿನಲ್ಲಿ ತಾನು ಶಾಲೆಯಲ್ಲಿ ಓದುತಿದ್ದಾಗ ಬುದ್ಧನ ಚರಿತೆ ಯನ್ನು ಓದಿದ್ದನು. ಈಗವನಿಗೆ ಅದು ಜ್ಞಾಪಕಕ್ಕೆ ಬಂದಿತು. ಬುದ್ಧರು ತಮ್ಮ ರಾಜ್ಯಪದವಿಯನ್ನೂ, ಸಿರಿಸಂಪತ್ತನ್ನೂ,

ಪ್ರೇಮದ ಮಡದಿಯನ್ನೂ ಹಸುಗೂಸನ್ನೂ ತೊರೆದು, ಈ ಸುಖ ಸಂಪತ್ತೆಲ್ಲ ನೀರ್ಮೇಲೆ ನಿಂತ ಗುಳ್ಳೆಯೆಂದು ಭಾವಿಸಿ, ಶಾಂತಿಯನ್ನು ಹುಡುಕಲು ಹೊರಟವರು. ತಾನೊ? ಸಿರಿಸಂಪತ್ತೆಲ್ಲ ಹೋಯಿತೆಂದು ಬಾಳ್ವಿಕೆಗೆ ಅಂಜಿ, ಇದ್ದ ಅಲ್ಪಸ್ವಲ್ಪ ಶಾಂತಿಯನ್ನೂ ಕೆಡಿಸಿಕೊಂಡು, ಅಶಾಂತತೆಯನ್ನು ಹುಡುಕಿಕೊಂಡು ಹೊರಟಿರುವವನು. ಮಲೆಗೂ, ಮಡುವಿಗೂ ಇರುವಷ್ಟು ವ್ಯತ್ಯಾಸ. ಎಲ್ಲಿಗೆಲ್ಲಿ ಹೊಂದೀತು? ಲಕ್ಷ್ಮಿಯ ದುರದೃಷ್ಟದ ದಿನ ಸಮೀಪಿಸುತಿತ್ತು. ಒಂದು ದಿನ ಬೆಳಗ್ಗೆ ಅವನು ಕಾಫೀ ಕುಡಿದು, ಮಗುವನ್ನು ಎತ್ತಿ ಮನಸಾರೆ ಮುದ್ದಿಸಿ ಲಕ್ಷ್ಮಿಯ ಕೂಡ ಹೋಗಿದ್ದು ಬರುತ್ತೇನೆಂದು ಹೇಳಿ, ಹೊರಹೊರಟನು. ಲಕ್ಷ್ಮಿ ಮಾರ್ಕಟ್ಟೆಗೇನಾದರೂ ಹೋಗಿದ್ದು ಬರುತ್ತೇನೆಂದು ಹೇಳುತ್ತಾರೆಂದು ತಲೆಯಲ್ಲಾಡಿಸಿದಳು.

## ೭೬

ವ್ಯಗ್ರ ಮನಸ್ಕನಾದ ರಾಘು ರೈಲ್ವೇಸ್ಟೇಷನ್ನಿಗೆ ಬಂದು ಸೇರಿದಾಗ, ಬೆಂಗಳೂರಿಗೆ ಗಾಡಿ ಹೊರಟು ನಿಂತಿತ್ತು. ಅವನು ಒಂದು ಟಿಕೆಟ್‌ಕೊಂಡು ಅದರಲ್ಲೇರಿದನು. ಇದಕ್ಕೆ ಮೊದಲು ಎರಡೇ ಎರಡು ಸಾಲು ಪಾಳ್ಯಕ್ಕೆ ಒಂದು ಪತ್ರ ಬರೆದನು. ಅದರಲ್ಲಿ 'ತನ್ನ ಮನಃಸ್ಥಿತಿ ಸರಿಯಿಲ್ಲದುದರಿಂದ ತಾನು ದೇಶಾಂತರ ಹೊರಟು ಹೋಗುವುದಾಗಿಯೂ, ಅವರು ಬಂದು ಲಕ್ಷ್ಮಿಯನ್ನು ಕರೆದುಕೊಂಡು ಹೋಗಬೇಕೆಂದೂ ಕಾಣಿಸಿದನು. ಮಧ್ಯಾಹ್ನನಾಯಿತು. ಪತಿ ಮನೆಗೆ ಬರಲೇಯಿಲ್ಲ. ಕಾಯಿ ಪಲ್ಯಗಳನ್ನು ತರುವರೇನೋ ಎಂದು ಕಾದಿದ್ದ ಲಕ್ಷ್ಮಿ, ಹನ್ನೊಂದು ಘಂಟೆಯಾದರೂ ಪತಿ ಬಾರದಿದ್ದುದನ್ನು ಕಂಡು, ಆ ದಿನ ಕಾಯಿಪಲ್ಯವಿಲ್ಲದೆಯೇ ಅಡಿಗೆ ತಯಾರುಮಾಡಿದಳು.

ಒಂದು ಘಂಟೆಯಾಯಿತು. ಪತಿಯ ಸುಳಿವೇ ಇಲ್ಲ. ತೊಟ್ಟಿಲಲ್ಲಿ ಮಲಗಿದ್ದ ರಮೇಶ ಎದ್ದು ಅಳಲಾರಂಭಿಸಿದನು. ಲಕ್ಷ್ಮಿ ಅವನನ್ನು ಎತ್ತಿ ಮುದ್ದಿಟ್ಟು, ಹಾಲುಣ್ಣಿಸಿ, ಅವನನ್ನು ಕುಳ್ಳಿರಿಸಿ, ಕೈಗೆ ಗಿಲುಗಿಲುಪೆ ಕೊಟ್ಟಳು. ತನ್ನ ಪುಟ್ಟದಾದ ಕೈಯಲ್ಲಿ ಅವನದನ್ನು ಹಿಡಿದುಕೊಂಡು, ಝಿಲಕ್ ಝಿಲಕ್ ಎನ್ನಿಸುತ್ತ, ಹಲ್ಲಿಲ್ಲದ ಆ ಬಾಯಿ ತೆರೆದು ನಗುತಿದ್ದನು. ಮೂರು ಘಂಟೆ ಆಯಿತು. ಲಕ್ಷ್ಮಿಗೆ ಈಗ ಚಿಂತೆಯೂ ಆವರಿಸಿತು. ಈಗ್ಯೆ ಎಂಟು ದಿನಗಳಲ್ಲಿ ಪತಿ ಅಂದಿದ್ದ ಒಂದು ಮಾತು ಈಗವಳಿಗೆ ಜ್ಞಾಪಕಕ್ಕೆ ಬಂದಿತು. ಲಲಿತಾದ್ರಿಪುರಕ್ಕೆ ಏನೋ ಕೆಲಸ ನಿಮಿತ್ತವಾಗಿ ಹೋಗಬೇಕು ಎಂದವನಂದಿದ್ದನು. ಅದನ್ನೂ ಸರಿಯಾಗಿ ಬಾಯಿ ಬಿಟ್ಟು ಹೇಳಿರಲಿಲ್ಲ. ಅಲ್ಲಿಗೇನಾದರೂ ಹೋಗಿರುವರೇ ? ದಿವಾಳಿಯಾದ ಮೇಲೆ ರಾಘು ಮನೆ ಬಿಟ್ಟು ಎಲ್ಲಿಗೂ ಕದಲುತ್ತಿರಲಿಲ್ಲ. ರಾತ್ರಿ ಹೊತ್ತು ಮೀರಿ ಮನೆಗೆ ಬರುವುದು, ಮನೆಗೆ ಬಾರದೆಯೇ ತಪ್ಪಿಸಿಕೊಳ್ಳುವುದು, ಮುಂತಾದವನ್ನೆಲ್ಲ ಅವನೀಗ ಮಾಡುತ್ತಿರಲಿಲ್ಲ. ಲಕ್ಷ್ಮಿಯ ಬಲ ಹುಬ್ಬು ಎರಡು ಮೂರು ತಡವೆ ಹಾರಿತು. ಅದೇಕೊ ತುಟಿಗಳು ಒಣಗಹತ್ತಿದುವು. ಯಾವುದೋ ಒಂದು ವಿಧವಾದ ಸಂಕಟ ಮನಸ್ಸಿನಲ್ಲುಂಟಾಗುತಿತ್ತು. ಸಂಜೆಯಾಯಿತು. ವಿದ್ಯುದ್ದೀಪಗಳೆಲ್ಲ ಈಗ ಹತ್ತಿಕೊಂಡುವು. ಅವಳ ಮನೆಯ ಬಾಗಿಲ ಬಳಿ ಬಂದು ನಿಂತು ನೋಡಿದರೆ ಚಾಮುಂಡಿ ಬೆಟ್ಟವು ಕಾಣುತ್ತದೆ. ಆ ಬೆಟ್ಟಕ್ಕೆ ಹಾಕಲಾಗಿದ್ದ ಸಾವಿರಾರು ದೀಪಗಳು ತನ್ನನ್ನು ಅಣಕಮಾಡುವಂತೆ ಅವಳಿಗೆ ಕಾಣುತಿದ್ದುವು ರಾತ್ರಿ ಎಂಟು ಘಂಟೆ ಹೊಡೆಯಿತು. ಮಧ್ಯಾಹ್ನದಿಂದಲೂ ಪತಿಯ ನಿರೀಕ್ಷಣೆಯಲ್ಲಿದ್ದ ಅವಳು ಒಂದು ತುತ್ತು ಅನ್ನವನ್ನೂ ಬಾಯಿಗೆ ಹಾಕಿರಲಿಲ್ಲ. ಈಗವಳಿಗೆ ಹೊಟ್ಟೆಹಸಿಯಲು ಪ್ರಾರಂಭಿಸಿತ್ತು. ಮಧ್ಯಾಹ್ನದಲ್ಲೇ ಮಾಡಿಟ್ಟದ್ದ ಆ ಅನ್ನ ಸಾರು ಜಿಲ್ ಎಂದು ತಣ್ಣ

ಗಿತ್ತು. ಲಕ್ಷ್ಮಿ ಉಣ್ಣಲೆಂದು ಅನ್ನವನ್ನು ಎಲೆಗೆ ಹಾಕಿ ಕುಳಿತಳು. ಬಾಯಿ ಏಕೋ ಕಹಿ ಕಹಿಯಾಗಿತ್ತು. ಒಂದು ತುತ್ತು ನುಂಗಲೂ ಸಾಧ್ಯವಿರಲಿಲ್ಲ. ಹೇಗೋ ಕಷ್ಟಪಟ್ಟು ನಾಲ್ಕು ತುತ್ತು ತಿಂದಳು. ಉಳಿದದ್ದನ್ನು ರಸ್ತೆಯ ಬದಿಯಲ್ಲಿದ್ದ ಮುನಿಸಿಪಲ್ ತೊಟ್ಟಿಗೆ ಹಾಕಿ ಬಂದು ಕೈತೊಳೆದಳು. ತಾಯಿ ಊಟ ಮಾಡುವಾಗ ರಮೇಶ ಬಳಿಯಲ್ಲೆ ಕುಳಿತಿದ್ದನು. ಅವನು ಕೈಗಳನ್ನು ಮೇಲಕ್ಕೆತ್ತಿ ಮ್ಮಾ ಮ್ಮಾ ಮ್ಮಾ ಎನ್ನುತಿದ್ದನು. ಅಮ್ಮಾ ಎಂದನ್ನಲು ಒಂದಕ್ಷರವನ್ನೇ ಅವನು ಕಲಿತಿದ್ದನು. ಲಕ್ಷ್ಮಿ ವಾಸಿಸುತಿದ್ದ ಮನೆ ದೊಡ್ಡದು. ಅದರಲ್ಲಿ ಇವಳನ್ನೂ ಸೇರಿಸಿ ನಾಲ್ಕು ಕುಟುಂಬಗಳಿದ್ದುವು. ಓವರ್‌ಸೀರ್ ವೆಂಕಟೇಶ ರಾಯರ ಪತ್ನಿ ಉಮಾವಿನ ಬಳಿಮಾತ್ರ, ಲಕ್ಷ್ಮಿ ಆಗಿಂದ್ದಾಗೆ ಮಾತುಕೊಡುತಿದ್ದಳು. ಈಗ ಲಕ್ಷ್ಮಿ ಉಮಾವಿನ ಬಳಿ ಹೋದಳು. "ಎಲ್ಲಿ ಬಂದೆ ಲಕ್ಷ್ಮಿ" ಎಂದಳು ಉಮಾ. ಸುಮ್ಮನೆ ಬಂದೆ ಅಕ್ಕ. ಬೆಳಗ್ಗೆ ಇವರು ಮನೆ ಬಿಟ್ಟು ಹೋದವರು, ಎಲ್ಲಿಗೆ ಅಂತ ನನ್ನಕೂಡಲು ಹೇಳಲಿಲ್ಲ. ಮನಸ್ಸಿಗೆ ಕಳವಳವಾಗಿದೆ ಅಷ್ಟೆ" ಎಂದಳು. "ಏನೋ ಅವಸರ ಕಾರ್ಯ ಇರಬಹುದು, ನಿನ್ನಕೂಡ ಹೇಳಲಿಲ್ಲ ಅಷ್ಟೆ. ರಾತ್ರಿ ಬರಬಹುದು. ಇಲ್ಲವೆ ನಾಳೆಗೆ ಬಂದಾರೇನೋ ? ಹೋಗಿ ಮಲಗಿಕೋ" ಎಂದಳವಳು. ರಮೇಶನನ್ನು ಬಗಲಲ್ಲಿಯೇ ಹಾಕಿಕೊಂಡು ಲಕ್ಷ್ಮಿ ಬಾಗಿಲ ಬಳಿಯಲ್ಲಿ ನಿಂತು, ಅರ್ಧ ಘಂಟೆಕಾಲ ರಸ್ತೆಯನ್ನೇ ನೋಡುತಿದ್ದಳು. ಅನಂತರ ಒಂದೊಂದೇ ಹೆಜ್ಜೆ ಹಾಕುತ್ತ ಹಿಂದಿರುಗಿ ಹಾಸಿಗೆ ಹಾಸಿದಳು. ರಮೇಶನನ್ನು ತೊಟ್ಟಿಲಲ್ಲಿ ಮಲಗಿಸಿ ಅವನಿಗೆ ನಿದ್ರೆಹತ್ತಿಸಲು, ಮೆಲ್ಲಗೆ ತೂಗಲಾರಂಭಿಸಿದಳು. ಅವನಿಗೂ ನಿದ್ರೆ ಹತ್ತದೆ ಕಾಲ್ಗಳನ್ನೂ ಕೈಗಳನ್ನೂ ಅಡಿಸುತ್ತ, ಬೆರಳನ್ನು ಬಾಯಿಗೆ ಹಾಕಿಕೊಂಡು ಚೀಪುತ್ತ, ಹ್ಞೆ, ಹ್ಞೆ, ಮ್ಮಾ ಮ್ಮಾ ಎನ್ನುತಿದ್ದನು. "ಮಲಗು ಚಿನ್ನ ಮಲಗು ಕಂದ"

ಎಂದು ಲಕ್ಷ್ಮಿ ತೂಗಿ ಅವನಿಗೆ ನಿದ್ರೆ ಹತ್ತಿಸಿದಳು. ದೀಪವನ್ನು ಸಣ್ಣದು ಮಾಡಿ ಅವಳೂ ತೊಟ್ಟಿಲ ಬಳಿಯಲ್ಲೇ ಮಲಗಿ ಕೊಂಡಳು. ಕ್ರಮವಾಗಿ ರಾತ್ರಿ ಹನ್ನೊಂದು, ಹನ್ನೆರಡು, ಒಂದು ಘಂಟೆ ಹೊಡೆಯಿತು. ಅವಳಿಗೆ ನಿದ್ದೆಯೇ ಬರಲಿಲ್ಲ. ಈಗ ರಮೇಶ ಎದ್ದು ಅಳಲಾರಂಭಿಸಿದನು. ಅವನನ್ನು ಎತ್ತಿ ಲಕ್ಷ್ಮಿ ಮೊಲೆಯುಣ್ಣಿಸುತ್ತ, ಮೆಲ್ಲಗೆ ಅವನ ಬೆನ್ನನ್ನು ತಟ್ಟುತ್ತ, ಮಲ ಗಿಸಿಕೊಂಡಳು. ತನ್ನ ಅತ್ತೆ ಮಾವಂದಿರು ಇದ್ದಾಗ, ಲಕ್ಷ್ಮಿ ಎಷ್ಟೋ ರಾತ್ರಿ ಹೀಗೆ ನಿದ್ದೆಗೆಟ್ಟು, ಪತಿಯ ನಿರೀಕ್ಷಣೆಗಾಗಿ ಕಾದಿರುತಿದ್ದಳು. ಆಗವನು ಆ ಅವೇಳೆಯಲ್ಲಿಯೇ ಬರುತಿದ್ದನು. ಆದರೆ ಆ ಕಾಲ ಬೇರೆ. ರಾಘು ಈಗ ಮನೆ ಬಿಟ್ಟು ಎಲ್ಲಿಗೂ ಕದಲುತ್ತಿರಲಿಲ್ಲ. ಕುಡಿತ, ಮೆರೆತವೆಲ್ಲ ಈಗ ನಿಂತು ಹೋಗಿದೆ. ಇದನ್ನು ಲಕ್ಷ್ಮಿ ಈಗ ಚೆನ್ನಾಗಿ ತಿಳಿದುಕೊಂಡಿದ್ದಳು. ನನ್ನ ಕೂಡ ಹೇಳದೆಯೇ ಇವರೆಲ್ಲಿಗೆ ಹೋದರು ? ಅಂಥ ಅವಸರದ, ಅಗತ್ಯದ ಕೆಲಸವೇನಿತ್ತು ಎಂದವಳು ಹಲವು ಬಗೆಯಿಂದ ಯೋಚಿಸುತ್ತಿರುವಂತೆಯೇ ಢಾಣ್, ಢಾಣ್ ಎಂದು ಎರಡು ಘಂಟೆ ಹೊಡೆಯಿತು. ಲಕ್ಷ್ಮಿಗೆ ಈಗ ತುಸು ನಿದ್ದೆ ಹತ್ತಿತು. ಬೆಳಗಿನ ಜಾವದಲ್ಲೊಂದು ಅವಳಿಗೆ ಸ್ವಪ್ನಬಿದ್ದಿತು. ರಾಘು ತನ್ನ ಎರಡೂ ಭುಜಗಳ ಮೇಲೆ ಕೈಯಿಟ್ಟುಕೊಂಡಿದ್ದಾನೆ. ಅವನ ಕಣ್ಣಿನಲ್ಲಿ ಏಕೋ ಕಣ್ಣೀರು ಸುರಿಯುತ್ತಿದೆ. ನಿನ್ನನ್ನು ಬಿಟ್ಟು ಹೋಗಬೇಕಲ್ಲಾ ಎನ್ನುತಿದ್ದಂತೆಯೇ ಅವನು ಪೂರ್ವಾಭಿ ಗಮನವಾಗಿ ಓಡುತಿದ್ದಾನೆ. ಬೇಡ, ಬೇಡ, ಬನ್ನಿ, ಎಂದು ಕೂಗಿಕೊಳ್ಳುತ್ತ, ಲಕ್ಷ್ಮಿಯೂ ಅವನ ಹಿಂದೆ ಓಡಿದಳು. ಅವಳಿ ಗೀಗ ತಟಕ್ಕನೆ ಎಚ್ಚರವಾಯಿತು. ಆದೇಕೋ ಅವಳ ಮೈಯೆಲ್ಲ ಗಡಗಡನೆ ನಡುಗಲಾರಂಭಿಸಿತು. ಅವಳು ಎದ್ದು ದೀಪ ದೊಡ್ಡದು ಮಾಡಿ, ಬಾಗಿಲು ತೆರೆದು ನೋಡಿದಳು. ಆಗಲೇ ಪೈಪಿಗೆ ನಾಲ್ಕಾರು ಮಂದಿ ಹೆಂಗಸರುಗಳು ಬಂದು ನಿಂತಿದ್ದರು.

ಬೆಳಗಾಯಿತು. ಮಧ್ಯಾಹ್ನವೂ ಆಯಿತು. ಪತಿಯ ಸುದ್ದಿ ಸಮಾಚಾರವೇ ಇಲ್ಲ. ಅವಳಿಗೀಗ ಬಹಳ ಗಾಬರಿಯಾಯಿತು. "ಊರಿಗೆ ಒಂದು ಪತ್ರವನ್ನಾದರೂ ಬರೆಯಲೇ" ಎಂದವಳು ಉಮಾಳನ್ನು ಕೇಳಿದಾಗ, ಆಕೆಯೂ ಪತಿಯೂ "ಸುಮ್ಮನೆ ಅವಸರ ಪಡಬೇಡಮ್ಮ. ಪಾಪ! ಇನ್ನು ಊರಿಂದಲೂ ಗಾಬರಿ ಪಟ್ಟುಕೊಂಡು ಬಂದಾರು. ಏನೋ ಅವಸರ ಕಾರ್ಯವಿರ ಬೇಕು. ನಿನ್ನ ಕೂಡ ಅವನು ಹೇಳಲಿಲ್ಲ. ಅದೇ ಅವನ ಭಾರಿ ತಪ್ಪು, ಇಂದು ನಾಳೆ ಸ್ವಲ್ಪ ಕಾದಿರು" ಎಂದು ಸಮಾಧಾನ ಹೇಳಿದಳು. "ಅಕ್ಕ, ನಿಮ್ಮ ಯಜಮಾನರಿಗಾದರೂ ಸ್ವಲ್ಪ ಹೇಳಿ ಒಂಟಿಕೊಪ್ಪಲಿನಲ್ಲಿರುವ ಕುಟ್ಟಪ್ಪನನ್ನು ಸ್ವಲ್ಪ ಬರಮಾಡಿ ಕೊಡಿ. ನೀವು ಬಹಳ ಉಪಕಾರ ಮಾಡಿದ ಹಾಗಾಗುತ್ತೆ" ಎಂದು ಲಕ್ಷ್ಮಿ ಬೇಡಿಕೊಂಡಳು. ಆಗಲೆಂದು ಉಮಾಳ ಪತಿ ಸೈಕಲ್ ಮೆಟ್ಟಿ ಕುಟ್ಟಪ್ಪನನ್ನು ಕರೆದುತಂದರು. ಮಗುವನ್ನು ಎತ್ತಿ ಮಡಿಲಲ್ಲಿ ಕುಳ್ಳಿರಿಸಿಕೊಂಡೇ ಲಕ್ಷ್ಮಿಗೆ ಅವನು ಸಮಾಧಾನ ಹೇಳಿದನು. "ಸುಮ್ಮನಿರಮ್ಮ ಭಯಪಡಬೇಡ" ಎಂದವನು ಧೈರ್ಯ ಹೇಳಿದನೇ ಹೊರತು ಮನಸ್ಸಿನಲ್ಲಿ ತನಗೇ ಏನೋ ಸ್ವಲ್ಪ ಅಂಜಿಕೆ. ಗುಂಡೂರಾಯರಿದ್ದಾಗ ಅವರಂದಿದ್ದ ಒಂದು ಮಾತು ಈಗವನಿಗೆ ಜ್ಞಾಪಕಕ್ಕೆ ಬಂದಿತು. "ವಿವಾಹವಾದ ಮೇಲೂ ಮಗ ಸರಿಯಾದ ನಡತೆಯಲ್ಲಿ ನಡೆಯದೆ ಹೋದರೆ, ಒಂದು ಹೆಣ್ಣಿನ ಕಣ್ಣೀರನ್ನು ನಾನು ನೋಡಬೇಕಾಗುತ್ತದಲ್ಲಾ" ಎಂದು. ಆದರೆ ಗುಂಡೂರಾಯರು ಪುಣ್ಯ ಮಾಡಿದವರು. ಇದ ನ್ನೆಲ್ಲ ಅವರು ನೋಡಲಿಲ್ಲ. ಬೇಗನೆ ಕಣ್ಣು ಮುಚ್ಚಿಕೊಂಡರು. ಹಳೆಯ ನೆನಪೆಲ್ಲ ಕುಟ್ಟಪ್ಪನಿಗೆ ಒಂದೊಂದೇ ಚಿತ್ರದಂತೆ ಎದುರು ಬಂದು ಜಾರಿ ಹೋಗುತಿದ್ದುವು. ಈಗವನು ಲಕ್ಷ್ಮಿಗೆ ಧೈರ್ಯ ಹೇಳಿ ಹೊರಬಂದನು. ರಾಘು ಲಕ್ಷ್ಮಿಗೂ ತಿಳಿಸದೆ ಎಲ್ಲಿ ಹೋದನು? ಅದೇಕೊ ಅವನ ಎದೆಯೂ ಡಬ ಡಬ ಎಂದು

ಹೊಡೆದುಕೊಳ್ಳಲಾರಂಭಿಸಿತು. ಈಗ ತಾನೆಲ್ಲಿಗೆ ಹೋಗಿ ಅವನನ್ನು ಹುಡುಕುವುದು? ಅವನೇನು ಊರೊಳಗೆ ಅಡಗಿಕೊಂಡಿದ್ದಾನೆಯೇ? ಆದರೂ ನೋಡೋಣವೆಂದು ಸುಗಂಧ, ಮಾರುತಿ ಕಂಪೆನಿಗಳಿಗೂ 'ಅನ್ನಪೂರ್ಣಕ್ಕೂ', ಹೋಗಿ ವಿಚಾರಿಸಿ, ಅಲ್ಲಿಗೆಲ್ಲ ಬಂದಿಲ್ಲವೆಂದು ತಿಳಿದುಕೊಂಡನು. ಸಾಯಂಕಾಲ ಮತ್ತೆ ಲಕ್ಷ್ಮಿಯ ಮನೆಗೆ ಬಂದು, ತಾನು ಹುಡುಕಿ ನೋಡಿದುದನ್ನು ತಿಳಿಸದೆ "ನಾಳೆ ಖಂಡಿತ ಬರುತ್ತಾರಮ್ಮ. ಎಲ್ಲೋ ಹೊರ ಊರಿಗೆ ಪ್ರಯಾಣ ಮಾಡಿರಬಹುದು." ಎಂದು ಸಮಾಧಾನ ಹೇಳಿ ಮನೆಗೆ ಹಿಂದಿರುಗಿದನು. ಲಕ್ಷ್ಮಿ ಇಡೀ ದಿನವನ್ನೆಲ್ಲ ಕಷ್ಟಪಟ್ಟು ಕಳೆದಳು. ರಾತ್ರಿ ಅವಳಿಗೆ ನಿದ್ದೆಯೇ ಹತ್ತಲಿಲ್ಲ. ಮರುದಿನ ಬೆಳಗ್ಗೆ ಒಂಭತ್ತು ಘಂಟೆಗೆ, ತನ್ನ ಮನೆಯ ಬಾಗಿಲಿನಲ್ಲಿ ಗಾಡಿ ಒಂದು ಬಂದು ನಿಂತಿರುವುದನ್ನು ಕಂಡು, ಯಾರೆಂದು ತಿಳಿಯುವ ಕುತೂಹಲದಿಂದ, ಬಾಗಿಲ ಬಳಿ ಓರವಾಗಿ ನಿಂತು ನೋಡಿದಳು. ಏನಾಶ್ಚರ್ಯ! ಗಾಡಿಯಿಂದ ರಾಮುವೂ, ಶಾಮರಾಯರೂ, ಕೆಳಗಿಳಿಯುತಿದ್ದುದನ್ನು ಲಕ್ಷ್ಮಿ ಕಂಡಳು. "ಬನ್ನಿ" ಎಂದವಳಂದಳೇ ಹೊರತು ಅವಳ ಬಾಯಿಂದ ಆ ಎರಡಕ್ಷರಗಳೂ ಹೊರಡಲಿಲ್ಲ. ಒಳಗೆ ಪ್ರವೇಶಿಸಿದ ಮೇಲೆ ಲಕ್ಷ್ಮಿಯ ಮಾತುಕತೆಗಳಿಂದ, ಅವಳಿಗಿನ್ನೂ ಪತಿ ತನ್ನನ್ನು ಬಿಟ್ಟು ದೇಶಾಂತರ ಹೊರಟು ಹೋಗಿರುವುದು, ಗೊತ್ತಿಲ್ಲವೆಂಬುದನ್ನು, ಅವರು ತಿಳಿದುಕೊಂಡರು. ತಂದೆಯೂ, ಮಗನೂ ಏನೇನೋ ರಹಸ್ಯವಾಗಿ ಮಾತುಗಳನ್ನಾಡಿಕೊಂಡರು. ಈ ಸಮಯಕ್ಕೆ ಸರಿಯಾಗಿ ಕುಟ್ಟಪ್ಪನೂ ಬಂದನು. ಶಾಮರಾಯರು ಅವನೊಂದಿಗೆ ಏನೋ ನಾಲ್ಕು ಮಾತನ್ನಾಡಿದರು. ರಾಮು ಕುಟ್ಟಪ್ಪನ ಕೈಗೆ ಪತ್ರವೊಂದನ್ನಿತ್ತನು. ಅವನು ಅದನ್ನು ಓದಿ ನೋಡಿ ಏಕೋ ನಿಟ್ಟುಸಿರುಬಿಟ್ಟನು. ಅವರಿಬ್ಬರೂ ಮೆಲ್ಲ ಮೆಲ್ಲಗೆ ಏನೋ ಮಾತನಾಡಿಕೊಂಡರು. ಮಧ್ಯಾಹ್ನ ಊಟ

ಮುಗಿದ ಮೇಲೆ ತಂಗಿಯ ಕೂಡ ರಾಮು "ಲಕ್ಷ್ಮಿ, ನಿನ್ನ ಪತಿ ದೇವರು ಪಾಳ್ಯಕ್ಕೆ ಬಂದು ಬಿಟ್ಟಿದಾರೆ. ಅವರಿಗೆ ಇಲ್ಲಿರಲು ನಾಚಿಕೆಯಂತೆ. ಇನ್ನು ಅಲ್ಲೆ ಇದ್ದು ಸಂಸಾರ ನಡೆಯಿಸುತ್ತಾರಂತೆ. ನಿನ್ನನ್ನು ಕರೆದುಕೊಂಡು ಹೋಗಲು ನಾವು ಬಂದಿದ್ದೇವೆ" ಎಂದನು. ರಾಮು ಈ ಮಾತನ್ನಾಡುವಾಗ ಶಾಮರಾಯರು ಮತ್ತೊಂದೆಡೆಗೆ ಮುಖ ತಿರುಗಿಸಿಕೊಂಡರು. ಅವರ ಕಣ್ಣಿನಲ್ಲಿ ನೀರು ತುಂಬಿಕೊಂಡಿತು. ಇನ್ನೆಲ್ಲಿ ಲಕ್ಷ್ಮಿ ನೋಡುವಳೋಯೆಂದು, ತಗ್ಗಿಸಿದ ತಲೆಯನ್ನು ಅವರು ಮೇಲಕ್ಕೆತ್ತಲೇಯಿಲ್ಲ, ಲಕ್ಷ್ಮಿ ಬೆಳ್ಳಗಿರುವುದೆಲ್ಲ ಹಾಲೆಂದು ತಿಳಿಯುವವಳು. ಅಣ್ಣನ ಮಾತನ್ನವಳು ನಿಜವೆಂದೇ ಭಾವಿಸಿಕೊಂಡಳು. ರಾಮು ಪ್ರಯಾಣಕ್ಕೆ ತ್ವರಿತವಾಗಿ ಏರ್ಪಾಡುಮಾಡಲಾರಂಭಿಸಿದನು. ಶಾಮರಾಯರು ಮಾತ್ರ ಹಾಸಿಗೆ ಹಾಸಿ ಮಲಗಿಕೊಂಡರು. "ಇದೇಕಪ್ಪಾ" ಎಂದು ಲಕ್ಷ್ಮಿ ಕೇಳಿದುದಕ್ಕೆ, "ಮೈ ಸರಿಯಿಲ್ಲವಮ್ಮ, ಆಲಸ್ಯ ಬಹಳ ಜಾಸ್ತಿಯಿದೆ" ಎಂದರು. ಮನೆಯವನನ್ನು ಕಂಡು ಉಳಿಕೆ ಬಾಡಿಗೆ ಹಣವನ್ನೆಲ್ಲ ರಾಮು ಸಲ್ಲಿಸಿ, ನಾವೀ ದೀನ ಮನೆಖಾಲಿ ಮಾಡುತ್ತೇವೆ ಎಂದು ಹೇಳಿಬಿಟ್ಟನು. ಎರಡು ಗಾಡಿಗಳಿಗೆ ಸಾಮಾನುಗಳನ್ನು ಹೇರಲಾಯಿತು. ದುರದೃಷ್ಟದ ಲಕ್ಷ್ಮಿ, ಪಕ್ಕದ ಮನೆಯವರಿಗೆಲ್ಲ ಹೋಗಿ ಬರುತ್ತೇನೆಂದು ಹೇಳಿ, ಅಣ್ಣ ಮತ್ತು ತಂದೆಯ ಕೂಡ, ಊರಿನಲ್ಲಿರುವ ಪತಿಯ ಬಳಿ ಸೇರಲು, ಗಾಡಿ ಹತ್ತಿದಳು. ಅವರೆಲ್ಲ ಪ್ರಯಾಣ ಮಾಡುವವರೆಗೂ ಕುಟ್ಟಪ್ಪ ಅಲ್ಲೆ ಕುಳಿತಿದ್ದು, ಬಳಿಕ ನಿಟ್ಟುಸಿರೊಂದನ್ನು ಬಿಡುತ್ತ ತನ್ನ ಮನೆ ಸೇರಿದನು.

# ೭೭

ಊರಿಗೆ ಎರಡು ಫರ್ಲಾಂಗ್ ದೂರವಿದ್ದಾಗಲೇ ತನ್ನ ಮನೆಯಿಂದ ಅಳುವ ಶಬ್ದ ಲಕ್ಷ್ಮಿಯ ಕಿವಿಗೆ ಬಿದ್ದಿತು. ಅವಳು ಗಾಬರಿಯಾದಳು. ಮನೆ ಸಮೀಪಿಸುತ್ತ ಸಮೀಪಿಸುತ್ತ, ಆ ರೋದನ ಧ್ವನಿಯೂ ಜಾಸ್ತಿಯಾಗಿ ಕೇಳಲಾರಂಭಿಸಿತು. "ಏನಪ್ಪಾ ಮನೆಯಲ್ಲೇನು" ಎಂದವಳು ತಡೆದು ತಡೆದು ಕೇಳಿದಳು. "ಏನೂ ಇಲ್ಲ ಬಾಮ್ಮ," ಎಂದು ತಂದೆಯೆಂದರು. ಆಳಿನ ಕೂಡ ಪಿಸುಮಾತಿನಲ್ಲಿ ರಾಮು ಏನೋ ನುಡಿಯಲು, ಅವನು ಎತ್ತಿನ ಬಾಲವನ್ನು ನುಲಿದು, ಅದರ ಬೆನ್ನಮೇಲೆ ಕೈಯಿಟ್ಟು ಗಾಡಿಯನ್ನು ಓಡಿಸಲಾರಂಭಿಸಿದನು. ಮನೆಯ ಬಳಿ ಗಾಡಿ ಬಂದು ನಿಂದಿತು. ಊರಜನರ ದೊಡ್ಡಗುಂಪೊಂದು ಮನೆಯಲ್ಲಿ ನೆರೆದಿತ್ತು. ಲಕ್ಷ್ಮಿಯ ಪತಿ ಅವಳನ್ನು ಬಿಟ್ಟು ದೇಶಾಂತರ ಹೊರಟು ಹೋಗಿರುವುದಾಗಿ ತಿಳಿದ ಜನರ ತಂಡ ಅವಳಿಗಾಗಿ ಮರುಕಪಡುತ್ತ, ಗಾಡಿಯನ್ನು ದೂರ ದೂರದಲ್ಲಿ ಕಂಡಾಗಲೇ ಬಂದು ಮನೆಗೆ ಮುತ್ತಿಗೆ ಹಾಕಿತ್ತು. ಜಾನಕಮ್ಮನವರನ್ನು ಎಲ್ಲರೂ ಸೇರಿ ಸಮಾಧಾನಪಡಿಸುತ್ತಿದ್ದರು; "ಸುಮ್ನೆ ಇರ್ರವ್ವ. ಯಾಕ್ ಸುಮ್ನೆ ಸಂಕ್ಟಬಿದ್ದರಿ. ಎಲ್ಹೋದರು. ನಾಲ್ಕುದಿನ ಅವರಾಗೇ ಬರ್ತಾರೆ" ಎಂದು ಅವರಲ್ಲೊಬ್ಬನು ಅನ್ನುತಿದ್ದನು. ವಿಮಲಳ ಸದ್ದು ಸಮಾಚಾರವೇ ಇಲ್ಲ. ಅವಳು ಯಾವ ಮೂಲೆಯಲ್ಲಿ ಕುಳಿತು ನಾದಿನಿಗಾಗಿ ಪ್ರಲಪಿಸುತಿದ್ದಾಳೋ ಯಾರಿಗೆ ಗೊತ್ತು. ಲಕ್ಷ್ಮಿ ಈಗ ಗಾಡಿಯಿಂದಿಳಿದಾಗ, ಎಲ್ಲವನ್ನೂ ಗ್ರಹಿಸಿಕೊಂಡಳು. ತನ್ನನ್ನು ಬಿಟ್ಟು ಪತಿ ಎಲ್ಲೋ ಹೊರಟು ಹೋಗಿರುವುದಾಗಿಯೂ ಅಣ್ಣ ಮತ್ತು ತಂದೆ ಸುಳ್ಳುಹೇಳಿ ತನ್ನನ್ನು ಕರೆದುಕೊಂಡು ಬಂದಿರುವುದಾಗಿಯೂ, ಈಗವಳು ತಿಳಿದುಕೊಂಡಳು. ಅವಳ ಅನುಮತಿಯಿಲ್ಲದೆಯೇ ಕಣ್ಣೀರು ಪಲವಲನೆ ಹೊರಗೆ ಬರಲಾರಂಭಿಸಿತು.

ಸುತ್ತಲೂ ಕತ್ತಲು ಆವರಿಸಿ, ತಲೆ ಸುತ್ತುವಂತಾಗಿ, ಅವಳು ಧಡಾರ್ ಎಂದು ನೆಲಕ್ಕುರುಳಿದಳು. ಅವಳಿಗೆ ಪ್ರಜ್ಞೆ ತಿಳಿದಾಗ ಸುತ್ತಲೂ ಹೆಂಗಸರ ಭಾರಿಗುಂಪು ಸೇರಿಕೊಂಡಿತ್ತು. ವಿಮಲ ಗಾಳಿ ಬೀಸುತಿದ್ದಳು. ಭಾಗೀರಥಮ್ಮನವರು "ಇದ್ಯಾಕ್ರೆ ಹೀಗೆ ಗುಡ್ಡೆಹಾಕಿಕ್ಕೊಂಡಿದ್ದೀರಿ. ಗಾಳಿ ಬರಲಿ, ತಳ್ಳಿ ನಿಂತುಕೊಳ್ಳೀ" ಎಂದು ಗದರಿಸುತಿದ್ದರು. ರಾಮು ಮಂಡಿಯ ಮೇಲೆ ಗದ್ದ ಇರಿಸಿಕೊಂಡು, ಎರಡೂ ಕೈಗಳನ್ನು ಕಟ್ಟಿಕೊಂಡು, ಹಳೆಯ ಮಂದಾಸನ ಪೆಟ್ಟಿಗೆಯಮೇಲೆ ಕುಳಿತಿದ್ದನು. ಜಾನಕಮ್ಮನವರು ಎರಡು ದಿನಗಳಿಂದಲೂ ಅತ್ತು ಅತ್ತು, ಅವರ ಗಂಟಲು ಪೂರಾ ಕಟ್ಟಿಕೊಂಡಿತ್ತು. ರಾಮರಾಯರು ಗಾಡಿಯಿಂದಿಳಿದು ನೆಟ್ಟಗೆ 'ಆಫೀಸ್‌ರೂಂ'ಗೇ ಹೋದವರೇ, ತಿರುಗಿ ಅವರನ್ನು ಕಾಣ ಲಾಗಲಿಲ್ಲ. ಅವರು ಒಳಗೆ ಏನು ಮಾಡುತ್ತಿದ್ದರೋ ನಮಗೆ ಹೇಗೆ ಗೊತ್ತಾಗಬೇಕು. ನೆರೆದಿದ್ದ ಜನ ತಲೆಗೊಂದು ಮಾತಾಡು ತಿದ್ದರು. ಕೆಲವರು ರಾಘುವನ್ನು ಬೈಯುತಿದ್ದರೆ, ಮತ್ತೆ ಕೆಲ ವರು ಲಕ್ಷ್ಮಿಗಾಗಿ ಅನುತಾಪಪಡುತಿದ್ದರು. "ಎಲ್ಲ ಹೋಗ್ಲಮ್ಮ ಬರ್ತವ್ರೆ, ಇದ್‌ಕ್ಯಾಕವ್ವೋ, ಇಷ್ಟ್ ಮನ್ಸು ನೋಯ್ಸ್ಕೊಂಡರಿ" ಎಂದು ಮಲ್ಲಿ ಸಮಾಧಾನ ಹೇಳುತ್ತಿದ್ದಳು. "ಅಪರಂಜಿಯಂಥ ಹೆಣ್ಣುವೇಶ ನೋಡ್ಯವ್ವ ಹ್ಯಾಗಾಗೋಯ್ತು" ಎಂದು ಮುದುಕಿ ಯೊಬ್ಬಳು ನುಡಿದಳು. ಲಕ್ಷ್ಮಿಗೆ ಪ್ರಜ್ಞೆ ತಿಳಿದಿದ್ದರೂ, ತಾನು ಯಾವುದೋ ಲೋಕದಲ್ಲಿ ಸಂಚರಿಸುತ್ತಿರುವಂತೆ ಅವಳಿಗೆ ಭಾಸ ವಾಗುತಿತ್ತು. ತಾನು ಮೃತ್ಯುಶಯ್ಯೆಯಲ್ಲಿ ಮಲಗಿರುವಂತೆ ಅವಳಿಗೆ ಕೆಲವು ವೇಳೆ ಅನ್ನಿಸುತಿತ್ತು. ಇಲ್ಲಿ ನಿಂತಿರುವವರೆಲ್ಲ ತನಗಾಗಿ ಅನುತಾಪಪಡುವವರು ಎಂದು ಒಂದು ಸಮಯ ಅಂದುಕೊಳ್ಳುವಳು. ಮತ್ತೊಂದು ತಡವೆಯೋ ಇಲ್ಲ ಇಲ್ಲ, ಇವರೆಲ್ಲ ಯಮಭಟರುಗಳು, ನನ್ನನ್ನು ಕರೆದುಕೊಂಡು ಹೋಗಲು ಬಂದಿದ್ದಾರೆ. ಎಂದಂದುಕೊಳ್ಳುವಳು. ಪತಿಯೇ ನನ್ನನ್ನು

ಬಿಟ್ಟುಹೋಗಿದ್ದಾಗೆ. ನಾನಿನ್ನೇತಕ್ಕೆ ಇರಬೇಕು? ಸೆಳೆದೊಯ್ಯಲಿ, ಸೆಳೆದೊಯ್ಯಲಿ ಎಂದು ತನ್ನಷ್ಟಕ್ಕೆ ತಾನೆ ಗೊಣಗಿಕೊಂಡಳು. ಅವಳಿಗೀಗ ಮಗುವಿನ ನೆನಪಾಯಿತು. ತನ್ನ ಕೈಗಳನ್ನು ನೆಲಕ್ಕೆ ಚಾಚಿ, ರ....ರ....ರ....ಎಂದಳು. ರಮೇಶ ಎಂದೆನ್ನಲು ಸಹ ಅವಳಿಗೀಗ ಸಾಧ್ಯವಿರಲಿಲ್ಲ. ವಿಮಲ ಗೌಡರ ಬಸಪ್ಪನ ಕೈಯಲ್ಲಿದ್ದ ರಮೇಶನನ್ನು ಎತ್ತಿಕೊಂಡು ಬಂದು ಮುತ್ತುಕೊಟ್ಟು ಲಕ್ಷ್ಮಿಯ ಮಗ್ಗುಲಿಗೆ ಬಟ್ಟೆಹಾಸಿ ಮಲಗಿಸಿದಳು. ಲಕ್ಷ್ಮಿ ಮಗುವಿನ ಮೇಲೆ ಕೈಯಾಡಿಸುತ್ತ, ಮಲಗಿದ್ದಂತೆಯೇ ತೆರೆದಿದ್ದ ಕಣ್ಣುಗಳನ್ನು ಮೆಲ್ಲಮೆಲ್ಲಗೆ ಮುಚ್ಚಲಾರಂಭಿಸಿದಳು. "ಮತ್ತೆ ತುಂಬ ಬಂದ್ಬುಟ್ಟದೆ ಕಣವ್ವ ಸುಮ್ನಿರಿ. ಧೈರ್ಯ ಕೈಬುಡ್ಬೇಡಿ" ಎನ್ನುವ ಮಾತೂ, ಅವಳ ಕಿವಿಗೆ ಬೀಳುತಿತ್ತು. ಈಗ ನೆರೆದಿದ್ದ ಜನವೆಲ್ಲ ಹೊರಗೆ ಬರಲಾರಂಭಿಸಿದರು. ಯಾವುದೋ ಸಿನಿಮಾ ಆಟನೋಡಿ ಈಗ ಹೊರಬಂದವರಂತೆ, ಗುಜುಗುಜು ಎಂದು ಗುಂಪುಗುಂಪಾಗಿ ಅವರು ಬರಲಾರಂಭಿಸಿದರು. ಲಕ್ಷ್ಮಿ ಎದ್ದು ಕುಳಿತುಕೊಳ್ಳುವುದಕ್ಕೂ ಅಲ್ಪಸ್ವಲ್ಪ ಮಾತಾಡುವುದಕ್ಕೂ ಹದಿನೈದು ದಿನಗಳು ಹಿಡಿಯಿತು. ಕಣ್ಣುಗಳೆಲ್ಲ ಒಳಗೆಬಿದ್ದು, ಕೆನ್ನೆಬತ್ತಿ ಅವಳ ಎಲುಬುಗಳೆಲ್ಲ ಹೊರಗೆ ಕಾಣಿಸುತ್ತ ಅಸ್ಥಿಪಂಜರದಂತೆ ಅವಳಾದಳು. ರಮೇಶನನ್ನು ಎತ್ತಿ ಕಂಕುಳಲ್ಲಿರಿಸಿಕೊಳ್ಳುವಷ್ಟು ತ್ರಾಣ ಅವಳಿಗಿಲ್ಲದ ಹಾಗಾಯಿತು. ರಾಮು ಈಗ ಮತ್ತೊಮ್ಮೆ ಮೈಸೂರಿಗೆ ಪ್ರಯಾಣಮಾಡಿದನು. ಅಲ್ಲಿಂದ ಅವನು ಮಂಡ್ಯಕ್ಕೆ ಹೋಗಿ ಗದ್ದೆಯನ್ನು ಸರಿಯಾದ ಗುತ್ತಿಗೆದಾರರಿಗೆ ಕೊಟ್ಟು, ಮಾತಾಡಿ ಬಂದನು.

## ೭೮

ರಾಘು ಬೆಂಗಳೂರು ಸ್ಟೇಷನ್‌ನಲ್ಲಿ ಬಂದಿಳಿದನು. ಮುಂದೇನು ಮಾಡಬೇಕೆಂಬುದು ಅವನಿಗೆ ಗೊತ್ತಾಗಲಿಲ್ಲ. ಏನೋ ಯೋಚನೆಮಾಡಿಕೊಂಡು ಅವನು, ಅವಸರದಿಂದ ಟಿಕೆಟ್‌ಕೊಳ್ಳುವ ಕಿಟಕಿಯ ಬಳಿಗೆ ಹೋಗಿ, ಟಿಕೆಟ್‌ಕೊಂಡು ಗಾಡಿಹತ್ತಲು ಓಡಿದನು. ಆಗಲೇ ಮದರಾಸಿಗೆ ಹೊರಡುವ ಗಾಡಿ ಸಿದ್ಧವಾಗಿತ್ತು. ಗಾರ್ಡ್ ಸಿಳ್ಳೆಯನ್ನು ಊದಿದ್ದ. ಹಸುರು ಬಾವುಟ ಬೀಸಿದಮೇಲೆ ಆ ಉಗಿಬಂಡಿಯು 'ಕುರ್ರ್ಯೋ' ಎಂದು ಕೂಗಿಕೊಂಡು, ಭುಗ್, ಭುಗ್, ಭುಗ್ ಎನ್ನುತ್ತ, ಮೆಲ್ಲಗೆ ಚಕ್ರಗಳನ್ನು ಉರುಳಿಸಲಾರಂಭಿಸಿತು. ರಾಘು ಓಡಿ ಹೋದವನೇ ಹತ್ತಿಕೊಂಡು ಒಳಕ್ಕೆ ನುಗ್ಗಿದನು. ಅವನ ಕೆದರಿದ ತಲೆ, ಕೆಂಪು ಕವಿದುಕೊಂಡ ಮುಖನೋಡಿದರೆ, ಅವನೊಬ್ಬ ಹುಚ್ಚನಂತೆ ಕಾಣುತ್ತಿದ್ದನು. ಅವನೀಗ ಸುತ್ತಮುತ್ತಲೂ ನೋಡುತ್ತ ಮೆಲ್ಲಗೆ ಆಸನದಲ್ಲಿ ಬಂದು ಕುಳಿತುಕೊಂಡನು. ಇಡೀ ಒಂದು ದಿನ ಹಗಲೂ ರಾತ್ರಿ ಪ್ರಯಾಣಮಾಡಿದಮೇಲೆ, ಬೆಳಗಿನ ಐದು ಘಂಟೆಗೆ ಆ ಗಾಡಿ ಮದರಾಸು ಸೆಂಟ್ರಲ್ ಸ್ಟೇಷನ್‌ನಲ್ಲಿ ಬಂದು ನಿಂತಿತು. " ಕೂಲಿ ವೇಣುಮಾ, ಕೂಲಿ ವೇಣುಮಾ " ಎಂದು ಕಿವುಡು ಗಟ್ಟುವಂತೆ, ಕೂಲಿಗಳು ಕೂಗಿಕೊಳ್ಳುತ್ತಿದ್ದರು. ಸಾಮಾನುಗಳೆಲ್ಲವನ್ನೂ ಒಟ್ಟಿಗೆ ಸೇರಿಸುವುದು, ಭರಭರ ಓಡಾಡುವುದು, ಕೂಲಿ ಇಷ್ಟುಕೊಡುವುದಕ್ಕಾಗುವುದಿಲ್ಲವೆನ್ನುವುದು, ಒಟ್ಟಿನಲ್ಲಿ ಆ ಸ್ಟೇಷನ್ ಅಮಳಿಧುಮುಳಿ ಎದ್ದಿತ್ತು. ರಾಘು ಪೆಂಗನಂತೆ ನಾಲ್ಕಾರು ಕಡೆಗಳಿಗೂ ಕಣ್ಣು ಹೊರಳಿಸುತ್ತ ಹೊರಬಂದನು. ಕೆಂಪು ಧೂಳು ಮುಚ್ಚಿಕೊಂಡು ಅವನ ಬಟ್ಟೆಯೆಲ್ಲ ಕೊಳಕಾಗಿದ್ದುವು. ಅವನಿಗೆ ಸ್ವಲ್ಪವೂ ತಮಿಳು ಮಾತು ಅರ್ಥವಾಗುತ್ತಿರಲಿಲ್ಲ. ಅವನು ಇಳಿದವನೇ ನೆರಹೋಟಲೊಂದರೊಳಗೆ ನುಗ್ಗಿ, ಫಲಾಹಾರ ತಿಂದು ಬಂದನು. ಈಗ ತಾನು ಏನು

ಮಾಡುವುದೆಂಬ ಯೋಚನೆ ಅವನಿಗೆ ಹತ್ತಿತು. ಸುಮ್ಮನೆ ರಸ್ತೆಯ ಉದ್ದಕ್ಕೂ ನಡೆಯಲಾರಂಭಿಸಿದನು. ಎರಡು ದಿನಗಳು ಕಳೆದುವು. ಕೈಯಲ್ಲಿ ಒಂದು ಬಿಡಿಕಾಸೂ ಈಗವನಿಗೆ ಇಲ್ಲದ ಹಾಗಾಯಿತು. ಆಂಗ್ಲ ಭಾಷೆಯ ಪರಿಚಯ ಅವನಿಗಿದ್ದುದರಿಂದ, ಕೆಲಸಕೊಡಬೇಕೆಂದು ಅಲ್ಲಲ್ಲೆ ವಿಚಾರಿಸತೊಡಗಿದನು. ಅವನ ಅದೃಷ್ಟಕ್ಕೆ ಯಾರೋ ಒಬ್ಬರು ಕನ್ನಡದವರು ಸಿಕ್ಕಿ, ಅವನನ್ನು ವಿಚಾರಿಸಿ, ಅವನು ಮೈಸೂರಿನವನೆಂದು ತಿಳಿದುಕೊಂಡು ನಾಡ ಅಭಿಮಾನದಿಂದ " ಬಕ್ಕಿಂಗ್‌ಹಾಂ ಕರ್ಣಾಟಿಕ್ ಮಿಲ್ "ನಲ್ಲಿ ಅವನನ್ನು ಕೆಲಸಕ್ಕೆ ಸೇರಿಸಿದರು. ಸಹಸ್ರಾರು ಮಂದಿ ಕಾರ್ಮಿಕರುಗಳ ಕೂಡ ಅವನೊಬ್ಬನಾಗಿ ಸೇರಿಕೊಂಡು ದುಡಿಯಲಾರಂಭಿಸಿದನು. ದಿನಗಳುರುಳುತಿದ್ದಂತೆ ಕೆಲಸದ ಚಾಕಚಕ್ಯತೆಯನ್ನೆಲ್ಲ ಚೆನ್ನಾಗಿ ತಿಳಿದುಕೊಂಡು, ಅನೇಕ ಗೆಳೆಯರುಗಳನ್ನೂ ಅವನು, ದೊರಕಿಸಿಕೊಳ್ಳಲಾರಂಭಿಸಿದನು. ಕಾರ್ಮಿಕರುಗಳು ವಾಸಿಸುವ " ಪುರಸ್ಯೈವಾಕ್ಕಂ ಕಾಲನಿ "ಯಲ್ಲಿ ತಾನೂ ಒಂದು ಸಣ್ಣ ಗುಡಿಸಲನ್ನು ಬಾಡಿಗೆಗೆ ತೆಗೆದುಕೊಂಡನು. ವಿಧಿವಿಲಾಸ ಎಂತಹದು! ಮೊದಲು ಭಾರಿಮನೆಯೊಂದರಲ್ಲಿ ವಾಸ; ಆಮೇಲೆ ಚಿಕ್ಕದಾದ ಬಾಡಿಗೆ ಮನೆ; ಈಗ ಹುಲ್ಲು ಹೊದಿಸಿದ ಗುಡಿಸಲು. ಒಂಟಿಜೀವ, ಅವನಿಗೇನೂ ತಾಪತ್ರಯವಿಲ್ಲವೆಂದು ರಾಘುವಿನ ಮಿತ್ರರುಗಳೆಂದುಕೊಳ್ಳುತಿದ್ದರು. ಆದರೆ ಅವನ ಪರಿಸ್ಥಿತಿ ಹಾಗಿರಲಿಲ್ಲ. ಹೊರಗೆ ನೋಡುವುದಕ್ಕೆ ಅವನು ಮಾನವನಂತೆ ಕಾಣುತ್ತಿದ್ದರೂ ಒಳಗೆ ಚಿಂತೆ ಗೆಜ್ಜಲು ತಿಂದಂತೆ ಅವನನ್ನು ತಿಂದು ಲಡ್ಡುಮಾಡಿತ್ತು. ಕೆಲಸ ಮುಗಿದಮೇಲೆ ರಾಘು ತನ್ನ ಗುಡಿಸಿಲಿನಲ್ಲಿ ಚಾಪೆಯಮೇಲೆ ಕುಳಿತು ತನ್ನ ವಿವಾಹದಲ್ಲಿ ತೆಗೆದಿದ್ದ ಕಾರ್ಡ್‌ಸೈಜ್ ಫೋಟೋವನ್ನು, ಜೇಬಿನಿಂದ ಹೊರತೆಗೆಯುತಿದ್ದನು. ಲಕ್ಷ್ಮಿಯ ಕೈಹಿಡಿದು ಕಾಶಿಯಾತ್ರೆಗೆ ಹೊರಟಿದ್ದಾಗ, ಕುಟ್ಟಪ್ಪನು ತೆಗೆದ ಚಿತ್ರವದು.

ಮೈಸೂರಿಂದ ಇದೊಂದು ಆಸ್ತಿಯನ್ನೇ ಅವನು ತೆಗೆದುಕೊಂಡು ಬಂದಿದ್ದನು. ಘಂಟೆಘಂಟೆಗಳ ಕಾಲ ಆ ಚಿತ್ರವನ್ನು ನೋಡುತ್ತ, ರಾಘು ಕಣ್ಣೀರು ಸುರಿಸುತಿದ್ದನು. ಮಗುವಿನ ಮುದ್ದುಮುಖ ವನ್ನು ಅವನು ನೆನಸಿಕೊಳ್ಳುತಿದ್ದನು. ಆದರ ಅವನ ಚಿತ್ರವನ್ನು ತೆಗೆದಿರಲಿಲ್ಲ. ನಿದ್ದೆಯಲ್ಲಿಯೂ ಅವನು ರಮೇಶ ಎಂದು ಕನ ವರಿಸುತಿದ್ದನು. ರಾತ್ರಿ ಬಹುವೇಳೆ ನಿದ್ದೆಗೆಟ್ಟಮೇಲೆ ಅವನು ಮಲಗಿ ನಿದ್ರಿಸುತಿದ್ದನು. ಮತ್ತೆ ಬೆಳಗ್ಗೆ ಸೈರನ್ ಊದಿದಾಗಲೇ ಅವನಿಗೆ ಎಚ್ಚರ. ತಾನಾಯಿತು, ತನ್ನ ಗುಡಿಸಲಾಯಿತು, ಮಿಲ್ಲಾಯಿತು. ರಾಘು ಮತ್ತೆಲ್ಲಿಗೂ ಕಾಲಿಡುತ್ತಿರಲಿಲ್ಲ. ರಜೆಯ ದಿನಗಳಲ್ಲಿ ಮಾತ್ರ ಅವನು ಮೆರೀನಾ ಬೀಚಿಗೆ ಹೋಗಿ ಕುಳಿತು ಕೊಳ್ಳುತಿದ್ದನು. ಅಲೆಗಳ ಏರಿಳಿತ, ಸಾಗರದ ಶಬ್ದ, ಇವೆಲ್ಲ ವನ್ನೂ ಆಲಿಸುತ್ತ, ಮರಳಿನ ಮೇಲೆ ಕುಳಿತುಕೊಂಡು, ತನ್ನನ್ನೇ ಮರೆತು ಏನೇನೋ ಯೋಚಿಸುತ್ತಿದ್ದನು. ಅವನ ಒಡನಾಡಿ ಕಾರ್ಮಿಕರುಗಳು ಅವನನ್ನು ಒಬ್ಬ ವೇದಾಂತಿ, ವೈರಾಗ್ಯವುಳ್ಳ ವನು ಎಂದೆಲ್ಲ ಮಾತನಾಡಿಕೊಳ್ಳುತಿದ್ದರು. ರಾಘುವಿನ ಚರಿತ್ರೆ ಅವರಿಗೆಲ್ಲಿಂದ ತಿಳಿಯಬೇಕು ? ಒಂದು ಸಂಜೆ ಅವನು ಬೀಚಿ ನಿಂದ ತನ್ನ ಗುಡಿಸಲಿಗೆ ಹಿಂದಿರುಗಿದನು. ಅಲ್ಲಿಂದ ಪುರ ಸೈವಾಕ್ಕಂ ಕಾಲನಿಗೆ ಹೋಗಬೇಕಾದರೆ, ಮೌಂಟ್‌ರೋಡ್ ಮಾರ್ಗವಾಗಿ ಹೋಗಬೇಕಾಗಿದ್ದಿತು. ಆದರೆ ಯೋಚನಾತ ರಂಗದಲ್ಲೇ ಮುಳುಗೇಳುತಿದ್ದ ಅವನು ಆ ದಾರಿತಪ್ಪಿ, ತಿರುವಲ್ಲಿ ಕೇಣಿ ಕಡೆಗೆ ಹೋಗುವ ರಸ್ತೆಯನ್ನು ತುಳಿಯ ಹತ್ತಿದನು. ಈಗ ವನು ಆ ರಸ್ತೆಯಿಂದ ಎಡಭಾಗದಲ್ಲಿ ಚಿನ್ನಾಳ್ ಬೀದಿಯ ಒಳ ಹೊಕ್ಕನು. ಅದು ಸೂಳೆಯರು ವಾಸಿಸುವ ಬೀದಿ. ಇಕ್ಕಡೆಯ ಮನೆಗಳಲ್ಲಿಯೂ ಅವರುಗಳು ನಿಂತುಕೊಂಡು, ದಾರಿಹೋಕರ ನ್ನೆಲ್ಲಾ ಆಹ್ವಾನಿಸುತ್ತಿರುತ್ತಾರೆ. ಅವೇ ವ್ಯಾಪಾರವುಳ್ಳವರು ಆ ಬೀದಿಗೆ ಹೋಗುತ್ತಾರೆ, ಅಷ್ಟೆ. ಆದರೆ ಊರನ್ನು ಚೆನ್ನಾಗಿ

ತಿಳಿಯದವರು, ಅನ್ಯರು ಹೋದಲ್ಲಿ ಅವರ ಪಾಡು ಕಾದಾಟವೇ ಸರಿ. ಅಲ್ಲಿಂದ ತಪ್ಪಿಸಿಕೊಂಡು ಬರುವುದೆಂದರೆ ಬಹಳ ಸಾಹಸದ ಕೆಲಸ. " ಮಾಮಾ " ಕೆಲಸದವರು ಉದ್ದಕ್ಕೂ ನಿಂತುಕೊಂಡಿರುತ್ತಾರೆ. ಅವರ ಉಪದ್ರವ ಅಷ್ಟಿಷ್ಟಲ್ಲ. ರಾಘು ಆ ಬೀದಿಯಲ್ಲಿ ನಡೆಯುತಿದ್ದಾಗ ಕಿಟಕಿಯಲ್ಲೂ, ಬಾಗಿಲ ಬಳಿಯಲ್ಲೂ ನಿಂತುಕೊಂಡಿದ್ದ ವಾರಾಂಗನೆಯರು, " ಬಾಬಾ, ಏಕೆ ನೀನು ಗಂಡಸಲ್ಲವೇ ?" ಎಂದು ಕರೆಯತೊಡಗಿದರು. ರಾಮೇಶ್ವರಕ್ಕೆ ಹೋದರೂ ಶನೀಶ್ವರನ ಕಾಟ ತಪ್ಪಲಿಲ್ಲವಲ್ಲಾ ಎಂದಂಜಿ, ಅವನು ಒಂದೇ ಸಮನೆ ಓಡಿ, ಮೈಲಾಪುರಕ್ಕೆ ಹೋಗುವ ರಸ್ತೆಯನ್ನು ತಲುಪಿ, ಆಮೇಲೆ ತನ್ನ ಗುಡಿಸಲಿಗೆ ಹೋಗಿ ಸೇರಿದನು. ಈಗವನನ್ನು ಯಾರಾದರೊಬ್ಬ ಹೆಂಗಸು ಕೈಹಿಡಿದು ಎಳೆದರೂ, ಅವಳ ಕೈಯಿಂದ ಬಿಡಿಸಿಕೊಂಡು ಓಡಿಹೋಗುವ ಪರಿಸ್ಥಿತಿಯಲ್ಲಿ ಇದ್ದನು.

## ೭೯

ಲಕ್ಷ್ಮಿ ಯಾವಾಗಲೂ ತಲೆಯ ಮೇಲೆ ಕೈಯಿರಿಸಿಕೊಂಡೇ ಕುಳಿತುಕೊಳ್ಳುತ್ತಿದ್ದಳು. ಪತಿ ಎಂದಾದರೊಂದು ದಿನ ಹಿಂದಿರುಗುವರೇನೋ ಎಂದು ನಿರೀಕ್ಷಿಸುತಿದ್ದಳು. ನಿತ್ಯವೂ ಬೆಳಗಾಗುತಲೆದ್ದು ಸ್ನಾನ ಮುಗಿಸಿ ತುಳಸೀಪೂಜೆ ಮಾಡುವಳು. ಪತಿಯ ಚಿತ್ರಕ್ಕೆ ಪುಷ್ಪಗಳನ್ನರ್ಪಿಸಿ, " ಸ್ವಾಮಿ, ಅಧೀರರಾಗಬೇಡಿ, ಹಿಂದಿರುಗಿ ಬನ್ನಿ " ಎಂದು ಪ್ರಾರ್ಥಿಸುತಿದ್ದಳು. ರಮೇಶನಿಗೀಗ ಮೂರು ವರ್ಷಗಳು ಕಳೆಯಿತು. ಮನೆಯವರೆಲ್ಲರಿಗೂ ಅವನು ಮುದ್ದಾಗಿದ್ದನು. ರಮೇಶನಿಲ್ಲದಿದ್ದಲ್ಲಿ ಲಕ್ಷ್ಮಿ ಎಂದೋ ಪ್ರಾಣಕ್ಕೆ ಘಾಸಿ ಮಾಡಿಕೊಳ್ಳುತಿದ್ದಳು. ಅವನ ಆಟಪಾಟ, ತೊದಲು ನುಡಿಗಳಲ್ಲಿ ಅವಳು ಲೀನಳಾಗಿ, ದುಃಖವನ್ನು ತುಸು

ಕಡಿಮೆ ಮಾಡಿಕೊಳ್ಳುತಿದ್ದಳು. ತಂದೆಯ ಮನೆಯಲ್ಲೇನೂ ಅವಳಿಗೆ ಕೊರತೆಯಿರಲಿಲ್ಲ. ಎಲ್ಲರೂ ತನ್ನನ್ನು ಕಂಡು ಪ್ರಾಣ ಬಿಡುವರೇ. ಆದರೆ ಹೆಣ್ಣಿಗೆ ಇರಬೇಕಾದ ಮುಖ್ಯವಾದ ಆಭರಣ ಅವಳಿಗೀಗ ಇಲ್ಲ. ಅದು ಎಲ್ಲೋ ಕಳಚಿ ಬಿದ್ದುಹೋಗಿದೆ. ಎಂದಾದರೊಂದು ದಿನ ಅದು ಸಿಕ್ಕೀತೇ ಎಂದವಳು ಹುಡುಕು ತಿದ್ದಾಳೆ; ಆಸೆಪಡುತಿದ್ದಾಳೆ. ರಾಮುವೂ, ಶಾಮರಾಯರೂ, ತಮಗೆ ಪರಿಚಯವಿರುವವರಿಗೆಲ್ಲ, ರಾಘುವನ್ನು ಪತ್ತೆ ಹಚ್ಚಿಕೊಡ ಬೇಕೆಂದು, ಪತ್ರ ಬರೆಯಲಾರಂಭಿಸಿದರು. ಅವರು ಭವಿಷ್ಯ ಕೇಳದಿದ್ದ ಜೋಯಿಸರಿಲ್ಲ; ಹರಕೆ ಹೊತ್ತುಕೊಳ್ಳಲು ಇನ್ನು ದೇವರೇ ಇಲ್ಲ. ವಿಮಲ ಈಗ ಗರ್ಭಿಣಿಯಾದಳು. ಕಾಲಕ್ರಮ ದಲ್ಲಿ ಅವಳು ಹೆಣ್ಣು ಮಗುವೊಂದನ್ನು ಹಡೆದಳು. ಶಾಮ ರಾಯರು ರಮೇಶನ ಕೈಹಿಡಿದುಕೊಂಡು "ನೋಡೋ ನಿನಗೆ ಹೆಂಡತಿ ಹುಟ್ಟಿದಾಳೆ ಕಣೋ" ಎನ್ನುತ್ತಿದ್ದರು. ಲಕ್ಷ್ಮಿಯ ಸಲಹೆಯಂತೆ ವಿಮಲಳ ಮಗುವಿಗೆ ಪದ್ಮಾವತಿ ಎಂದು ನಾಮ ಕರಣ ಮಾಡಲಾಯಿತು. ರಮೇಶನಿಗೀಗ ವಯಸ್ಸು ಐದು ದಾಟಿತು. ಇನ್ನೂ ಈ ಹಳ್ಳಿಯಲ್ಲೇ ಉಳಿದಿದ್ದರೆ ಅವನ ವಿದ್ಯಾ ಭ್ಯಾಸಕ್ಕೆ ಕುಂದು ಎಂದು ಲಕ್ಷ್ಮಿ ಭಾವಿಸಿದಳು. ಅಣ್ಣ ರಾಮುವಿನ ಕೂಡ ಈ ವಿಷಯವಾಗಿ ಚರ್ಚಿಸಿದಳು. ರಮೇಶ ನನ್ನು ಮೈಸೂರಿನಲ್ಲಿ, ಹಾಸ್ಟಲಿನಲ್ಲಿ, ಸೇರಿಸುವುದಾಗಿ ಅವನು ಸೂಚಿಸಿದನು. ಆದರೆ ಮಗನನ್ನು ಒಂದರಘಳಿಗೆ ಬಿಟ್ಟಿರಲೂ ಲಕ್ಷ್ಮಿಯಿಂದ ಸಾಧ್ಯವಿರಲಿಲ್ಲ. ತಾನೇ ಮೈಸೂರಿನಲ್ಲಿದ್ದು ಓದಿಸುವುದಾಗಿ ಪ್ರತ್ಯುತ್ತರವಿತ್ತಳು. ರಾಮುವಿಗೆ ತಂಗಿಯ ಮನಸ್ಸನ್ನು ಸ್ವಲ್ಪವಾದರೂ ನೋಯಿಸಕೂಡದೆಂಬ ಅಭಿಮತ. ರಮೇಶ ತಾನೆ ಈಗ ಲಕ್ಷ್ಮಿಗೆ ಆಸ್ತಿ. ಅವನನ್ನು ಬಿಟ್ಟು ಅವಳಿರುತ್ತಾಳೆಯೇ? ರಾಮು ಈಗ ಮೈಸೂರಿಗೆ ಪ್ರಯಾಣಮಾಡಿ ಬಾಡಿಗೆ ಮನೆಯನ್ನು ಸಿದ್ಧಪಡಿಸಿ ಬಂದನು. ಬಹಳ ದಿನಗಳ

ನಂತರ ಲಕ್ಷ್ಮಿ ಮೈಸೂರಿಗೆ ಮತ್ತೆ ಕಾಲಿಟ್ಟಳು. "ನನ್ನ ಜೀವವನ್ನು ಹಿಂಡಿ ಹಿಪ್ಪೆಕಾಯಿ ಮಾಡಿದ ಮೈಸೂರೇ, ನನ್ನ ಮಗನನ್ನಾದರೂ ಈಗ ಉದ್ಧಾರಮಾಡು" ಎಂದು ಕಡಕೊಳ ಸ್ಟೇಷನ್ ದಾಟಿದ ಮೇಲೆ, ಮೈಸೂರು ಮಹಾನಗರಕ್ಕೆ ಅವಳು ನಮಸ್ಕಾರ ಮಾಡಿದಳು. ರಮೇಶನನ್ನು ಈಗ ಶಾಲೆಗೆ ಸೇರಿಸಿದುದಾಯಿತು. ವರ್ಷದ ಊಟಕ್ಕೆ ಸಾಕಾಗುವಷ್ಟು ಭತ್ತ ಗದ್ದೆಯಿಂದ ಬರುತ್ತದೆ. ಬಾಡಿಗೆ ಹಣಕ್ಕೂ, ಮಿಕ್ಕ ಖರ್ಚುಗಳಿಗೂ, ರಾಮು ಮಾಸಾಮಾಸ ತಪ್ಪದೆ ಹಣಕಳುಹಿಸುತ್ತಿರುತ್ತಾನೆ. ಶಾಮರಾಯರು ನಾಲ್ಕುದಿನ ಊರಲ್ಲಿದ್ದರೆ, ಎಂಟುದಿನ ಮೈಸೂರಲ್ಲಿ ಉಳಿಯುತ್ತಾರೆ. ಹೀಗೆ ಲಕ್ಷ್ಮಿ ಧೈರ್ಯವನ್ನು ಕೈಬಿಡದೆ, ತನ್ನ ಮನೆಯ ನಂದಾದೀಪ ಆರದಿರಲು, ಅದು ಜಾಜ್ವಲ್ಯಮಾನವಾಗಿ ಪ್ರಕಾಶಿಸಬೇಕೆಂಬ ಹಂಬಲದಿಂದ ಮಿಗೆಯಾಗಿ ಪ್ರಯತ್ನಿಸುತ್ತಿದ್ದಳು.

## ೬೦

ರಾಘುವಿನ ದೇಹ ಪರಿಸ್ಥಿತಿ ತೀರಕೆಟ್ಟಿತು. ಅವನೆಂದೂ ಇಷ್ಟು ಕಠಿನವಾಗಿ ಕೆಲಸಮಾಡಿರಲಿಲ್ಲ. ತಾನು ಧಣಿಯಾಗಿದ್ದಾಗ ಲೆಕ್ಕವಿಲ್ಲದಂತೆ, ತನ್ನ ಕೆಲಸಗಾರರುಗಳನ್ನು ಹೀನಾಮಾನವಾಗಿ ಅವನು ಬೈಯುತಿದ್ದನು. ಆದರೆ ಈಗವನಿಗೆ ಅರಿವು ಉಂಟಾಯಿತು, ಕಾರ್ಮಿಕ ವರ್ಗ ನಾಡಿನ ಅಭ್ಯುದಯಕ್ಕೆ ಮುಖ್ಯವಾದ ಸ್ತಂಭ ಎಂದು. ಅವನಿಗೆ ರಾತ್ರಿ ಹದಿನೈದು ದಿನ, ಹಗಲು ಹದಿನೈದು ದಿನ ಕೆಲಸ ಬೀಳುತಿದ್ದಿತು. ಇದಕ್ಕೆ "ಷಿಪ್ಟ್" ಎನ್ನುತ್ತಾರೆ. ಮಿಲ್ಲುಗಳಲ್ಲಿ ಕೆಲಸಮಾಡುವವನು ದೇಹವನ್ನು ಸರಿಯಾಗಿ ಗಮನಿಸಿಕೊಳ್ಳದಿದ್ದರೆ, ಅವನು ಹಾಸಿಗೆ ಹಾಸಿ ಮಲಗಿಕೊಳ್ಳಬೇಕಾಗುತ್ತದೆ. ರಾಘುವಿನದು ಎಲ್ಲ ಕಾಟಾಚಾರ. ತಿಂದರೆ ತಿಂದ ಬಿಟ್ಟರೆ ಬಿಟ್ಟ. ಎಂದಿಗೋ

ಒಂದು ದಿನ ಸ್ನಾನ ಮಾಡುವುದು, ವಾರಕ್ಕೊಂದು ರಾತ್ರಿಯೋ ಎರಡು ರಾತ್ರಿಯೋ ನಿದ್ದೆ ಗೈಯುವುದು. ಯಾವಾಗಲೂ ಅವನಿಗೆ ಚಿಂತೆ, ಚಿಂತೆ, ಚಿಂತೆಯೇ. ರಾಘುವಿಗೆ ಈಗ ದೇಹಾಲಸ್ಯ ಕೆಟ್ಟಿತು. ಒಂದು ದಿನ ಮಲಗಿದನು. ಜ್ವರ ಹೆಚ್ಚಾಯಿತು. ನಾಲ್ಕಾರು ದಿನ ಹಾಸಿಗೆಯಲ್ಲಿ ಉರುಳಾಡಿದನು. ಅವನ ಮಿತ್ರರುಗಳು ಪಾಪವೆಂದುಕೊಂಡು, ಗಂಜಿ ಕಾಯಿಸಿಕೊಟ್ಟು ಉಪಚಾರಮಾಡುತಿದ್ದರು. ದಿನಗಳು ಕಳೆಯುತ್ತ ಕಳೆಯುತ್ತ ಅವನ ಕಾಯಿಲೆಯೂ ಹೆಚ್ಚುತ್ತ ಬಂದಿತು. ಅವನ ಮಿತ್ರರುಗಳು ಪ್ರಶ್ನಿಸಿದರು. “ನಿನಗಾರೂ ಇಲ್ಲವೇ? ಪತ್ರ ಬರೆಯೋಣ ಹೇಳು. ಆರೈಕೆ ಮಾಡಲು ಒಬ್ಬ ಆಳು ಬೇಕು” ಎಂದರು. “ನಾನೊಬ್ಬ ಪರದೇಶಿ” ಎಂದವನು ಉತ್ತರಕೊಟ್ಟನು. ಗುಡಿಸಿಲಿನಲ್ಲೇ ಇನ್ನೂ ಮಲಗಕೊಂಡಿದ್ದರೆ ಅವನ ವ್ಯಾಧಿ ಗುಣ ವಾಗದೆಂದು ಅವನ ಮಿತ್ರರುಗಳು ತೀರ್ಮಾನಿಸಿ, “ಆಸ್ಪತ್ರೆ ಗಾದರೂ ಸೇರಿಸೋಣವೇ” ಎಂದು ಕೇಳಿದರು. ರಾಘು ತಲೆ ಯಲ್ಲಾಡಿಸಿದನು. ರಿಕ್ಷಾದಲ್ಲಿ ಹಾಕಿ ಜನರಲ್ ಆಸ್ಪತ್ರೆಗೆ ಅವನನ್ನು ಸಾಗಿಸಲಾಯಿತು. ಒಂದೂವರೆ ತಿಂಗಳ ಕಾಲ ಅವನು ಆಸ್ಪತ್ರೆಯಲ್ಲಿ “ಬೆಡ್” ನಲ್ಲಿದ್ದನು. ಅವನಿಗೀಗ ಸಂಪೂರ್ಣ ಗುಣವಾಯಿತು. ಆಸ್ಪತ್ರೆಯಿಂದ ಅವನನ್ನು ಬಿಡು ಗಡೆ ಮಾಡಿದರು. ಅಯ್ಯೋ, ಏಕೆ ಇಷ್ಟು ಅವಸರವಾಗಿ ನನ್ನನ್ನು ಹೊರಗಟ್ಟಿದರು. ಇನ್ನೂ ಅಷ್ಟುದಿನ ಇಟ್ಟುಕೊಳ್ಳಬಾರದಾ ಗಿತ್ತೇ! ಎಂದವನು ಮರುಗಿದನು. ಹಿಂದೆ ಒಂದು ಕಾಲದಲ್ಲಿ ಅವನು ಮೈಸೂರು ಆಸ್ಪತ್ರೆಯಲ್ಲಿ ಮಲಗಿದ್ದಾಗ, ಯಾವಾಗ ಹೊರ ಬಂದೇನೋ ಎಂದು ತವಕಪಡುತಿದ್ದನು. ಈಗ ಒಳಗೇ ಇರಬಾರದಾಗಿತ್ತೇ ಎಂದು ಚಿಂತಿಸ ಹತ್ತಿದನು. ಎಷ್ಟು ಮಹತ್ತರವಾದ ಬದಲಾವಣೆ? ಈ ಎರಡು ತಿಂಗಳ ಅವಧಿ ಯಲ್ಲಿಯೇ ಅನೇಕ ಮಹತ್ತರವಾದ ಬದಲಾವಣೆಗಳುಂಟಾದುವು.

ಮಲೆಯಾಳಿಗಳೆಲ್ಲ ಬಂದು ಮಿಲ್ಲಿನಲ್ಲಿ ತುಂಬಿಕೊಂಡರು. ರಾಘು ವಿಗೆ ಈಗ ಕೆಲಸವಿಲ್ಲದ ಹಾಗಾಯಿತು. ಹತ್ತಾರು ದಿನ ಅವನು ಸುಮ್ಮನೆ ಕಾಲತಳ್ಳಿದನು. ಆದರೆ ಯಾವ ವರಮಾನವೂ ಇಲ್ಲದೆ ಮದರಾಸು ಮಹಾ ನಗರದಲ್ಲಿ, ಸುಮ್ಮನೆ ಕುಳಿತುಕೊಂಡಿರುವುದ ಕ್ಕಾಗುತ್ತದೆಯೇ? ಅವನೀಗ ಕೆಲಸಕ್ಕೆ ಅಲೆದಾಡಲಾರಂಭಿಸಿದನು. ಈಗವನು ಮದರಾಸಿಗೆ ಬಂದು ಐದೂವರೆ ವರ್ಷಗಳು ಕಳೆದು ಹೋಗಿದ್ದುದರಿಂದ, ಅನೇಕ ಮಿತ್ರರುಗಳನ್ನು ಸಂಪಾದಿಸಿಕೊಂಡಿದ್ದನು. ಪಾಪ! ಸಾಧು ಪ್ರಾಣಿ; ಬಲು ಮೃದು ಹೃದಯವುಳ್ಳವನು ಎಂದು ಅವನನ್ನು ತಿಳಿದವರೆಲ್ಲರೂ ನುಡಿದುಕೊಳ್ಳುತಿದ್ದರು. ಪೆರಂಬೂರು ರೈಲ್ವೇ ಕಾರ್ಖಾನೆಯಲ್ಲಿ ಕೆಲಸ ದೊರಕುತ್ತದೆಂದು ಅವನಿಗೆ ತಿಳಿಯ ಬಂದಿತು. ಆದರೆ ಅದು ಬೇಡವೆಂದು ಅವನ ಮಿತ್ರರುಗಳು ತಡೆದರು. ಏಕೆಂದರೆ ಅಲ್ಲಿ ಕೆಲಸಮಾಡಲು ಬಲಿಷ್ಠವಾದ ದೇಹ ಬೇಕು ಯಾವಾಗಲೂ ಕಬ್ಬಿಣದ ಕೂಡ ಹೊಡೆದಾಡುತ್ತಿರಬೇಕಾದರೆ, ದೇಹವೂ ತಕ್ಕಮಟ್ಟಿಗೆ ಕಬ್ಬಿಣದ ಹಾಗೆಯೇ ಇರಬೇಕು. " ಫೂ " ಎಂದು ಊದಿದರೆ ಸಾಕು, ರಾಘು ತೂರಿಕೊಂಡು ಹೋಗಿ ಬೀಳುವ ಪರಿಸ್ಥಿತಿಯಲ್ಲಿದ್ದನು. ಅವನಿಗೆ ಸುತ್ತಿಗೆಯೆತ್ತುವಷ್ಟು, ಸ್ಕ್ರೂ ತಿರುಗಿಸುವಷ್ಟು ಬಲ ವಾದರೂ ಇದೆಯೇ ? ಅವನಿಗಾಗಿ ಮರುಕಪಟ್ಟ ಯಾರೋ ಅವನ ಮಿತ್ರರೊಬ್ಬರು ಗುಜರಾತಿ ಸೇಠ್ ಅಂಗಡಿಯೊಂದರಲ್ಲಿ ಅವನಿಗೆ ಕೆಲಸ ದೊರಕಿಸಿಕೊಟ್ಟರು.

ರಾಘುವಿನ ಧಣಿಯ ಹೆಸರು ಮುಕುಂದಲಾಲ್ ಪ್ಯಾರೆ ಲಾಲ್ ರಾಥೆವಾಲಾ ಎಂದು. ನಗನಟ್ಟುಗಳನ್ನು ಒತ್ತೆಗೆ ಇಟ್ಟು ಕೊಂಡು, ಅಧಿಕ ಬಡ್ಡಿಗೆ ಹಣಕೊಟ್ಟು, ಲಾಭ ಸಂಪಾದಿಸು ವುದೇ ಸೇಠಿನ ವ್ಯಾಪಾರ. ಅಂಗಡಿ ಹೊರಗೆ ಚಿಕ್ಕದಾಗಿ ಕಾಣು ತಿದ್ದರೂ, ಅವನಿಗೆ ಅಪಾರ ಲಾಭ ಸಿಕ್ಕುತ್ತಿತ್ತು. ಹಾಗಲ್ಲ ದಿದ್ದರೆ ಅವನು ಮದರಾಸಿನಂಥ ದೊಡ್ಡ ನಗರದಲ್ಲಿ ಎರಡು ಮೂರು ಮನೆಗಳನ್ನು ಕೊಳ್ಳಲಾಗುತಿತ್ತೇ! ರಾಘುವಿಗೆ ಇಲ್ಲಿ ಯಾವ ಕೆಲಸವೆಂಬುದು ನಿಷ್ಕರ್ಷೆಯಾಗಲಿಲ್ಲ. ಅಂದರೆ ಅವನಿಗೆ ಎಲ್ಲ ಸೇರಿದ ಚೌಚೌ ಕೆಲಸವೆನ್ನಿ. ಲೆಕ್ಕ ಪತ್ರ ಬರೆಯುವುದು, ನಗತೂಕ ಮಾಡುವುದು, ಸೇಠಿನ ಮಗುವನ್ನು ಎತ್ತಿಕೊಂಡು ಹೋಗಿ ಮನೆಗೆ ಬಿಟ್ಟು ಬರುವುದು, ಸಮಯದಲ್ಲಿ ಮಾರ್ಕೆಟ್ಟಿಗೆ ಹೋಗಿ ಸಾಮಾನು ಹೊತ್ತು ಬರುವುದು, ಇವೆಲ್ಲ ಅವನ ಕಾರ್ಯ ಕ್ರಮದಲ್ಲಿ ಸೇರುತಿದ್ದುವು ಸಮಯದಲ್ಲಿ ಸೇಠ್ "ರಾಘು, ಸ್ವಲ್ಪ ಮನೆಗೆ ಹೋಗಿದ್ದು ಬಾ" ಎಂದರೆ, ಅವನು ಹೋದಾಗ ಸೇಠಿನ ಪತ್ನಿ ಅವನಿಂದ ಮನೆಗೆಲಸವನ್ನೆಲ್ಲವನ್ನು ಸಹ ಮಾಡಿಸಿ ಬಿಡುತಿದ್ದಳು. ಇದರಲ್ಲಿ ರಾಘುವಿಗೆ ಒಂದೇ ಒಂದು ತೃಪ್ತಿ ಯೆಂದರೆ ಸೇಠಿನ ಮಗು ಕಿಷನ್ನಿನ ಕೂಡ ಮುದ್ದಾಡುವುದು. ಮಗುವಿನ ಕೆನ್ನೆಯ ಮೇಲೆ ಮುತ್ತು ಸುರಿಸುತ್ತ, ಅವನು ರಮೇಶ ನನ್ನು ನೆನೆದುಕೊಳ್ಳುತಿದ್ದನು. ಕಾಲಕ್ರಮದಲ್ಲಿ ಈ ಮಗುವೇ ರಮೇಶನೆಂದು ಭಾವಿಸಿ, ಹೆಚ್ಚು ಪ್ರೀತಿಸಲಾರಂಭಿಸಿದನು. ರಾಘು ಸೇಠಿನ ಬಳಿ ಮೂರು ತಿಂಗಳ ಕಾಲ ಕಳೆದನು. ಮತ್ತೆ ಅವನಿಗೆ ದೇಹಕ್ಕೆ ಆಲಸ್ಯವಾಯಿತು. ಶರೀರದಾದ್ಯಂತ ಕಪ್ಪು ಕಪ್ಪಿಗೆ, ಮಚ್ಚೆಯ ಹಾಗೆ, ಏನೋ ಏಳಲಾರಂಭಿಸಿತು. ಈಗವ ನಿಂದ ಕೆಲಸಮಾಡಲು ಸಾಧ್ಯವಾಗಲಿಲ್ಲ. ಮತ್ತೆ ತನ್ನ ಗುಡಿಸಲಿಗೆ ಹಿಂದಿರುಗಿದನು. ಈಗವನು ಪ್ರೈವೇಟ್ ಡಾಕ್ಟರಲ್ಲಿ ಹೋಗಿ

ತೋರಿಸಿದನು. "ಸೋದರರೇ, ನಿಮಗೀಗ ಭಯಂಕರವಾದ ವ್ಯಾಧಿ ಕಾಣಿಸಿಕೊಂಡಿದೆ. ಇದು ಸ್ತ್ರೀ ಸಂಬಂಧದಿಂದ ಉತ್ಪನ್ನವಾದದ್ದು. ಇದನ್ನು ಗುಣಪಡಿಸಲು ಸಾವಿರಾರು ರೂಪಾಯಿಗಳು ವ್ಯಯಮಾಡಬೇಕು" ಎಂದರವರು. ಮೈಸೂರಿನಲ್ಲಿ ತಾನು ಲೀಲಾ ಜಾಲವಾಗಿ ಇದ್ದುದರ ಪರಿಣಾಮವಿದೆಂದು ಅವನು ತಿಳಿದುಕೊಂಡನು. ಮತ್ತೆ ಆಸ್ಪತ್ರೆಗೆ ಹೋಗಿ 'ಬೆಡ್'ನಲ್ಲಿ ಮಲಗಿಕೊಳ್ಳುವುದಕ್ಕೇನೋ ಅವನಿಗೆ ಮನಸ್ಸಾಗಲಿಲ್ಲ. ಮತ್ತೊಬ್ಬ ಡಾಕ್ಟರಲ್ಲಿಗೆ ಹೋಗಿ ತೋರಿಸಿದನು. "ಇದು ಭಯಂಕರ ವ್ಯಾಧಿ ಮಿಸ್ಟರ್, ಇನ್ನು ಸ್ವಲ್ಪ ದಿವಸದಲ್ಲೇ ಇದು ನಿಮ್ಮನ್ನು ಆಪುತಿ ತೆಗೆದುಕೊಳ್ಳುತ್ತದೆ. ಈ ವ್ಯಾಧಿಗೆ ದೊಡ್ಡ ದೊಡ್ಡ ಇಂಜಕ್ಷನ್‌ಸೆಲ್ಲ ಮಾಡಬೇಕಾಗುತ್ತದೆ. ನೀವು ಆಸ್ಪತ್ರೆಯಲ್ಲಿ ಹೋಗಿ "ಅಡ್ಮಿಟ್" ಆಗುವುದೇ ಒಳ್ಳೆಯದು" ಎಂದವರು ಅಭಿಪ್ರಾಯ ಸೂಚಿಸಿದರು. ರಾಘುವಿಗೆ ವ್ಯಾಧಿ ದಿನೇದಿನೇ ಹೆಚ್ಚುತ್ತ ಬಂದಿತು. ಚಿಕ್ಕದಾಗಿ ಕಾಣಿಸಿಕೊಂಡಿದ್ದ ಕಪ್ಪುಮಚ್ಚೆಗಳು, ಕ್ರಮೇಣ ದೊಡ್ಡದಾಗಿ ಮೂರುಕಾಸಿನ ಅಗಲಕ್ಕೆ, ಗುಂಡುಗುಂಡಾದುವು. ಅವನ ಶರೀರದಿಂದ ಏನೋ ಒಂದು ವಿಧವಾದ ದುರ್ವಾಸನೆ ಹೊರಡಲಾರಂಭಿಸಿತು. ಮೂಗು ದಪ್ಪಗಾಗಿರುವಂತೆ ಕಂಡು ಬಂದಿತು. ಸಹಿಸಲಾಗದಷ್ಟು ಸಂಕಟ, ಉರಿ. ರಾಘು ಒಂದು ದಿನ ರಿಕ್ಷಾದಲ್ಲಿ ಏರಿ ಕುಳಿತು ಮೆರೀನಾ ಬೀಚಿನಲ್ಲಿ ಬಂದಿಳಿದನು. ಸಂಜೆ ಐದು ಘಂಟೆಯ ಸಮಯ. ಕಡಲದಂಡೆಯ ಮಳಲಲ್ಲಿ ಹೋಗಿ ಅವನು ಕುಳಿತನು. ಸಾಗರದಿಂದ ಬೀಸುತಿದ್ದ ಆ ತಂಗಾಳಿ, ಕ್ಷಣಕಾಲ ಇವನ ಯಾತನೆಯನ್ನು ಕಡಿಮೆಮಾಡುವಂತಿದ್ದಿತು. ಸುರುಳು ಸುರುಳಿಯಾಗಿ ಸುತ್ತಿಕೊಂಡು ಬರುತಿದ್ದ ಅಲೆಯನ್ನು ನೋಡುತ್ತ ಅವನು ಕುಳಿತುಕೊಂಡನು. ಸಂಜೆಯ ವಾಯುಸೇವನೆಗೆಂದು ಸಾವಿರಾರು ಮಂದಿ ಅಲ್ಲಿಗೆ ಬಂದಿದ್ದರು;

ಇನ್ನೂ ಬರುತ್ತಲೇಯಿದ್ದರು. ವಿವಿಧ ಜನಗಳನ್ನೂ, ವಿವಿಧ ಉಡಿಗೆತೊಡಿಗೆಗಳನ್ನೂ, ನಾವಲ್ಲಿ ಕಾಣಬಹುದಾಗಿದ್ದಿತು. ಬಡವನಿಂದ ಹಿಡಿದು ಧನಿಕರವರೆಗೂ ಎಲ್ಲರೂ ಬರುತಿದ್ದರು. ಧನಿಕರುಗಳು ಕಾರಿನಿಂದಿಳಿದು, ಡ್ರೈವರನನ್ನು ಅಲ್ಲಿಯೇ ನಿಲ್ಲಿಸಿ, ತಾವು ಮರಳಿನಲ್ಲಿ ಕುಳಿತುಕೊಳ್ಳುತಿದ್ದರು. ಆಗತಾನೆ ವಿವಾಹವಾದ ಹೊಸದಂಪತಿಗಳು ವಿನೋದವಾಗಿ ಕುಳಿತುಕೊಂಡು, ತಮ್ಮನ್ನೂ ಅನಂತವಾದ ಆ ಸಾಗರವನ್ನೂ ಸಹ ಮರೆತು, ಪ್ರೇಮ ಸಂಬಂಧವಾದ ಮಾತು ಕತೆಗಳನ್ನಾಡಿಕೊಳ್ಳುತಿದ್ದರು. ಮಾರ್ವಾಡಿ ಹೆಂಗಸರುಗಳು ತಲೆತುಂಬ ಮುಸುಕುಹಾಕಿಕೊಂಡು ಝುಳಕ್ ಝುಳಕ್ ಎನ್ನಿಸುತ್ತ ನಡೆಯುತಿದ್ದರು. ಕಾಲೇಜು ವಿದ್ಯಾರ್ಥಿಗಳು ಗುಂಪುಗುಂಪಾಗಿ ಕುಳಿತು ಏನೇನೆಲ್ಲ ಹರಟೆ ಹೊಡೆಯುತಿದ್ದರು. ಪುಟ್ಟ ಬಾಲಕರುಗಳು ಕರೆಯಲ್ಲಿ, ತಮ್ಮ ಪೈಜಾಮುವನ್ನು ಎರಡೂ ಕೈಗಳಿಂದ ಎತ್ತಿಹಿಡಿದುಕೊಂಡು, ಅಲೆ ತಮ್ಮ ಬಳಿ ಬರುವವರೆಗೂ ಕಾದಿದ್ದು, ಅದು ನೊರೆಯ ಸಹಿತ ಬಂದು ದಡಕ್ಕೆ ಅಪ್ಪಳಿಸುವಾಗ ಹಿಂದಕ್ಕೆ ಸರಿದು, ಓಡಿ ಹೋಗಿ ಕೇಕೆಹಾಕುತಿದ್ದರು. ಆಗ ಒಂದೊಂದು ಸಮಯದಲ್ಲಿ ಅವರ ಬಟ್ಟೆಬರೆಗಳೆಲ್ಲ ಒದ್ದೆಯಾಗುತಿದ್ದುವು. ಕಡಲೆ ಮಾರುವ ಹುಡುಗರುಗಳು ಕಟ್ಟನ್ನು ಹಿಡಿದುಕೊಂಡು ಕೂಗಾಡುತ್ತ ಓಡಾಡುತಿದ್ದರು. ದೂರದೂರಕ್ಕೆ ಬೆಸ್ತರುಗಳು, ದೋಣಿಯನ್ನು ಮೀಂಟಿ, ಬಲೆ ತೆಗೆದುಕೊಂಡು, ಮೀನು ಹಿಡಿಯಲು ಹೋಗುತಿದ್ದರು. ಅಲೆ ಒಂದು ತಡವೆ ಮೇಲಕ್ಕೆದ್ದು ಮತ್ತೆ ಶಾಂತವಾದಾಗ, ಆ ದೋಣಿಗಳೆಲ್ಲ ಮುಳುಗಿಕೊಂಡುವೇನೊ ಎಂದು ನಮಗಂಜಿಕೆ; ಆದರೆ ಅದು ಹಾಗಲ್ಲ. ಅವರುಗಳೆಲ್ಲ ಸದಾ ಈ ವೃತ್ತಿಯಲ್ಲೇ ಜೀವಿಸುವವರು. ನೀರಿನಲ್ಲೇ ಅವರಿಗೆ ವಾಸವೆಂದರೂ ಅತಿಶಯೋಕ್ತಿಯಾಗಲಾರದು. ಅವರು ಈ ಸಾಗರದ ಅಬ್ಬರಕ್ಕೇನೂ ಮಣಿಯುವವರಲ್ಲ. ಈಗ ಬೆಳದಿಂಗಳು

ಹಾಲಿನ ಹಾಗೆ ಚೆಲ್ಲಿ, ವಿದ್ಯುದ್ದೀಪಗಳ ಪ್ರಭೆಯನ್ನೂ ಕಡಿಮೆ ಮಾಡಿತ್ತು. ನೀರಿನಮೇಲೆ ಬೆಳದಿಂಗಳು ಚೆಲ್ಲಿದಾಗ, ಆ ರಮಣೀಯವಾದ ನೋಟವನ್ನು ನೋಡಲು, ನಮಗೆ ಎರಡು ಕಣ್ಣುಗಳೂ ಸಾಕಾಗುತ್ತಿರಲಿಲ್ಲ. ಈಗ ಏಳುಘಂಟೆ ಹೊಡೆಯಿತು. ಎಲ್ಲರೂ ತಮ್ಮತಮ್ಮ ಸ್ವಗೃಹಗಳಿಗೆ ಹಿಂದಿರುಗಲಾರಂಭಿಸಿದರು. ರಾಘು ಸುಮ್ಮನೆ ಕಣ್ಣುಮುಚ್ಚಿಕೊಂಡೇ ಕುಳಿತಿದ್ದನು. ಅವನೇನು ಧ್ಯಾನದಲ್ಲಿ ಮುಳುಗಿದ್ದನೋ ಏನೋ? ಈಗವನೂ ಎದ್ದನು. ಏನೋ ಅವನಿಗೆ ಮನಸ್ಸಾಯಿತು. ಕರೆಗೆ ಹೋಗಿ ನಿಂತನು. ಒಂದೆರಡು ನಿಮಿಷಗಳು ಕಳೆದನಂತರ ಇನ್ನೂ ಸ್ವಲ್ಪ ಮುಂದೆ ಹೋದನು. ಮೊದಲು ಕಣಕಾಲು, ಆಮೇಲೆ ಮೊಣಕಾಲು, ಅನಂತರ ನಡು, ಈಗ ಕತ್ತು ಆಳದವರೆಗೂ, ಮೆಲ್ಲ ಮೆಲ್ಲಗೆ ಅವನು ನೀರಿನಲ್ಲಿಳಿದನು. ದೊಡ್ಡದೊಂದು ಅಲೆ ಹಾದು ಬಂದು ಈಗವನನ್ನು ಮುಳುಗಿಸಿತು. ಅವನೀಗ ನಮಗೆ ಕಾಣದಂತೆ ಅದೃಶ್ಯನಾದನು.

## ೭೨

ರಮೇಶನಿಗೀಗ ಹದಿನೆಂಟು ವರ್ಷಗಳು ಕಳೆದಿವೆ. ಅವನೀಗ ತುಂಬು ಯೌವನದಲ್ಲಿದ್ದಾನೆ. ಬಿ. ಎ. ಡಿಗ್ರಿ ಪಡೆದು, ಕಾಲೇಜಿನಿಂದವನು ಹೊರಬಂದಿದ್ದಾನೆ. ಲಕ್ಷ್ಮಿಗೆ ಅಪರಿಮಿತಾನಂದ. ತನ್ನ ಮಗನ ರೂಪು ಲಾವಣ್ಯದಲ್ಲಿ, ಅವನ ಆಟ ಪಾಠದಲ್ಲಿ, ಮಾತುಕತೆಯಲ್ಲಿ, ತನ್ನ ಪತಿಯ ಚಿಂತೆಯನ್ನು ಸ್ವಲ್ಪ ಸ್ವಲ್ಪವಾಗಿ ತಗ್ಗಿಸಿಕೊಳ್ಳಲು ಪ್ರಯತ್ನಿಸುತಿದ್ದಾಳೆ. ಅವಳೀಗ ಯಾವಾಗಲೂ ಮುತ್ತೈದೆಯೇ. ರಾಘು ಎಲ್ಲೋ ಇರಬೇಕೆಂದು ಅವಳನ್ನೂ ಎಣಿಸಿಕೊಂಡಿದ್ದಾಳೆ. ಅವಳ ಜೀವಮಾನವಿರುವವರೆಗೂ ಇನ್ನವಳು ಸುಮಂಗಲಿಯಂತೆಯೇ ಕಾಲ ತಳ್ಳುತ್ತಾಳೆ.

ಪತಿ ಕಟ್ಟಿದ ತಾಲಿ ಎದೆಯಲ್ಲಿ ಇನ್ನೂ ಇದೆ. ಅದನ್ನವಳು ತೆಗೆಯುವಹಾಗಿಲ್ಲ. ಈಗಲೂ ಅವಳು ದೊಡ್ಡದಾಗಿ ಕುಂಕುಮ ಇಟ್ಟುಕೊಳ್ಳುತ್ತಾಳೆ. ರಾಘು ಈ ವಿಧದಲ್ಲಿ ಅವಳಿಗೆ ಬಹಳ ಉಪಕಾರಮಾಡಿದನು. ಈಗ ಶಾಮರಾಯರೂ ಬಲು ಮುದುಕರು. ಜಾನಕಮ್ಮನವರು ಅಡಗೂಲಜ್ಜಿಯಾಗಿದ್ದಾರೆ. ತೊಟ್ಟು ಸಹ ಮಾಗಿ, ಇನ್ನೇನು ಹಣ್ಣು ಕೆಳಗೆ ಬೀಳುವ ಸಮಯ. ಅವರ ಒಡನಾಡಿಗಳೆಲ್ಲ ಸಾಮಾನ್ಯವಾಗಿ ಮಣ್ಣುಗೂಡಿದ್ದಾರೆ. ಕುಟ್ಟಪ್ಪ ತೀರಿಕೊಂಡು ಒಂಭತ್ತು ವರ್ಷಗಳು ಸಂದು ಹೋದವು. ಮೊಮ್ಮಕ್ಕಳು ಕೈಹಿಡಿಯುವುದನ್ನು ನೋಡಿ ಕಣ್ಮುಚ್ಚಬೇಕೆಂದು ಶಾಮರಾಯರ ಜಾನಕಮ್ಮನವರ ಹಂಬಲ. ಮುದುಕ ಮುದುಕಿಯರ ಆಸೆಯನ್ನು ನೆರವೇರಿಸಲು ರಾಮು ಈಗ ತ್ವರಿತವಾಗಿ ಕೆಲಸ ಕಾರ್ಯ ಮಾಡಲಾರಂಭಿಸಿದನು. ಪತಿ ಇಲ್ಲವಲ್ಲಾ ಎಂಬ ಚಿಂತೆ ಲಕ್ಷ್ಮಿಗಿದ್ದರೂ ಈಗವಳಿಗೆ ಒಂದು ಹೊಸ ಆನಂದ ಲಭಿಸಿದೆ. ಮೊನ್ನೆತಾನೆ ರಮೇಶ್–ಪದ್ಮಾವತಿಯರ ವಿವಾಹ ಅತಿ ವಿಜೃಂಭಣೆಯಿಂದ ನೆರವೇರಿತು.

---

# ನೌಕಾಘಾತ

ಇದು ರವೀಂದ್ರನಾಥ ಠಾಕೂರರ ಜನಪ್ರಿಯ ಕಾದಂಬರಿಗಳಲ್ಲೊಂದು. ಠಾಕೂರರು (೧೮೬೧-೧೯೪೧) ಬಂಗಾಳದ ಪ್ರಮುಖ ಕವಿಗಳು, ಇಂಡಿಯಾ ದೇಶಕ್ಕೆ ಕೀರ್ತಿ ತಂದ ವಿಶ್ವ ಕವಿಗಳು. ಅವರು ಮಹಾಕವಿಗಳು ಮಾತ್ರವೇ ಅಲ್ಲ; ಅತ್ಯುತ್ತಮ ಕಥೆಗಾರರೂ ಕಾದಂಬರೀ ಲೇಖಕರೂ ಆಗಿದ್ದಾರೆ. ಅವರ 'ನೌಕಾಘಾತ' ಅನಿರೀಕ್ಷಿತವಾದ ಘಟನೆಗಳ ಆಕರ್ಷಕವಾದ ಜೋಡಣೆಯಿಂದ ಯುವಕರ ಮನಸ್ಸನ್ನು ಸೆಳೆಯುತ್ತದೆ.

ಬಿರುಗಾಳಿಯ ಹೊಡೆತಕ್ಕೆ ಸಿಕ್ಕು ನೌಕೆ ನದಿಯಲ್ಲಿ ಮುಳುಗಿದಾಗ ಮದುವೆಯಿಂದ ಹಿಂದಿರುಗುತ್ತಿದ್ದ ಜನ ನೀರಿನ ಪಾಲಾಗುತ್ತಾರೆ. ರಮೇಶ ಮಾತ್ರ ಪ್ರವಾಹದಿಂದ ಕೊಚ್ಚಿಬಂದು ದಡದಲ್ಲಿ ಬಿದ್ದು ಎಚ್ಚತ್ತಾಗ ಅದೇ ಬಗೆಯ ಅಪಘಾತಕ್ಕೊಳಗಾದ ಕಮಲೆಯನ್ನು ಕಂಡು, ಅವಳನ್ನು ತನ್ನ ಹೆಂಡತಿಯೆಂದು ಭಾವಿಸಿ ತನ್ನೊಡನೆ ಕರೆದೊಯ್ಯುತ್ತಾನೆ. ಆಕೆಯೂ ಅವನನ್ನು ತನ್ನ ಪತಿಯೆಂದೇ ತಿಳಿಯುತ್ತಾಳೆ. ಸ್ವಲ್ಪಕಾಲದ ಮೇಲೆ ಆಕೆ ತನ್ನ ಪತ್ನಿಯಲ್ಲವೆಂದು ತಿಳಿಯುತ್ತದೆ. ಆ ವಿಷಮ ಸನ್ನಿವೇಶದಲ್ಲಿ ಅವರಿಬ್ಬರು ಒಟ್ಟಾಗಿದ್ದು ಮರ್ಯಾದೆಯಿಂದ ಬಾಳುವುದು ಹೇಗೆ? ದಿಕ್ಕಿಲ್ಲದ ಆಕೆ ಬೇರೆಯಾಗುವುದಾದರೂ ಎಂತು? ಈ ವಿಚಿತ್ರ ಪರಿಸ್ಥಿತಿಯಿಂದ ಉಂಟಾದ ತೊಡಕುಗಳ ಪರಂಪರೆಯಿಂದ ಘಟನೆಗಳು ಹೆಜ್ಜೆಹೆಜ್ಜೆಗೂ ಕುತೂಹಲವನ್ನು ಕೆರಳಿಸುತ್ತಾ ಸಾಗುತ್ತವೆ. ಕಡೆಯಲ್ಲಿ ಕಮಲೆ ಕಷ್ಟಗಳಿಂದ ಪಾರಾಗಿ ತನ್ನ ಪತಿಯನ್ನು ಸೇರುವ ಸ್ವಾರಸ್ಯವಾದ ಈ ಕಥೆ ಶ್ರೀಮತಿ ಸಾವಿತ್ರಮ್ಮನವರ ಸರಳವಾದ ಅನುವಾದದಲ್ಲಿ ಹೃದಯಂಗಮವಾಗಿ ನಡೆದು ಬಂದಿದೆ. **ಬೆಲೆ ರೂ. ೧-೪-೦**

**ಮೊದಲನೆಯ ಕೈ ಹೊತ್ತಗೆ**

**ಪುರುಮದುವೆ** : : **ಬೆಲೆ ೧-೪-೦**

---

**ಕಾವ್ಯಾಲಯ : ಪ್ರಕಾಶಕರು : ಮೈಸೂರು**